# ಅನಿಸಿಕೆ-ಅನುಭವ

## ಅಂಕಣ ಬರಹಗಳು

ಡಾ. ಪಿ. ವಿ. ನಾರಾಯಣ








# ಅನಿಸಿಕೆ-ಅನುಭವ

(ಅಂಕಣ ಬರಹಗಳು)

ಡಾ. ಪಿ. ವಿ. ನಾರಾಯಣ




ಸಪ್ನ ಬುಕ್ ಹೌಸ್®

3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - 560 009

ದೂರವಾಣಿ : 40114455

**Anisike-Anubhava :** A collection of column writings by **Dr. P. V. Narayana,** published by **Sapna Book House (P) Ltd.,** R.O. # 11, 3rd Main Road, Gandhinagar, Bangalore - 9. Tel. : 40114455.

[K.B. 2042]

**ISBN : 978-81-280-2207-4**



**ಪ್ರಥಮ ಮುದ್ರಣ : ನವೆಂಬರ್ 2013**

| | |
|---|---|
| ಪುಟಗಳು : viii + 178 = 186 | ಪ್ರತಿಗಳ ಸಂಖ್ಯೆ : 1000 |
| ಬೆಲೆ : ₹ 110/- | Paper Used : 18.6 Kg D/D (70 gsm) N.S. Maplitho<br>Book Size : 1/8th Demy |

ಹಂಚಿಕೆದಾರರು : **ಬುಕ್ಸ್ ಇಂಟರ್‌ನ್ಯಾಷನಲ್**
ನಂ. 13, ಕುಮಾರ ಪಾರ್ಕ್ ಈಸ್ಟ್
ಹೈಗ್ರೌಂಡ್ಸ್, ಬೆಂಗಳೂರು – 560 001

ಅಕ್ಷರ ಜೋಡಣೆ : ದಿವ್ಯ ಪ್ರಿಂಟ್ರಾನಿಕ್ಸ್, ಬೆಂಗಳೂರು

ಮುಖಪುಟ ವಿನ್ಯಾಸ : **ಶ್ರೀಪಾದ,** ಬೆಂಗಳೂರು

ಮುದ್ರಣ : ರವಿ ಗ್ರಾಫಿಕ್ಸ್, ಬೆಂಗಳೂರು

## ಲೇಖಕನ ಮಾತು

ಈಗ್ಗೆ ಕೆಲವು ವರ್ಷಗಳಿಂದ ಸಪ್ನ ಬುಕ್ ಹೌಸ್‌ನವರು ರಾಜ್ಯೋತ್ಸವ ದಿನದಂದು ಅದು ಎಷ್ಟನೆಯ ರಾಜ್ಯೋತ್ಸವ ದಿನವೋ ಅಷ್ಟು ಸಂಖ್ಯೆಯ ಕನ್ನಡ ಪುಸ್ತಕಗಳನ್ನು ಹಿರಿಯ ಕಿರಿಯ ಲೇಖಕರಿಂದ ಬರೆಯಿಸಿ ಸಂಭ್ರಮದ ಒಂದು ಸಮಾರಂಭದಲ್ಲಿ ಸಡಗರದ ನಡುವೆ ಬಿಡುಗಡೆಗೊಳಿಸುವ ಸಂಪ್ರದಾಯವೊಂದನ್ನು ನಡೆಸಿಕೊಂಡು ಬರುತ್ತಿದ್ದಾರೆ. ಅಂತಹ ಪ್ರತಿ ಸಮಾರಂಭದ ಹೊತ್ತಿಗೆ ವಿಶ್ವಾಸದಿಂದ ನನ್ನ ಪುಸ್ತಕವೊಂದನ್ನೂ ಹೊರತಂದಿದ್ದಾರೆ. ಈ ವರ್ಷವೂ ಎಂದಿಂತೆ ಕನ್ನಡ ಪುಸ್ತಕಗಳನ್ನು ಪ್ರಕಟಿಸುವ ತಮ್ಮ ಯೋಜನೆಯಲ್ಲಿ ನಾನೂ ಹೊಸ ಪುಸ್ತಕವೊಂದನ್ನು ನೀಡುವ ಮೂಲಕ ಸಹಕರಿಸಬೇಕೆಂದು ಅದರ ಕನ್ನಡ ವಿಭಾಗದ ವ್ಯವಸ್ಥಾಪಕರಾದ ಶ್ರೀ ಆರ್ ದೊಡ್ಡೆಗೌಡರು ವಿಶ್ವಾಸದಿಂದ ಕೇಳಿದರು. ಅದಕ್ಕೆ ಕಟ್ಟುಬಿದ್ದು ಈ ಹೊತ್ತಗೆಯನ್ನು ಹೊರತರುತ್ತಿದ್ದೇನೆ.

ಅನೇಕ ವರ್ಷಗಳ ಹಿಂದೆ 'ಈ-ಭಾನುವಾರ' ವಾರಪತ್ರಿಕೆಗಾಗಿ ನಾನು ಪ್ರತಿವಾರವೂ ಬರೆಯುತ್ತಿದ್ದ ಪುಟ್ಟ ಲೇಖನಗಳ ಸಂಕಲನ ಇದು. ಸುಮಾರು ಒಂದು ವರ್ಷಕ್ಕಿಂತ ಹೆಚ್ಚಿನ ಕಾಲ ಅಂಕಣಲೇಖನಗಳನ್ನು ಬರೆದು ನಾನೇ ನಿಲ್ಲಿಸಿದೆ; ಸಂಪಾದಕರು ಅದನ್ನು ಮುಂದುವರೆಸಲು ಹೇಳಿದರೂ ನಾನು ಹಾಗೆ ಮಾಡಲಿಲ್ಲ. ಇವುಗಳನ್ನು ನನ್ನಿಂದ ಬರೆಯಿಸಿದ ಮಾನ್ಯ ಪತ್ರಕರ್ತ ಮಿತ್ರರಾದ ಶ್ರೀ ಮಹದೇವ ಪ್ರಕಾಶ್ ಅವರಿಗೆ ನಾನು ಋಣಿಯಾಗಿರಬೇಕು. ಅವರಿಂದ ಒತ್ತಾಯ ಬರದಿದ್ದರೆ ನಾನು ಈ ಕೆಲಸವನ್ನು ಮಾಡುತ್ತಿರಲಿಲ್ಲ. ಆ ಕಾಲದಲ್ಲಿ ಬರೆದ ಲೇಖನಗಳೆಲ್ಲ ಇಲ್ಲಿ ಸೇರಿಲ್ಲ, ಆದರೆ ಬಹು ಪಾಲು ಸೇರಿವೆ. ಕಾಲಕಾಲಕ್ಕೆ ಸಮಾಜ-ಸಂಸ್ಕೃತಿ-ಸಾಹಿತ್ಯಗಳ ಕುರಿತಾದ ನನ್ನ ಆಲೋಚನೆಗಳನ್ನೆಲ್ಲ ಇಲ್ಲಿ ಹರಿಯಬಿಟ್ಟಿದ್ದೇನೆ.

ಈ ಲೇಖನಗಳನ್ನು ಪುಸ್ತಕ ರೂಪವಾಗಿ ಹೊರತರಲು ಮುಂದಾದ ಮೆ। ಸಪ್ನ ಬುಕ್ ಹೌಸ್‌ನ ಮಾಲೀಕರಿಗೆ ಹಾಗೂ ಶ್ರೀ ದೊಡ್ಡೆಗೌಡರಿಗೆ ನಾನು ಕೃತಜ್ಞನಾಗಿದ್ದೇನೆ.

ನವೆಂಬರ್ ೧, ೨೦೧೩ **ಪಿ.ವಿ. ನಾರಾಯಣ**

# ಪರಿವಿಡಿ


೧. ಐಟಿ ಉದ್ಯಮಕ್ಕೆ ಇಷ್ಟೊಂದು ಪ್ರಾಮುಖ್ಯ ಯಾಕೆ? ೧
೨. ಈಗ ಬದಲಾಗಿದೆಯೇ? ೫
೩. ಕನ್ನಡ ರಾಷ್ಟ್ರೀಯತೆ ೮
೪. ಶಾಸ್ತ್ರೀಯ (ಭಾಷೆ) ರಾಜಕೀಯ ೧೧
೫. ಪ್ರಕೃತಿ-ಸಂಸ್ಕೃತಿ ೧೪
೬. ಕಾಲ ಕೆಡುತ್ತಿ(ತ್ತ)ದೆಯೇ? ೧೬
೭. ಹಳಗನ್ನಡ – ಹೊಸ ಪೀಳಿಗೆ ೨೦
೮. ಚಿಂತೆ – ಚಿಂತನೆ ೨೩
೯. ಕನ್ನಡ ಬಳಕೆ, ಉಳಿಕೆ ೨೬
೧೦. ಶಿವನಿಗೆ ಕೋರ್ಟ್ ಮಾರ್ಷಲ್ ೨೯
೧೧. ಕುಸುಮಕೋಮಲ; ರಣಕೋಲಾಹಲ ೩೨
೧೨. ಶಿಕ್ಷಣ ಎಂಬ ಪ್ರಕ್ರಿಯೆ ೩೫
೧೩. 'ದೊಡ್ಡವರ' ಪರಿ ೩೮
೧೪. 'ಸುವರ್ಣ' ಕರ್ನಾಟಕ ೪೧
೧೫. ಮೇ(ಸೋ)ಲು ಸೇತುವೆಗಳು! ೪೪
೧೬. ಮರಣೋತ್ತರ ಪ್ರಶಸ್ತಿಗಳು ೪೭
೧೭. ಸುಳ್ಳು ಎಂಬ ಪುಣ್ಯಕಾರ್ಯ! ೫೦
೧೮. 'ಕೋಪವೆಂಬುದನರ್ಥ ಸಾಧನ' ಹೌದೇ? ೫೩
೧೯. ಆಧ್ಯಾತ್ಮಿಕತೆ ೫೬
೨೦. ಓಡಿ ಬಂದ ಆನೆ! ೫೯
೨೧. ಹೊಸ ಸರ್ಕಾರ : ಕನ್ನಡಪರ ಕರ್ತವ್ಯಗಳು ೬೨
೨೨. ಸಾಂಕೇತಿಕತೆ – ವಾಚ್ಯತೆ ೬೫
೨೩. 'ನಿಮ್ಮ ಊರು ಯಾವುದು?' ೬೮

೨೪. 'ಮೇಲ್ಮನೆ' ಎಂಬ ಪುನರ್ವಸತಿ ನಿಲಯ ೭೧
೨೫. 'ಲಂಚಲುಂಚಾನಿಶಾಚರ' ೭೪
೨೬. 'ತಾನಿಟ್ಟ ಬೇತಾಳ ತನ್ನ ತಿಂದಿತು' ೭೭
೨೭. ಪ್ರತಿಯೊಬ್ಬರೂ ವಿಶಿಷ್ಟರೇ ೮೦
೨೮. ಸಾಮಾನ್ಯನ ಕನ್ನಡಪ್ರಜ್ಞೆಯ ಪ್ರತೀಕ ೮೩
೨೯. ಕಣ್ಣ ಮುಂದೇ ಬೆಳೆದ ದೇವರು ೮೯
೩೦. 'ಚಟ'ವಟಿಕೆ ೯೨
೩೧. ಊಡದ ಆವು, ಉಣ್ಣದ ಕರು! ೯೫
೩೨. ಮೀಸಲಾತಿಯ ಪ್ರಶ್ನೆ ೯೮
೩೩. ಬದುಕ ಕಟ್ಟುವ ಬದಲು... ೧೦೧
೩೪. ಸಂದ ಕಾಲಗುಣವೋ ನಿಂದ ನೆಲದ ಗುಣವೋ ೧೦೪
೩೫. ನಾಯಕತ್ವದ ಮೂರು ಬಗೆಗಳು ೧೦೭
೩೬. ಸಾವ ಗೆಲ್ಲುವ ತವಕ ೧೧೦
೩೭. ಕನ್ನಡ ಅನಕ್ಷರಸ್ಥ ಸಚಿವ ೧೧೩
೩೮. ಮೌಢ್ಯಜಾಲ ೧೧೬
೩೯. ಸದ್ದಿನ ಗುದ್ದು ೧೧೯
೪೦. ಬದುಕಿನ ಹದ ೧೨೨
೪೧. ವಾರದ ವೈವಿ(ರು)ಧ್ಯ ೧೨೫
೪೨. ರಾಷ್ಟ್ರಹಿತದ ಅತಿರೇಕ ೧೨೮
೪೩. ಧರ್ಮಸೂಕ್ಷ್ಮಗಳು ೧೩೧
೪೪. ಮದುವೆ ಮದುವೆ ಮದುವೆ ೧೩೪
೪೫. ಸಾವು ಎಂಭ ಚೋದ್ಯ ೧೩೭
೪೬. ವ್ಯಾಮೋಹ – ಭಯ ೧೪೦
೪೭. ಆಸೆಕೋರತನದ ಚಾಚುತೋಳುಗಳು ೧೪೩
೪೮. ಅಪಾಯಕೋಟಿ ೧೪೬
೪೯. ಮತ್ತೆ ಮಧ್ಯಮವರ್ಗ ೧೪೯
೫೦. ಹೊರಟ್ಟೆ, ಗಟ್ಟಿ! ೧೫೨

೫೧. ವನದಹನ ೧೫೫
೫೨. ಬಂದ್ ಮಾಡಬೇಕು ೧೫೮
೫೩. ರಾಷ್ಟ್ರಕವಿ ಪಟ್ಟ ೧೬೧
೫೪. ಅರಸರಿಯದ ಬಿಟ್ಟಿ ೧೬೪
೫೫. ಸುವರ್ಣ(ಸಂ)ಭ್ರಮ ೧೬೫
೫೬. ದೇಹವನ್ನು ಅಲ್ಲಾಡಿಸುವ ಬಾಲಗಳು ೧೭೦
೫೭. ಸ್ಪರ್ಶಸುಖ ೧೭೩
೫೮. ವ್ಯಕ್ತಿ ಪ್ರತಿರೂಪ ೧೭೬

# ಐಟಿ ಉದ್ಯಮಕ್ಕೆ ಇಷ್ಟೊಂದು ಪ್ರಾಮುಖ್ಯ ಯಾಕೆ?

ಬೆಂಗಳೂರಿನಲ್ಲಿ ತಮ್ಮ ಮುಂದುವರಿಕೆಗೆ ಆವಶ್ಯಕವಾದ ಮೂಲಸೌಕರ್ಯಗಳಿಲ್ಲವೆಂದೂ, ಹೀಗಾಗಿ ತಾವು ಬೇರೆಡೆಗೆ ಹೋಗುವುದು ಅನಿವಾರ್ಯವೆಂದೂ ಪದೇ ಪದೇ ಐಟಿ ಉದ್ಯಮಿಗಳು ಹೇಳಿಕೆಗಳನ್ನು ನೀಡುವುದೂ, ಸರ್ಕಾರ ಅವರ ಕಾಲುಹಿಡಿದು ಅವರಿಗೆ ಬೇಕೆನಿಸಿದ ಸೌಕರ್ಯಗಳನ್ನು ಒದಗಿಸುವುದೂ ನಡೆದೇ ಇದೆ. ಇಲ್ಲಿನ ರಸ್ತೆಗಳು ಸರಿಯಿಲ್ಲ, ಅದಿಲ್ಲ ಇದಿಲ್ಲ ಆದ್ದರಿಂದ ನವೆಂಬರ್‌ನಲ್ಲಿ ಬೆಂಗಳೂರಿನಲ್ಲಿ ನಡೆಯುವ ಐಟಿ ಮೇಳಕ್ಕೆ ತಾವು ಬಹಿಷ್ಕಾರ ಹಾಕುವುದಾಗಿಯೂ, ತಾವಾರೂ ಅದರಲ್ಲಿ ಪಾಲುಗೊಳ್ಳುವುದಿಲ್ಲವೆಂದೂ ಅವು ಇತ್ತೀಚೆಗೆ ಬೆದರಿಕೆ ಹಾಕಿದ್ದವು. ಯಥಾಪ್ರಕಾರ ಸರ್ಕಾರ ಬೆವರಿ ಅವರ ಜೊತೆ ಸಮಾಲೋಚನ ಸಭೆಯೊಂದನ್ನು ನಡೆಸಿ ಅವರ ಸೇವೆಗೆ ತಾನು ಕಟಿಬದ್ಧವಾಗಿರುವ ಹೇಳಿಕೆ ನೀಡಿದೆ. ಅಷ್ಟೇ ಅಲ್ಲ, ಸರೋಜಿನೀ ಮಹಿಷಿ ವರದಿಯ ಪ್ರಕಾರ ಇಲ್ಲಿನ ಉದ್ಯಮಗಳು ಕನ್ನಡಿಗರಿಗೆ ಇಂತಿಷ್ಟು ಉದ್ಯೋಗ ಒದಗಿಸಬೇಕೆಂಬ ತನ್ನ ನಿಲವನ್ನು ಸಡಿಲಿಸಿ, ಅದು ಬೇರೆಯವರಿಗೆ ಅನ್ವಯಿಸುವ ನಿಯಮವೆಂದೂ, ಐಟಿ ಉದ್ಯಮಕ್ಕೆ ಅದು 'ಅಪವಾದ'ವೆಂದೂ ಮುಖ್ಯಮಂತ್ರಿಗಳೇ ಹೇಳಿಬಿಟ್ಟಿದ್ದಾರೆ! ಆ ಉದ್ಯಮವು ಪ್ರವಾಹ ಸಂತ್ರಸ್ಥರ ನೆರವಿಗೆ ಒಂದು ಚಿಕ್ಕಾಸನ್ನೂ ನೀಡಿಲ್ಲವೆಂದು ಆಕ್ರೋಶ ವ್ಯಕ್ತಪಡಿಸಿದ್ದ 'ಲೋಹಿಯಾವಾದಿ' ಉಪ ಮುಖ್ಯಮಂತ್ರಿಗಳು, ನಮ್ಮ ರಾಜ್ಯದ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಐಟಿ ಉದ್ಯಮದವರು ಕ್ಯಾಂಪಸ್ ಇಂಟರ್‌ವ್ಯೂ ನಡೆಸುತ್ತಾರಾದ್ದರಿಂದ ಸ್ಥಳೀಯರಿಗೆ ಉದ್ಯೋಗ ನೀಡುವಂತೆ ಒತ್ತಾಯಿಸುವ ಪ್ರಶ್ನೆ ಉದ್ಭವಿಸದೆಂದು ತಮ್ಮ ರಾಗ ಬದಲಿಸಿ ಈಗ ಅವರಿಗೆ ಬೆಣ್ಣೆ ಹಚ್ಚ ತೊಡಗಿದ್ದಾರೆ. ಅದೇ ರೀತಿ ಕನ್ನಡಿಗರ ಸಭೆಗೆ ಹೋದಾಗಲೆಲ್ಲ ಸರೋಜಿನೀ ಮಹಿಷಿ ವರದಿ ಅನುಷ್ಠಾನಕ್ಕೆ ತಾವು ಬದ್ಧಕಂಕಣರೆಂದು ಹೇಳಿಕೊಳ್ಳುತ್ತ ತಿರುಗುತ್ತಿದ್ದ, ಐಟಿ ಉದ್ಯಮಿಗಳು ಕನ್ನಡಿಗರಿಗೆ ಉದ್ಯೋಗ ನೀಡುತ್ತಿಲ್ಲ, ಈ ಬಗ್ಗೆ ಸರ್ಕಾರ ನೋಟೀಸು ಜಾರಿ ಮಾಡಿದರೂ ಅವರದನ್ನು ಕಸದ ಬುಟ್ಟಿಗೆ ಎಸೆದಿದ್ದಾರೆ ಎಂಬಂತಹ ಮಾತುಗಳನ್ನು ಆಡುತ್ತಿದ್ದ ನಮ್ಮ ಕೈಗಾರಿಕಾ ಸಚಿವರೂ ಆದ ಹಣಕಾಸು ಮಂತ್ರಿಗಳು ಈಗ ಬುಡುಬುಡಿಕೆ ಯಾಡಿಸುತ್ತಿದ್ದಾರೆ.

ಬೆಂಗಳೂರಿನಲ್ಲಿ ತಮಗೆ ಬೇಕಾದುದು ಒದಗದಿರಲು ಇಲ್ಲಿನ ಮೇಯರ್ ಆಯ್ಕೆಯ ಕ್ರಮವೇ ಸರಿಯಿಲ್ಲ, ಐಟಿ ಆದರ್ಶಪುರುಷ ನಾರಾಯಣ ಮೂರ್ತಿಯಂತಹವರೊಬ್ಬರನ್ನು ಮೇಯರ್ ಮಾಡಬೇಕೆಂದೂ ಒಬ್ಬ ಬಿಟಿ ಉದ್ಯಮಿ ಸ್ವಲ್ಪಕಾಲದ ಹಿಂದೆ ಅಮೂಲ್ಯ ಸಲಹೆಯಿತ್ತಿದ್ದರು. ಇನ್ನು ಕೆಲವು ಕಾಲವಾದರೆ, ಚುನಾವಣಾ ಪದ್ಧತಿಯ ಮೂಲಕ ಜನಪ್ರತಿನಿಧಿಗಳನ್ನು ಆಯ್ಕೆ ಮಾಡಿ ಸರ್ಕಾರ ರಚಿಸಿ ಆಳುವ ಪರಿ ಸರಿಯಾದುದಲ್ಲ, ಮುಖ್ಯಮಂತ್ರಿಗಳೂ ಇತರ ಸಚಿವರೂ, ಮುಖ್ಯ ಆಡಳಿತಾಧಿಕಾರಿಗಳೂ ಐಟಿ ಉದ್ಯಮಿಗಳೇ ಆಗಿರಬೇಕು, ಚುನಾವಣೆಯೇ ಆಗುವುದಾದರೆ ಆ ಉದ್ಯಮಿಗಳು ಮಾತ್ರವೇ ಅಭ್ಯರ್ಥಿಗಳಾಗಲು ಅರ್ಹರೆಂಬಂತೆ ಕಾನೂನು ತಿದ್ದುಪಡಿಮಾಡಬೇಕೆಂದು ಒತ್ತಾಯಿಸುವುದು ಖಂಡಿತ ನಡೆಯುತ್ತದೆ, ಅನುಮಾನವಿಲ್ಲ. ಐಟಿ ಉದ್ಯಮದ ಬೆಳವಣಿಗೆಯೇ ದೇಶದ ಅಭಿವೃದ್ಧಿ ಎಂಬ ಈ ಅನಿಷ್ಟ ತಿಳಿವಳಿಕೆ ಯಾಕೆ ಬಂತು?

ಐಟಿ ಉದ್ಯಮಿಗಳಿಂದ ಸಾಕಷ್ಟು ಹಣರೂಪದ ಸಂಪತ್ತು ಉತ್ಪಾದನೆಯಾಗುತ್ತಿದೆ ಎಂಬುದೂ, ಸಾಕಷ್ಟು ಸಂಖ್ಯೆಯಲ್ಲಿ ಯುವಕರಿಗೆ ಉದ್ಯೋಗಗಳನ್ನು ನೀಡಿರುವುದೂ ನಿಜವಿರಬಹುದು, ಹಾಗೆಂದು ಅದೇ ಎಲ್ಲ ಎಂಬ ಭಾವನೆ ಆ ಗುಂಪಿನ ಜನರ ತಲೆಗೆ ಹೋಗುವಂತೆ ಮಾಡಿರುವ ತಪ್ಪು ಸರ್ಕಾರದ್ದೇ ಆಗಿದೆ. ಅದಕ್ಕೇ ಈಗ ಅವರು ಎಲ್ಲರ ಮೇಲೆ ಸವಾರಿ ಮಾಡಲು ಹೊರಟಿದ್ದಾರೆ. ಬೆಂಗಳೂರಿನ ರಸ್ತೆಗಳಲ್ಲಿ ಗುಂಡಿಗಳಿರಬಹುದಾದುದೂ, ಅದನ್ನು ರಿಪೇರಿ ಮಾಡಿಸಬೇಕಾದುದೂ ಸರಿಯೇ, ಆದರೆ ಐಟಿ ಉದ್ಯಮಿಗಳಿಗೂ ಅದರ ಉದ್ಯೋಗಿಗಳಿಗೂ ಬೇಕಾದುದೇ ಅತ್ಯಂತ ಆವಶ್ಯಕ ಎಂಬುದೂ, ಎಲ್ಲ ಅಭಿವೃದ್ಧಿ ಕೆಲಸಗಳನ್ನು ಅವರಿಗಾಗಿಯೇ ಮಾಡಬೇಕೆಂಬುದೂ ಶುದ್ಧ ಅವಿವೇಕ. ಆ ಉದ್ಯಮದಿಂದ ಒಂದಷ್ಟು ಹೆಚ್ಚಿಗೆ ತೆರಿಗೆಯೂ ಸರ್ಕಾರಕ್ಕೆ ಬರುತ್ತಿರಬಹುದು; ಆದರೆ ಅದರಿಂದ ಇಡೀ ಸಮಾಜ ಜೀವಿಸುತ್ತಿಲ್ಲ ಎಂಬುದನ್ನು ನಾವು ನೆನಪಿನಲ್ಲಿಡಬೇಕು.

ಆ ಜನರ ಓಡಾಟಕ್ಕೆ ಮತ್ತು ಸುಖಜೀವನಕ್ಕೆಂದು ಸಾವಿರಾರು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಮೂಲಸೌಕರ್ಯಗಳನ್ನು ಒದಗಿಸಲು ಸರ್ಕಾರ ಮುಂದಾಗಿರುವುದು ನನ್ನಂತಹ ಮಧ್ಯಮ ವರ್ಗದ ಪ್ರಜೆಯಲ್ಲಿ ಕೆಲವು ಮೂಲ ಪ್ರಶ್ನೆಗಳೇಳಲು ಕಾರಣವಾಗಿದೆ. ಎಲೆಕ್ಟ್ರಾನಿಕ್ ಸಿಟಿಯ ಕಡೆ ಈ ಉದ್ಯಮಪತಿಗಳು ಹಾಗೂ ಉದ್ಯೋಗಿಗಳು ಓಡಾಡಲು ಅನುಕೂಲವಾಗುವಂತೆ ಇರುವ ಮೇಲು ಸೇತುವೆಯ ಮೇಲೆ ಇನ್ನೊಂದು ಮೇಲುಸೇತುವೆಯ ನಿರ್ಮಾಣ ಮಾಡಲು ಸರ್ಕಾರ ಮುಂದಾಗಿದೆ; ನೈಸ್ ಕಂಪೆನಿಯ ಮೇಲುರಸ್ತೆ ಅಡ್ಡ ಬರುವುದರಿಂದ ಎಲೆಕ್ಟ್ರಾನಿಕ್ ಸಿಟಿಯ ಕಡೆಗಿನ ಈ ಐಟಿ ಮೇಲುಸೇತುವೆಯ ಎತ್ತರ ಮತ್ತಷ್ಟು ಏರಿಸಬೇಕೆಂಬ ತೀರ್ಮಾನವಾಗಿದೆಯಂತೆ. ಅಂದರೆ ಈ ಜನ ನೆಲಮಟ್ಟದಿಂದ ಆದಷ್ಟೂ ಮೇಲೆ ಇರುವುದನ್ನು, ಇರಬೇಕಾದುದನ್ನು ನಾವು ಒಪ್ಪಿಕೊಂಡಂತಾಗಿದೆ!

ಐಟಿ ವಲಯದಿಂದ ಸರ್ಕಾರಕ್ಕೆ ಬರುವ ಆದಾಯ ಹೆಚ್ಚು ಎಂಬ ಕಾರಣದಿಂದ ಅವರಿಗೆ ಮಾತ್ರ ಮೂಲಸೌಕರ್ಯಗಳನ್ನು ಒದಗಿಸಹೋಗಿರುವುದರಿಂದ ಬೆಂಗಳೂರಿನ ಜನಸಾಮಾನ್ಯನ ಬದುಕಿನ ಬವಣೆ ಹೆಚ್ಚಿದೆ. ಅಲ್ಲಿನ ಜನರ ಕೈಯಲ್ಲಿ ಹಣವಿರುವುದರಿಂದ ಅವರು ಇಲ್ಲಿ ಆವಶ್ಯಕ ವಸ್ತುಗಳ ಬೆಲೆ ಏರಿಕೆಗೆ ಕಾರಣರಾಗಿದ್ದಾರೆ; ಅವರು ಹಣ ಚೆಲ್ಲಿ ಚೆಲ್ಲಿ ಇಲ್ಲಿ ಮನೆ ಬಾಡಿಗೆ ಹೆಚ್ಚಲು, ನಿವೇಶನಗಳ ಬೆಲೆ ಗಗನವನ್ನು ಮುಟ್ಟಲು ಕಾರಣವಾಗಿದೆ. ಅವರಿಗಾಗಿ ನಮ್ಮ ಬಿಡಿಎ ನಿವೇಶನಗಳನ್ನೊದಗಿಸುವ ಕೈಂಕರ್ಯ ಹೊತ್ತು, ನಗರದ ಹಸಿರುವಲಯವನ್ನೂ ಹಾಳುಮಾಡಿ ಬಡಾವಣೆಗಳನ್ನು ನಿರ್ಮಿಸಲು ಮುಂದಾಗುತ್ತದೆ. ಅವರಿಂದ ಇಲ್ಲಿನ ವಾಹನಗಳ ಸಂಖ್ಯೆ ವಿಪರೀತ ಹೆಚ್ಚಿ ಇಲ್ಲಿನ ರಸ್ತೆಗಳು ಹದಗೆಡುತ್ತಿವೆ. ಅವರಿಗಾಗಿ ಮೇಲುಸೇತುವೆಗಳನ್ನು ನಿರ್ಮಿಸುವುದರಿಂದ ರಸ್ತೆಗಳು ಉತ್ತಮಗೊಳ್ಳುತ್ತಿರಬಹುದಾದರೂ, ಪಾದಚಾರಿ ರಸ್ತೆಗಳು ಕಣ್ಮರೆಯಾಗುತ್ತಿವೆ; ರಸ್ತೆಗಳನ್ನು ದಾಟಲಾಗದಷ್ಟು ವಾಹನ ದಟ್ಟಣೆ ಬಡಾವಣೆಗಳಲ್ಲೂ ಹೆಚ್ಚಿದೆ; ವಾಹನ ನಿಲುಗಡೆಗೆ ಎಲ್ಲ ಕಡೆಯೂ ತೊಂದರೆಯಾಗುತ್ತಿದೆ. ಈ ಉದ್ಯಮದಲ್ಲಿ ಹೊರಗಡೆಯವರಿಗೇ ಮೊದಲ ಮಣೆಯಾಗಿರುವುದರಿಂದ ವಲಸಿಗರ ಸಂಖ್ಯೆ ದಿನೇ ದಿನೇ ಏರುತ್ತಿದ್ದು ಇನ್ನೂ ಹೆಚ್ಚು ವೇಗವಾಗಿ ಕನ್ನಡಿಗರು ಇಲ್ಲಿ ಅಲ್ಪಸಂಖ್ಯಾತರಾಗುತ್ತಿದ್ದಾರೆ. ಐಟಿ ಉದ್ಯಮದಿಂದ ಬರುವ ಆದಾಯಕ್ಕೆ ಹೋಲಿಸಿದರೆ, ಅವರಿಗಾಗಿ ಸರ್ಕಾರ ಮಾಡಬೇಕಾದ ವೆಚ್ಚ ಮತ್ತು ಅದರಿಂದ ಇಲ್ಲಿನ ಸ್ಥಳವಂದಿಗರಿಗೆ ಉಂಟಾಗುತ್ತಿರುವ ತೊಂದರೆಯ ಪ್ರಮಾಣ ಅನೂಹ್ಯವೆನಿಸುವಷ್ಟು ಹೆಚ್ಚು.

ಈ ಐಟಿ ಉದ್ಯೋಗಿಗಳ ಜೇಬಲ್ಲಿ, ಬ್ಯಾಂಕ್ ಖಾತೆಗಳಲ್ಲಿ ಅಪಾರ ಹಣವಿರುವುದರಿಂದ ಅವರಿಗೆ ಬೇಕಾದ ಐಷಾರಾಮ ಕೇಂದ್ರಗಳು ಸ್ಥಾಪನೆಗೊಂಡು ಇಲ್ಲಿನ ಸಂಸ್ಕೃತಿಯ ಮೇಲೆ ತೀವ್ರವಾದ ಹಲ್ಲೆ ನಡೆಯುತ್ತಿದೆ. ಅವರಿಗೆ ಬೇಕಾದ ಸಂಗೀತ, ಸಿನಿಮಾ, ಲೈವ್ ಬ್ಯಾಂಡ್‌ಗಳಿಗೆ ಮಾನ್ಯತೆ ಹೆಚ್ಚಾಗಿ ಸಾಂಸ್ಕೃತಿಕ ಮಾಲಿನ್ಯ ತೀವ್ರವಾಗುತ್ತಿದೆ. ಅವರನ್ನು ನೋಡಿ ಇಲ್ಲಿನ ಮಧ್ಯಮವರ್ಗದ ಯುವಕರೂ ಐಷಾರಾಮಕ್ಕೊಳಗಾಗುತ್ತಿದ್ದಾರೆ; ಲೋಲುಪತೆ ಎದ್ದು ಕಾಣುತ್ತಿದೆ. ಅದನ್ನು ಪೂರೈಸಿಕೊಳ್ಳಲು ಈಚೆಗೆ ಸುಲಭವಾಗಿ ಸಿಕ್ಕುವ ಸಾಲದ ಬಲೆಗೆ ಬಿದ್ದು ಬಡಜನ ಹಾಗೂ ಮಧ್ಯಮವರ್ಗದವರು ತತ್ತರಿಸುವಂತಾಗಿದೆ. ಜನರ ಐಹಿಕ ಬದುಕಿಗೆ ಸೂಕ್ತ ಸೌಕರ್ಯಗಳನ್ನು ಒದಗಿಸುವುದರೊಂದಿಗೆ ಇಲ್ಲಿನ ಭಾಷೆ, ಜನಸಂಸ್ಕೃತಿಗಳನ್ನು ಉಳಿಸುವುದೂ ನಮ್ಮ ಸರ್ಕಾರದ ಕರ್ತವ್ಯವಲ್ಲವೇ?

ಐಟಿ ಕಾರಣದಿಂದ ಹಣದ ಸಂಪತ್ತು ಹೆಚ್ಚುತ್ತಿರಬಹುದಾದರೂ ಜನ ಸಮುದಾಯಕ್ಕೆ ಬೇಕಾದ ವಸ್ತುಗಳನ್ನು ಅವು ಸೃಷ್ಟಿಮಾಡುತ್ತಿವೆಯೇ? ವಿದೇಶದ ಕಂಪೆನಿಗಳು ತಯಾರಿಸುವ ಉತ್ಪನ್ನಗಳಿಗೆ ಬೇಕಾಗುವ ಪ್ರಕ್ರಿಯೆಗಳನ್ನು ಇವು ಸೃಷ್ಟಿಸಿ ಹಣ ಸಂಪಾದಿಸುತ್ತಿರಬಹುದು, ಆದರೆ ನೇರವಾಗಿ ಅವು ಸೃಷ್ಟಿಸುತ್ತಿರುವ

ವಸ್ತುಗಳಾವುವು? ಕೇವಲ ಹಣಸೃಷ್ಟಿಯೇ ಸಂಪದುತ್ಪಾದನೆಯೇ? ವಿದೇಶಗಳಲ್ಲಾಗುವ ರಾಜಕೀಯ ಸ್ಥಿತ್ಯಂತರಗಳ ಗಾಳಿಗನುಗುಣವಾಗಿ ಇವರ ಧೋರಣೆಗಳೂ ಬದಲಾಗುತ್ತವೆ. ಹೊರಗಡೆಯಿಂದ ಹೆಚ್ಚು ಹಣ ಸಂಪಾದಿಸುವ ಈ ಉದ್ಯಮ ತನ್ನ ನೌಕರರಿಗೆ ಬೇಕಾಬಿಟ್ಟಿ ಸಂಬಳ ನೀಡಿ ಆ ಉದ್ಯಮಕ್ಕೆ ಸೇರದ ಜನರಲ್ಲೂ ಲಾಂಪಟ್ಯ ವುಂಟುಮಾಡಿ ವಿದೇಶಗಳ ವಸ್ತುಗಳಿಗೇ ಮೊರೆಹೋಗಬೇಕಾದ ಅನಿವಾರ್ಯತೆ ಯನ್ನು ಸೃಷ್ಟಿಸುತ್ತ, ಯುವಜನರ ಪರಾವಲಂಬನೆ ಹೆಚ್ಚಾಗಲು ಕಾರಣವಾಗುತ್ತಿದೆ, ಪಾಶ್ಚಾತ್ಯ ದೇಶಗಳ ಗುಲಾಮಗಿರಿ ಮನೋಭಾವ ಇನ್ನೂ ಆಳಕ್ಕಿಳಿಯಲು ಸಹಾಯ ಮಾಡುತ್ತಿವೆ. ಯುವಜನರಲ್ಲಿ ಸಾಮಾಜಿಕ ನ್ಯಾಯದಂತಹ ಆದರ್ಶಗಳನ್ನು ಹಾಳು ಗೆಡವಿ ವಿದೇಶದ ಹಣವಂತ ಗಿರಾಕಿಗಳ ಓಲೈಕೆಯೇ ಜೀವನದ ಪರಮೋದ್ದೇಶ ಎಂಬ ಭ್ರಮೆ ಬೆಳೆಯಲು ಸಹಕಾರಿಯಾಗುತ್ತಿದೆ.

ಹೋಗಲಿ, ಈ ಎಲ್ಲ 'ಅಭಿವೃದ್ಧಿ'ಗಳೂ ಬೆಂಗಳೂರಲ್ಲಿಯೇ ಏಕಾಗಬೇಕು? ಇವರು ಬೆಂಗಳೂರಿನಿಂದ ಹೊರಟು ಹೋದರೆ ಏನೋ ಅನಾಹುತವಾಗಿಬಿಡ ಬಹುದೆಂದು ಹೆದರುವ ನಮ್ಮ ಸರ್ಕಾರ ಕನಿಷ್ಠ ಪಕ್ಷ ಇವುಗಳನ್ನು ಕರ್ನಾಟಕದ್ದೇ ಬೇರೆ ನಗರಗಳಲ್ಲಿ ಮೂಲಸೌಕರ್ಯಗಳನ್ನು ಒದಗಿಸಿ ಅವುಗಳನ್ನು ಅಲ್ಲಿಗೆ ಕಳಿಸಬಾರದೇಕೆ? ಸರ್ಕಾರದ ಕಣ್ಣೆದುರಿಗೇ ಈ ಉದ್ಯಮವಿರುವುದರಿಂದಾಗಿ ಸರ್ಕಾರದ ವರಿಷ್ಠರ ಲಾಭ ಹೆಚ್ಚುತ್ತದೆಯೇ? ಮೈಸೂರು, ಗುಲ್ಬರ್ಗ, ಬೆಳಗಾವಿ, ಹುಬ್ಬಳ್ಳಿ, ದಾವಣಗೆರೆ ಮುಂತಾದ ನಗರಗಳಲ್ಲಿನ ನಾಗರಿಕ ಸೌಲಭ್ಯಗಳೂ ಇದರಿಂದ ಹೆಚ್ಚಾಗುತ್ತದೆ. ಅಲ್ಲಿನ ಜನರೂ ಈ 'ಅಭಿವೃದ್ಧಿ'ಯ ರುಚಿಯನ್ನು ಸ್ವಲ್ಪ ನೋಡಲಿ, ಅನುಭವಿಸಲಿ! ಇನ್ನು ಮುಂದಾದರೂ ನಮ್ಮ ಸರ್ಕಾರವು ಆಸೆಬುರುಕುತನವನ್ನು ಹೆಚ್ಚಿಸುವ, ಅನಪೇಕ್ಷಣೀಯ ಜೀವನಶೈಲಿಯನ್ನು ವೈಭವೀಕರಿಸುವ, ಬಹು ಬೇಗ ಬದುಕನ್ನು ಬರಿದುಗೊಳಿಸಿಕೊಳ್ಳುವ ಜೀವನವೇಗವನ್ನು ತೀವ್ರಗೊಳಿಸುವ, ಸಾಂಸ್ಕೃತಿಕ ಗುಲಾಮತನದ ಬೇರುಗಳನ್ನು ಆಳಕ್ಕಿಳಿಸುವ ಈ ಐಟಿ ಉದ್ಯಮಕ್ಕೆ ನೀಡಲಾಗುತ್ತಿರುವ ಅನವಶ್ಯಕ ಪ್ರಾಮುಖ್ಯವನ್ನು ತಗ್ಗಿಸುವುದು ಒಳಿತು.

☆ – ☆ – ☆

# ಈಗ ಬದಲಾಗಿದೆಯೇ?

ಸುಮಾರು ಅರುವತ್ತು ವರ್ಷಗಳಷ್ಟು ಹಿಂದಿನ ಮಾತು, ಅಂದರೆ ಅದು ೧೯೫೧ನೇ ಇಸವಿ. ನಾನಾಗ ಎಂಟು ವರ್ಷ ಮುಗಿಸಿದ್ದ ಹುಡುಗ; ಬೆಂಗಳೂರಿನಲ್ಲಿ ಪ್ರಾಥಮಿಕ ಮೂರನೆಯ ತರಗತಿಯಲ್ಲಿದ್ದೆ. ಆಗ ನಮ್ಮ ತಾತ, ತಾಯಿಯ ತಂದೆ, ಶಿಕ್ಷಣ ಇಲಾಖೆಯಲ್ಲಿ ನೌಕರಿಯಲ್ಲಿದ್ದು ನಿವೃತ್ತರಾಗಿ ತಮ್ಮ ಸ್ವಂತ ಊರಾದ ಪಾವಗಡ ತಾಲ್ಲೂಕಿನ ಹಳ್ಳಿಗೆ ವಾಪಸಾಗಿ ನೆಲೆಸಿದ್ದರು. ಬರೀ ನಾಲ್ಕನೆಯ ತರಗತಿಯವರೆಗಿನ ಪ್ರಾಥಮಿಕ ಶಾಲೆಯಿದ್ದ ತಮ್ಮೂರಿಗೆ ಊರ ಹಿರಿಯರ ಜೊತೆಗೂಡಿ ಪ್ರಯತ್ನಪಟ್ಟು ಹೊಸ ಮಾದರಿ ಮಾಧ್ಯಮಿಕ ಶಾಲೆಯನ್ನು, ಕೆಲಕಾಲ ನೋಡಿ ಶಾಲೆಯಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಸಾಕಷ್ಟಿಲ್ಲದಿದ್ದರೆ ಮುಚ್ಚುವ ಷರತ್ತಿನೊಡನೆ, ಮಂಜೂರು ಮಾಡಿಸಿಕೊಂಡಿದ್ದರು. ತಮ್ಮ ಊರಿನ ಶಾಲೆಯು ಮುಚ್ಚಿಹೋಗಬಾರದೆಂಬ ಬಯಕೆಯಿಂದ, ಗಂಡುಮಕ್ಕಳಿಲ್ಲದಿದ್ದ ಅವರು, ನನ್ನನ್ನೂ ನನ್ನ ಅಕ್ಕನನ್ನೂ ಬೆಂಗಳೂರಿನಿಂದ ಕರೆದುಕೊಂಡು ಹೋಗಿ ತಮ್ಮೂರಿನ ಮಾಧ್ಯಮಿಕ ಶಾಲೆಗೆ ಸೇರಿಸಿದರು. ನಾನೀಗ ಅದನ್ನು ನೆನಪಿಸಿಕೊಂಡು ಅನೇಕ ಬಾರಿ ತಮಾಷೆ ಮಾಡಿಕೊಳ್ಳುತ್ತೇನೆ: ನಾನು ಉನ್ನತ ಶಿಕ್ಷಣಕ್ಕೆಂದು ಬೆಂಗಳೂರಿನಿಂದ ಹಳ್ಳಿಗೆ ಹೋದೆ ಎಂದು! ಆದರೆ ಅದರಿಂದ ನನಗೆ ಎರಡು ಬಗೆಯಲ್ಲಿ ಅನುಕೂಲವಾಯಿತು: ಮೂರನೆಯ ತರಗತಿಯಿಂದ ನನ್ನನ್ನು ಐದನೆಯ ತರಗತಿಗೆ ಸೇರಿಸಿದ್ದರಿಂದ ಒಂದು ವರ್ಷ ಉಳಿತಾಯವಾದದ್ದು ಒಂದಾದರೆ; ಮತ್ತೊಂದು, ನಮ್ಮ ಸ್ವಂತ ಊರೂ ಹಳ್ಳಿಯೇ ಆಗಿದ್ದರೂ, ಯಾವುದೋ ಕಾರಣದಿಂದ ಬೆಂಗಳೂರಿಗೆ ಬಂದು ನೆಲಸಿದ್ದ ಕಾರಣ ತಪ್ಪಿಹೋಗಿದ್ದ ಹಳ್ಳಿಯ ಜೀವನ ಮತ್ತೆ ನನಗೆ ದೊರಕಿದ್ದು.

ಆ ಊರು ಶುದ್ಧ ಬೆಂಗಾಡು ಕೊಂಪೆ ಎನ್ನುತ್ತಾರಲ್ಲ, ಅಂತಹುದು. ಮಳೆ ಬಹಳ ಅಪರೂಪ. ಎಷ್ಟೆಂದರೆ, ನಾಲ್ಕು ಹನಿ ಹೆಚ್ಚಾಗಿ ಮಳೆ ಬಂದು ಊರ ಹೊರಗಿನ ಹಳ್ಳ ಹರಿದ ಸುದ್ದಿ ತಿಳಿದರೆ ನಾವೆಲ್ಲ ಹರಿಯುವ ನೀರನ್ನು ನೋಡಲು ಬಿಟ್ಟ ಕೆಲಸ ಬಿಟ್ಟು ಓಡುತ್ತಿದ್ದೆವು! ಕೆರೆ ಇತ್ತು, ಆದರೆ ಅಲ್ಲಿ ನೀರಿದ್ದ ಸಂದರ್ಭಗಳು ಕಡಿಮೆ. ವಿದ್ಯುತ್ ಇರಲಿಲ್ಲ, ಗೋಡೆಗೆ ಮೊಳೆ ಹೊಡೆದು ತಗುಲು ಹಾಕಿದ ದೀಪದ ಬೆಳಕಿನಲ್ಲಿ ರಾತ್ರಿ ನಮ್ಮ ಓದು. ಊರಿಗೆ ಬಸ್ಸಿನ ಸೌಕರ್ಯವಿರಲಿಲ್ಲ; ರಸ್ತೆ ಅನ್ನುವುದು ಇದ್ದರೆ ತಾನೆ! ಜನ ಓಡಾಡುವ ಮತ್ತು ಗಾಡಿಯ ಜಾಡು, ಅಷ್ಟೆ ಅನ್ನಬಹುದು

ಅಲ್ಲಿದ್ದುದು. ಮೂರು ಮೈಲಿ ನಡೆದು ಬಸ್ಸು ಹಿಡಿದು ಪಾವಗಡಕ್ಕೆ ಬರಬೇಕಾಗಿತ್ತು. ನಮ್ಮ ದೇಶದ ಮಾದರಿ ಹಳ್ಳಿ ಅದು! ಆದರೇನು, ಎಳೆಯವನಾದ ನನಗೆ ಅವಾವುದೂ ಗಮನಕ್ಕೇ ಬರದೆ ಪ್ರೀತಿಯ ವಾತಾವರಣದಲ್ಲಿ ಅಲ್ಲಿ ಸಂತೋಷ ದಿಂದಿದ್ದೆ.

ನಾನು ಶಾಲೆಯ ಜೊತೆ ಬೆಳೆದೆ; ಅಥವಾ ಶಾಲೆಯೇ ನಮ್ಮೊಂದಿಗೆ ಬೆಳೆಯಿತು. ನಾನು ಮಾಧ್ಯಮಿಕ ಶಾಲೆಯ ಎರಡನೆಯ ತಂಡದವನು. ನಾನು ಶಾಲೆ ಸೇರಿದಾಗ ಅದರಲ್ಲಿದ್ದುದು ಎರಡೇ ತರಗತಿಗಳು, ಐದನೇ ಕ್ಲಾಸು ಮತ್ತು ಆರನೆಯದು. ಮೂರು ವರ್ಷಗಳನಂತರ ಅದು ಪೂರ್ತಿ ನಾಲ್ಕು ತರಗತಿಗಳನ್ನೂ ಹೊಂದುವಂತಾಯಿತು. ನಮ್ಮದು ಪುಟ್ಟ ಶಾಲೆ; ಊರಿನಿಂದ ಒಂದು ಮೈಲಿಯಷ್ಟು ದೂರ ಹೊರಗೆ ರಸ್ತೆಯ ಬದಿಗೇ ಇತ್ತು. ಹಳೆಯ ಮಂಟಪವೊಂದರಲ್ಲಿ, ಒಳಗೆ ಮತ್ತು ವರಾಂಡದಲ್ಲಿ ಎರಡೆರಡರಂತೆ ನಾಲ್ಕು ತರಗತಿಗಳು ನಡೆಯುತ್ತಿದ್ದವು. ಮೊದಲು ಇಬ್ಬರೇ ಮೇಷ್ಟರುಗಳಿದ್ದಂತೆ ನೆನಪು, ಆಮೇಲೆ ಇನ್ನಿಬ್ಬರು ಬಂದರು. ನಮ್ಮ ತರಗತಿಯಲ್ಲಿ ಕೇವಲ ಆರು ಜನ ವಿದ್ಯಾರ್ಥಿಗಳು; ವಿವಿಧ ಜಾತಿ ಜನಾಂಗ ಗಳಿಗೆ ಸೇರಿದವರು. ಹುಡುಗಿಯರಾರೂ ನಮ್ಮ ತರಗತಿಯಲ್ಲಿದ್ದಂತೆ ನೆನಪಿಲ್ಲ. ನಮ್ಮ ಉಪಾಧ್ಯಾಯರುಗಳು ಬಹು ಪ್ರೀತಿಯಿಂದ ನಮಗೆ ಕಲಿಸಿದರು. ನಾನು ನಾಲ್ಕು ವರ್ಷ ಅಲ್ಲಿ ಓದಿ ಹೈಸ್ಕೂಲು ಸೇರಲು ಮತ್ತೆ ಬೆಂಗಳೂರಿಗೆ ಬಂದೆ. ಆನಂತರ ಪ್ರತಿ ವರ್ಷ ಬೇಸಿಗೆ ರಜೆಯಲ್ಲಿ ಆ ಹಳ್ಳಿಗೆ ಹೋಗಿ ಕಾಲ ಕಳೆಯುತ್ತಿದ್ದೆ. ಹೀಗಾಗಿ ಮುಂದೆ ಅನೇಕ ವರ್ಷಗಳ ಕಾಲ ನನಗೆ ಆ ಹಳ್ಳಿಯ ಸಂಪರ್ಕ ಇತ್ತು.

ಬೆಂಗಳೂರಿನಲ್ಲಿ ಹೈಸ್ಕೂಲು ಮತ್ತು ಪಿಯುಸಿ ಮುಗಿಸಿ ಬಿಎ ಓದಲೆಂದು ನಾನು ತುಮಕೂರಿಗೆ ಹೋದೆ; ಅಲ್ಲಿನ ಸರ್ಕಾರಿ ಕಾಲೇಜು ಸೇರಿದೆ. ಅಲ್ಲಿದ್ದ ನನ್ನ ಸಹಪಾಠಿಗಳಲ್ಲಿ ಒಬ್ಬ ನಾನು ಮಾಧ್ಯಮಿಕ ಶಾಲೆ ಓದಿದ್ದ ಹಳ್ಳಿಯವನು, ನನಗಿಂತ ಒಂದು ಕ್ಲಾಸು ದೊಡ್ಡವನಾದರೂ ಫೇಲಾಗಿ ನಂತರ ಇಲ್ಲಿ ಮೊದಲ ಬಿಎ ತರಗತಿಯಲ್ಲಿ ನನಗೆ ಜೊತೆಯಾದ. ಇಡೀ ತುಮಕೂರು ಜಿಲ್ಲೆಯಲ್ಲಿ ಆಗ ಇದ್ದುದು ಅದೊಂದೇ ಕಾಲೇಜು; ಜಿಲ್ಲೆಯ ಎಲ್ಲ ಕಡೆಯಿಂದಲೂ ಬಂದ ವಿದ್ಯಾರ್ಥಿಗಳು ಅದರಲ್ಲಿದ್ದರು. ಅಲ್ಲಿದ್ದ ಮೂರು ವರ್ಷಗಳಲ್ಲಿ ಮತ್ತೆ ಆ ಊರಿನ ಶಾಲೆಯಿಂದ ಬಂದ ಬೇರೆ ಯಾರನ್ನೂ ನಾನು ಕಾಲೇಜಿನಲ್ಲಿ ಕಾಣಲಿಲ್ಲ. ನನ್ನ ಸಹಪಾಠಿ ಊರ ಗೌಡರ ಕುಟುಂಬದವನಾದ್ದರಿಂದ ಹೆಚ್ಚಿನ ಓದಿಗೆಂದು ತುಮಕೂರಿಗೆ ಬರುವ ಅನುಕೂಲವಿತ್ತು; ಪ್ರಾಯಶಃ ಉಳಿದವರಿಗೆ ಅದು ಇರದ್ದರಿಂದ ಯಾರೂ ಬಂದಿರಲಿಲ್ಲ. ಎಲ್ಲೂ ಎಡವದೆ ಪ್ರತಿವರ್ಷ ಪಾಸಾಗಿ ನಾನು ಬಿಎ ಮುಗಿಸಿದೆ. ಆದರೆ ನನ್ನ ಸಹಪಾಠಿಯಾಗಿದ್ದ ನಮ್ಮೂರಿನವನು ಫೇಲಾಗಿ ಹಿಂದೆ ಬಿದ್ದ. ಹೀಗಾಗಿ ನಮ್ಮ ಹಳ್ಳಿಯ ಮೊದಲ ಪದವೀಧರ ನಾನೇ; ಬೆಂಗಳೂರಿನಿಂದ ಹೋದವನು, ಅದೇ ಹಳ್ಳಿಯವನಲ್ಲ!

ಇದನ್ನು ನೆನೆಸಿಕೊಂಡಾಗ ನನಗೆ ಈಗಲೂ ಅನ್ನಿಸುತ್ತದೆ: ನಮ್ಮ ಹಳ್ಳಿಗಳ ಪರಿಸ್ಥಿತಿಗೆ ಇದು ಹಿಡಿದ ಕನ್ನಡಿಯೆಂದು. ಅಲ್ಲಿನ ಜನರು ಬಡತನದಲ್ಲಿ ಮುಳುಗಿ ಮಕ್ಕಳಿಗೆ ಓದು ನೀಡಲಾರದ ಸ್ಥಿತಿಯವರು, ಹೊರಗಡೆಯಿಂದ ಬಂದ ನಾನು ಮುಂದುವರಿದವರಲ್ಲಿ ಮೊದಲಿಗನಾದೆ. ಇದು ನಡೆದು ಅರ್ಧ ಶತಮಾನವೇ ಕಳೆದಿದೆ; ಸಾಕಷ್ಟು ಹಿಂದೆಯೇ ನಾನು ಓದಿದ ಹಳ್ಳಿಯಲ್ಲಿ ಹೈಸ್ಕೂಲೂ ಆರಂಭ ಗೊಂಡಿತು; ಈಗ ಜ್ಯೂನಿಯರ್ ಕಾಲೇಜೂ ಬಂದಿರಬಹುದು. ಹಳ್ಳಿಗೆ ವಿದ್ಯುತ್ ಸೌಕರ್ಯವಿದೆ; ಬಸ್ ಸಂಪರ್ಕವಿದೆ. ಅಂದರೆ ಎಲ್ಲ ರೀತಿಯಿಂದಲೂ ಅದು ಅಭಿವೃದ್ಧಿಯಾಗಿದೆ. ನನಗೆ ಬೇರೆ ಹಳ್ಳಿಗಳ ಸಂಪರ್ಕ ಅಷ್ಟಾಗಿ ಇಲ್ಲದಿರುವುದರಿಂದ ಖಚಿತವಾಗಿ ನನಗೆ ತಿಳಿಯದು. ಆದರೆ ಐವತ್ತು ವರ್ಷಗಳಷ್ಟು ಹಿಂದೆ ಇದ್ದ ರೀತಿಯ ಇಂಥ ಹಳ್ಳಿಗಳು ಈಗಲೂ ಬಹಳ ಸಂಖ್ಯೆಯಲ್ಲಿರಬೇಕು ಎಂದು ನನಗೆ ಅನ್ನಿಸುತ್ತದೆ. ಇಲ್ಲದಿದ್ದರೆ ಸರ್ಕಾರ ಬಿಸಿಯೂಟದ ಯೋಜನೆ, ಉಚಿತ ಸಮವಸ್ತ್ರ-ಪುಸ್ತಕಗಳ ಆಸೆಯೊಡ್ಡಿ ಮಕ್ಕಳನ್ನು ಶಾಲೆಗೆ ಆಕರ್ಷಿಸುವ ಯೋಜನೆಯನ್ನಾಗಲೀ, ಸರ್ವಶೀಕ್ಷಣ ಅಭಿಯಾನದಂತಹ ಕಾರ್ಯಕ್ರಮಗಳನ್ನಾಗಲೀ ಹಾಕಿಕೊಳ್ಳಬೇಕಾದ ಆವಶ್ಯಕತೆ ಎಲ್ಲಿತ್ತು? ಎಂದರೆ, ಕೆಲವು ಹಳ್ಳಿಗಳು ಅಭಿವೃದ್ಧಿಯ ದೃಷ್ಟಿಯಿಂದ ಇತರ ಕೆಲವು ಹಳ್ಳಿಗಳಿಗಿಂತಲೇ ಅರ್ಧ ಶತಮಾನದಷ್ಟು ಹಿಂದಿ ಬಿದ್ದಿದೆ ಎಂದ ಮೇಲೆ ನಗರಗಳೊಡನೆ ಹೋಲಿಸಿದರೆ ಅವುಗಳ ಸ್ಥಿತಿ ಹೇಗಿದ್ದೀತು? ಇಂಥ ಪರಿಸ್ಥಿತಿಯಲ್ಲಿ ನಾವು ಜಾಗತೀಕರಣದ ಮಾತಾಡುತ್ತ, ಅಮೆರಿಕವನ್ನು ಮಾದರಿಯಾಗಿರಿಸಿಕೊಂಡು ನಗರಗಳನ್ನು ಬೆಳೆಸುವುದಕ್ಕೆ ಆದ್ಯತೆ ನೀಡಬೇಕೇ?

☆ - ☆ - ☆

# ಕನ್ನಡ ರಾಷ್ಟ್ರೀಯತೆ

ನಮ್ಮ ನಾಡಿನಲ್ಲಿಯೇ ಕನ್ನಡ ಮೂರನೇ ದರ್ಜೆಗಿಳಿದಿದೆ; ಅಥವಾ ಏರಿದೆ! ನಮ್ಮ ಜನರೆಲ್ಲ ಗಡಿ ದಾಟಿ ಜಗತ್ತನ್ನು ಗೆಲ್ಲಲು ಇಂಗ್ಲಿಷ್ ಎಂಬ ವಿಮಾನವನ್ನೇರಲು ತವಕಿಸುತ್ತಾರೆ; ಸ್ವಲ್ಪ ಕಡಿಮೆ ಎನಿಸಿದವರು ರಾಷ್ಟ್ರೀಯ ಮಟ್ಟಕ್ಕೇರಲು ಹಿಂದಿಯ ರೈಲು ಹತ್ತುತ್ತಿದ್ದಾರೆ. ಮೊದಲ ರೀತಿಯವರಿಗೆ ನಮ್ಮ ರೊಟ್ಟಿ ಬೇಡ; ಅವರಿಗೆ ರುಚಿಸುವುದು ಪಿಜ್ಜ; ಎರಡನೆಯವರಿಗೆ ರೋಟಿ. ಕುವೆಂಪು ಅವರು ಇಂಗ್ಲಿಷಿನಿಂದ ಪಾರುಮಾಡಲು ದೇವರನ್ನು ಪ್ರಾರ್ಥಿಸುತ್ತಾರೆ; "ಉತ್ತರದ ಗಂಗೆಯಲಿ ಕತ್ತೆ ಮಿಂದೈತರಲು ದಕ್ಷಿಣದ ದೇಶಕದು ಕುದುರೆಯಹುದೇ?" ಎಂದು ಹಿಂದಿಯನ್ನು ಕುರಿತು ವ್ಯಂಗ್ಯವಾಡುತ್ತಾರೆ. ಅವರ ಶತಮಾನೋತ್ಸವವನ್ನು ಆಚರಿಸುವ ನಾವು ಈ ವಿವೇಕವನ್ನು ಮಾತ್ರ ಮೈಗೂಡಿಸಿಕೊಳ್ಳಲು ಪ್ರಯತ್ನಿಸುವುದಿಲ್ಲ. ನಾವೇ ನಮ್ಮನ್ನು ಮೂರನೇ ದರ್ಜೆಗೆ ಇಳಿಸಿಕೊಂಡಿದ್ದೇವೆ. ಇದನ್ನು ಎದುರಿಸಲು ಇರುವ ಏಕೈಕ ದಾರಿಯೆಂದರೆ ನಮ್ಮತನವನ್ನು ಬೆಳಗಿ ತೋರಿಸುವುದು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಸ್ವದೇಶೀ ಪ್ರಿಯರು ಮಾಡಿದ್ದು ಪರಕೀಯವಾದುದರ ಎದುರು ನಮ್ಮದರ ಹಿರಿಮೆಯನ್ನು ಎತ್ತಿ ತೋರಿದ್ದು. ಈ ಸಂದಿಗ್ಧ ಸ್ಥಿತಿಯಲ್ಲಿ ನಾವು ಮಾಡಬೇಕಾಗಿರುವುದು ಅದನ್ನೇ.

ಈಗ ನಾವು ಎದುರಿಸುತ್ತಿರುವುದು ಇಬ್ಬಾಯ ಕತ್ತಿಯನ್ನು; ಜಾಗತೀಕರಣ ಮತ್ತು ಸುಳ್ಳು ರಾಷ್ಟ್ರೀಯತೆ ಎಂಬವು. ನಮ್ಮತನ ಈ ಎರಡೂ ದ್ರಾವಕಗಳಲ್ಲಿ ಕರಗಿ ಹೋಗುತ್ತಿದೆ. ಜಾಗತೀಕರಣವೆಂದರೆ ಅಮೆರಿಕೀಕರಣ; ಅಮೆರಿಕವು ಊರ ಗೌಡನಂತೆ ಜಗತ್ತಿನ ಎಲ್ಲ ದೇಶಗಳ ಮೇಲೆ ಹಿಡಿತ ಸಾಧಿಸಲು ಹುನ್ನಾರ ಮಾಡುತ್ತಿದ್ದರೆ, ಉತ್ತರ ಭಾರತ ಈ ಉಪಖಂಡದ ವೈವಿಧ್ಯವನ್ನು ಹಿಂದಿ ಎಂಬ ನೀರನ್ನು ಚಿಮುಕಿಸಿ ಇಸ್ತ್ರಿ ಮಾಡಲು ರಾಷ್ಟ್ರೀಯತೆಯ ಬಿಸಿಯನ್ನು ಹೆಚ್ಚಿಸುತ್ತಿದೆ. ಜಾಗತೀಕರಣದ ವಿಷವರ್ತುಲದಿಂದ ಪಾರಾಗುವುದು ಎಷ್ಟು ಜರೂರೋ ಅಷ್ಟೇ ತುರ್ತಿನಿಂದ ಸುಳ್ಳು ಭಾರತೀಯ ರಾಷ್ಟ್ರೀಯತೆಯಿಂದಲೂ ನಾವು ಬಿಡುಗಡೆಗೊಳ್ಳಬೇಕಾಗಿದೆ. ವಿದೇಶಿ ಆಳ್ವಿಕೆಯನ್ನು ವಿರೋಧಿಸುವಾಗ ಬ್ರಿಟಿಷರು ಆಕ್ರಮಿಸಿಕೊಂಡಿದ್ದ ಉಪಖಂಡವನ್ನು ಒಂದು ದೇಶ ಎಂದು ಬಿಂಬಿಸಲಾಯಿತು. ಆದರೆ ಇದೆಲ್ಲ ಎಂದೂ ಒಂದಾಗಿರಲಿಲ್ಲ; ಅಥವಾ ಒಂದು ನಾಡು ಎಂಬ ಕಲ್ಪನೆಯೂ ಇರಲಿಲ್ಲ.

ಭರತಖಂಡ ಎಂಬುದು ಜಂಬೂದ್ವೀಪದ ಒಂದು ಭಾಗವೆಂಬ ಕಲ್ಪನೆಯಿತ್ತು; ಆದರೆ ಇದು ಭೂಭಾಗವನ್ನು ಗುರುತಿಸಲು ಮಾಡಿದ ಪ್ರಯತ್ನವೇ ಹೊರತು, ಒಂದು ಘಟಕ ಎಂದು ಸೂಚಿಸುವುದಕ್ಕಲ್ಲ. ನನಗೆ ತಿಳಿದ ಮಟ್ಟಿಗೆ ನಮ್ಮ ಪುರಾಣಗಳಲ್ಲಿ ರಾಜರಾಗಿದ್ದ ಮೂವರು ಭರತರಿದ್ದಾರೆ: ರಾಮಾಯಣದ ಶ್ರೀರಾಮನ ತಮ್ಮ; ದುಷ್ಯಂತ-ಶಕುಂತಲೆಯರ ಮಗ; ಮತ್ತು ಜೈನರ ಆದಿ ತೀರ್ಥಂಕರನಾದ ಪುರುದೇವನ ಮಗ. ಈ ಯಾರಿಂದಾಗಿ ಈ ನಾಡಿಗೆ ಭಾರತ ಎಂಬ ಹೆಸರು ಬಂತೋ ಗೊತ್ತಿಲ್ಲ. ಹಿಂದೂ ಎಂಬ ಮಾತು ಸಿಂಧೂ ಎಂಬುದರ ವ್ಯತ್ಯಸ್ತ ರೂಪವಾಗಿ ಪರಕೀಯರು ಬಳಸಿದಂತೆಯೇ, ಭಾರತ (ಬ್ರಿಟಿಷ್ ಆಳ್ವಿಕೆಯ ಉಪಖಂಡ ಎಂಬರ್ಥದಲ್ಲಿ) ಎಂಬ ಮಾತನ್ನೂ ಬಳಸಿದಂತಿದೆ.

ಕನ್ನಡ ನಾಡನ್ನು ಹಿಂದೆಂದೂ ಭಾರತದ ಒಂದು ಭಾಗವೆಂಬಂತೆ ಕಂಡಿರಲಿಲ್ಲ. ಕನ್ನಡದ ಆದ್ಯ ಕೃತಿ 'ಕವಿರಾಜಮಾರ್ಗ'ದ ಪ್ರಸಿದ್ಧ ಪದ್ಯವನ್ನು ಪರಿಶೀಲಿಸಿ: "ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಲಯವಿಲೀನ ವಿಶದವಿಷಯವಿಶೇಷಂ". ಇಲ್ಲಿ ಹೇಳಿದ ನಮ್ಮ ನಾಡಿನ ಗಡಿಯನ್ನು ನಾನು ಪ್ರಸ್ತಾಪಿಸುತ್ತಿಲ್ಲ. ಪದ್ಯದ ಉತ್ತರಾರ್ಧವನ್ನು ಗಮನಿಸಿ; ಕನ್ನಡ ಎಂಬುದು ಇಡೀ ವಸುಧಾವಲಯದಲ್ಲಿ ಸೇರಿರುವ ವಿಶದವೂ ವಿಶೇಷವೂ ಆದ ನಾಡು ಎಂದು ಕವಿ ಬಣ್ಣಿಸಿದ್ದಾನೆ. ಆಂಡಯ್ಯ ಎಂಬ ಹದಿಮೂರನೇ ಶತಮಾನದ ಕವಿ ತನ್ನ 'ಕಬ್ಬಿಗರ ಕಾವ'ದಲ್ಲಿ "ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು" ಎನ್ನುತ್ತಾನೆ. 'ಕುಮಾರರಾಮ ಸಾಂಗತ್ಯ' ವನ್ನು ಬರೆದ ಹದಿನಾರನೆಯ ಶತಕದ ನಂಜುಂಡನೂ ಕವಿರಾಜಮಾರ್ಗಕಾರನನ್ನೇ ಅನುಸರಿಸಿ "ಕಾವೇರಿಯಿಂದ ಗೋದಾವರಿವರೆಗಮಿರ್ದಾ ವಸುಧಾತಳವಳಯ ಭಾವಿಸೆ ಕರ್ನಾಟ ಜನಪದವನಾವ ನೊಲಿದು ಬಣ್ಣಿಸುವನು" ಎನ್ನುತ್ತಾನೆ. ಇಲ್ಲಿ ನಾಡನ್ನು 'ಕನ್ನಡ' ಎಂಬುದರ ಬದಲು 'ಕರ್ನಾಟ' ಎಂದು ಕರೆದಿದೆ. ನಾವು ಪ್ರಾಥಮಿಕ ಶಾಲೆಯಲ್ಲಿ ಓದಿದ್ದ 'ಗೋವಿನ ಕಥೆ'ಯ ಮೊದಲನೇ ಪದ್ಯವೇ "ಧರಣಿಮಂಡಲ ಮಧ್ಯದೊಳಗೆ ಮೆರೆಯುತಿಹ ಕರ್ನಾಟ ದೇಶದೊಳ್" ಎಂದಿದೆ. ಇಲ್ಲೆಲ್ಲ ಕರ್ನಾಟಕವನ್ನು ಜಗತ್ತಿನ ಭಾಗವಾಗಿ ಪರಿಭಾವಿಸಲಾಗಿದೆಯೇ ವಿನಾ ಭಾರತದ ಭಾಗವಾಗಿ ಅಲ್ಲ, ಹಾಗಾಗಿರುವುದು ಈಚೆಗೆ, ಬ್ರಿಟಿಷರ ನಂತರ.

ಎಂದರೆ ಈಗಿನ ಭಾರತ ಒಂದು ಘಟಕವಲ್ಲ; ಅನೇಕ ಸ್ವತಂತ್ರ ಘಟಕಗಳ ಸಮುದಾಯ, ಒಕ್ಕೂಟ. ಭಾರತದ ಸಂವಿಧಾನದ ಮೊದಲ ಆಧ್ಯಾಯದ ಮೊದಲ ವಾಕ್ಯವೇ "India, that is Bharhat, shall be a Union of States" ಎಂದಿದೆ. ಈ ಸೇರುವಿಕೆ ಸೋವಿಯತ್ ಒಕ್ಕೂಟದಲ್ಲಿದ್ದ ತರಹದ್ದು; ವಿಶೇಷ ಸನ್ನಿವೇಶದಲ್ಲಿ ಒಂದಾದ ವಿವಿಧ ಸ್ವತಂತ್ರ ಘಟಕಗಳ ಒಕ್ಕೂಟ. ಅಂದರೆ ಕನ್ನಡ, ತಮಿಳು, ತೆಲುಗು, ಬಂಗಾಳಿ, ಮರಾಠಿ ಮುಂತಾದ ಭಾಷಿಕ ವಲಯಗಳದ್ದು ನಿಜವಾದ ರಾಷ್ಟ್ರೀಯತೆ.

ಭಾರತ ಏಕವಲ್ಲ, ಅನೇಕಗಳ ಸೇರುವಿಕೆ. ಇದರ ಭೌತಿಕ ಸ್ವರೂಪ ವ್ಯತ್ಯಾಸಗೊಳ್ಳುವಂಥದು; ಸ್ವಾತಂತ್ರ್ಯಪೂರ್ವದಲ್ಲಿ "ಅಖಂಡ ಭಾರತ"ದ ಕಲ್ಪನೆಯಿತ್ತು, ಆನಂತರದ ಭಾರತ ಬದಲಾಗಿದೆಯಲ್ಲ, ಹಾಗೆ.

ಒಕ್ಕೂಟದಲ್ಲಿ ವಿವಿಧ ಘಟಕಗಳ ಸ್ವಂತಿಕೆಗೆ ಮಾನ್ಯತೆಯಿರಬೇಕು; ಅವುಗಳ ನಡುವೆ ಸಮಾನತೆ ಇರಬೇಕು. ಭಾರತವು ನಿಜವಾದ ಒಕ್ಕೂಟದ ಸ್ವರೂಪವನ್ನು ಪಡೆದಾಗ ಮಾತ್ರ ವಿವಿಧ ಘಟಕಗಳ ನಡುವೆ ಸಮತೋಲನ-ಸಾಮರಸ್ಯಗಳು ಸಾಧ್ಯ. ಅದಕ್ಕೆ ಆವಶ್ಯಕವಾದದ್ದು ಅಧಿಕಾರ ವಿಕೇಂದ್ರೀಕರಣ; ಕೇಂದ್ರಕ್ಕೆ ಇಡೀ ಭಾರತವ್ಯಾಪೀ ವಿಷಯಗಳ ಬಗ್ಗೆ ಮಾತ್ರ ಅಧಿಕಾರವಿರಬೇಕು; ಮಿಕ್ಕವೆಲ್ಲ ಕನ್ನಡ, ತಮಿಳು, ಬಂಗಾಳಿ ಮುಂತಾದ ವಿವಿಧ ರಾಷ್ಟ್ರೀಯತೆಗಳಿಗೆ ದತ್ತವಾಗಬೇಕು. ಈ ಎಲ್ಲ ಭಾಷೆಗಳಿಗೂ ಸಮಾನ ಸ್ಥಾನವಿರಬೇಕು; ಆಗ ಆಯಾ ಭಾಷಿಕ ಜನರ ಸಮಾನ ಏಳಿಗೆಯೂ ಸಾಧ್ಯ. ಹೀಗಾಗಿ ನಾವು ಮಾಡಬೇಕಾಗಿರುವುದು ಈ "ಕನ್ನಡ ಪ್ರಜ್ಞೆ"ಯನ್ನು ಬೆಳಗಿಸುವುದನ್ನು; ಕನ್ನಡ ರಾಷ್ಟ್ರೀಯತೆಯ ಸ್ವರೂಪವನ್ನು ಬಿತ್ತರಗೊಳಿಸುವುದನ್ನು. ಇದು ಕನ್ನಡಕ್ಕೆ ಮಾತ್ರ ಸೀಮಿತವಾದದ್ದಲ್ಲ; ಈ ಒಕ್ಕೂಟದ ಎಲ್ಲ ಭಾಷಿಕ ರಾಷ್ಟ್ರೀಯತೆಗಳಿಗೂ ಈ ಮಾತು ಅನ್ವಯವಾಗುತ್ತದೆ. ರಾಷ್ಟ್ರೀಯ ಪ್ರಜ್ಞೆಯುಳ್ಳ ಪ್ರಜ್ಞಾವಂತ ಜನರೆಲ್ಲ ಈ ದಿಸೆಯಲ್ಲಿ ಆಲೋಚಿಸಿ ಕಾರ್ಯಪ್ರವೃತ್ತರಾಗಬೇಕಾದುದು ಆವಶ್ಯಕವಾಗಿದೆ. ಕನ್ನಡ ಚಳವಳಿ ಇದನ್ನು ತನ್ನ ಧ್ಯೇಯವನ್ನಾಗಿ ಮಾಡಿಕೊಳ್ಳಬೇಕಿದೆ; ಆಗ ಮಾತ್ರ ಅದಕ್ಕೊಂದು ಗಟ್ಟಿಯಾದ ತಾತ್ವಿಕ ನೆಲಗಟ್ಟು ದೊರೆಯುತ್ತದೆ.

☆ – ☆ – ☆

# ಶಾಸ್ತ್ರೀಯ (ಭಾಷೆ) ರಾಜಕೀಯ

ಈಚೆಗೆ ಕೇಂದ್ರ ವಾರ್ತೆ ಮತ್ತು ಸಮಾಚಾರ ಮಂತ್ರಿಗಳು ಸಚಿವ ಸಂಪುಟದ ಸಭೆಯ ನಂತರ ಸುದ್ದಿಗೋಷ್ಠಿಯಲ್ಲಿ ಮಾತನಾಡುತ್ತ, ಸಂಸ್ಕೃತಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನ ನೀಡುವ ಸಂಪುಟದ ನಿರ್ಧಾರವನ್ನು ಪ್ರಕಟಿಸಿದರು. ಆಗ, ಶಾಸ್ತ್ರೀಯ ಎಂಬ ಸ್ಥಾನ ಪಡೆಯಲು ಭಾಷೆಯ ಪ್ರಾಚೀನತೆಯು ಈಗ ಒಂದು ಸಾವಿರ ವರ್ಷಗಳು ಎಂದಿರುವುದನ್ನು ಒಂದೂವರೆ ಅಥವಾ ಎರಡು ಸಾವಿರ ವರ್ಷಗಳೆಂದು ಮಾರ್ಪಡಿಸುವ ಪ್ರಸ್ತಾಪ ಸರ್ಕಾರದ ಮುಂದಿದೆಯೆಂದು ಹೇಳಿದರು. ಈಗ ಆ ಸ್ಥಾನ ಬಯಸಿ ಎರಡು ಭಾಷೆಗಳು ಸರ್ಕಾರದ ಪರಿಶೀಲನೆಯಲ್ಲಿವೆ: ಕನ್ನಡ ಮತ್ತು ತೆಲುಗು. ಶಾಸ್ತ್ರೀಯ ಭಾಷೆಯ ಘೋಷಣೆಯ ವಿಷಯದ ಕೆಳಗೆ ಹರಿಯುತ್ತಿರುವುದು ರಾಜಕೀಯದ ಗಬ್ಬು ಕೊಚ್ಚೆ ಎಂಬುದು ಅದರ ಆಗುಹೋಗುಗಳನ್ನು ತಿಳಿದವರಿಗೆ ಗೊತ್ತು.

ಕಳೆದ ಪಾರ್ಲಿಮೆಂಟ್ ಚುನಾವಣೆಗೆ ಮುನ್ನ ಡಿಎಂಕೆ ಜೊತೆ ಹೊಂದಾಣಿಕೆ ಮಾಡಿಕೊಂಡ ಕಾಂಗ್ರೆಸ್, ಅಧಿಕಾರಕ್ಕೆ ಬಂದರೆ ತಮಿಳಿಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ನೀಡುವುದಾಗಿ ಒಪ್ಪಿಕೊಂಡಿತ್ತು. ಅದರಂತೆ ಅಧಿಕಾರ ವಹಿಸಿಕೊಂಡ ಕೆಲವೇ ದಿನಗಳಲ್ಲಿ ತಮಿಳನ್ನು ಶಾಸ್ತ್ರೀಯ ಭಾಷೆ ಎಂದು ಘೋಷಿಸಿತು. ವಾಸ್ತವವಾಗಿ, ಶಾಸ್ತ್ರೀಯ ಭಾಷೆ ಎಂಬ ಪರಿಕಲ್ಪನೆಯೇ ಇಲ್ಲ; ಅಥವಾ ಇದ್ದಿದ್ದರೂ, ಈಗ ಆಡುನುಡಿಯಾಗಿರದ, ಆದರೆ ಹಿಂದೆ ಆಗಿದ್ದ ಮತ್ತು ಅಮೂಲ್ಯ ಗ್ರಾಂಥಿಕ ಸಾಹಿತ್ಯ ಹೊಂದಿರುವ ನುಡಿಯನ್ನು ಆ ಹೆಸರು ಸೂಚಿಸುತ್ತಿತ್ತು. ಅಂಥವುಗಳನ್ನು ಭಾಷಾವಿಜ್ಞಾನದಲ್ಲಿ "ಮೃತಭಾಷೆ" ಎಂದು ಕರೆಯುತ್ತಾರೆ. ಆದರೆ ಪ್ರಭಾವೀ ತಮಿಳು ರಾಜಕಾರಣಿಗಳು ತಮ್ಮ ಭಾಷೆ ಮಿಕ್ಕೆಲ್ಲಕ್ಕಿಂತ ಶ್ರೇಷ್ಠ ಎಂದು ತೋರಿಸಲು ಈ ಹುನ್ನಾರ ನಡೆಸಿ ಯಶಸ್ವಿಯಾದರು.

ತರಾತುರಿಯಿಂದ ತಮಿಳಿಗೆ ಶಾಸ್ತ್ರೀಯ ಭಾಷೆಯ ಸ್ಥಾನ ನೀಡಿದ ಸರ್ಕಾರ ಆನಂತರವಷ್ಟೇ ನಿಯಮಗಳನ್ನು ರೂಪಿಸಿಲು ಕೇಂದ್ರ ಸಾಹಿತ್ಯ ಅಕಾಡೆಮಿಯನ್ನು ಕೇಳಿತು. ಆದರೆ ಅಕಾಡೆಮಿಯ ಸಮಿತಿ "ಇದು ಶುದ್ಧ ಅವಿವೇಕ" ಎಂದು ಕರೆದರೂ, ಕೊನೆಗೆ ನಾಲ್ಕು ಅರ್ಹತೆಗಳನ್ನು ನಿಗದಿ ಪಡಿಸುವುದರಲ್ಲಿ ಸರ್ಕಾರ

ಯಶಸ್ವಿಯಾಯಿತು. ಅವುಗಳೆಂದರೆ: ೧) ಒಂದು ಸಾವಿರ ವರ್ಷಕ್ಕೆ ಮಿಗಿಲಾದ ಪ್ರಾಚೀನತೆ; ೨) ಅಮೂಲ್ಯವಾದ ಪರಂಪರೆ ಎಂದು ಪರಿಗಣಿತವಾದ ಸಾಹಿತ್ಯ; ೩) ಎರವಲು ಪಡೆಯದ ಸ್ವಂತ ಸಾಹಿತ್ಯ ಪರಂಪರೆ; ಮತ್ತು, ೪) ಆ ಭಾಷೆಯ ಮತ್ತು ಸಾಹಿತ್ಯದ ಹಿಂದಿನ ಮತ್ತು ಇಂದಿನ ಸ್ವರೂಪಗಳಲ್ಲಿ ವ್ಯತ್ಯಾಸ ಇರಬಹುದಾದ ಸಾಧ್ಯತೆ.

ಈ ಎಲ್ಲ ಅರ್ಹತೆಗಳು ಕನ್ನಡಕ್ಕೂ ಇರುವುದರಿಂದ ಸಹಜವಾಗಿಯೇ ಕನ್ನಡ ಭಾಷಾಭಿಮಾನಿಗಳು ಕರ್ನಾಟಕ ಸರ್ಕಾರದ ಮೂಲಕ ತಮ್ಮ ಭಾಷೆಗೂ ಆ ಸ್ಥಾನಮಾನ ನೀಡಬೇಕೆಂಬ ಒತ್ತಾಯವನ್ನು (ಕನ್ನಡಕ್ಕೆ ಅದರಿಂದೇನು ಕೋಡು ಬರುವುದೇ ಎಂದು ಕೆಲವು ಸಿನಿಕರು ರಾಗವೆಳೆದರೂ) ಕೇಂದ್ರ ಸರ್ಕಾರದ ಮೇಲೆ ತಂದರು. ಈಗ ದೀರ್ಘ ಕಾಲದಿಂದ ಅದು ಪರಿಶೀಲನೆಯಲ್ಲಿದೆ! ಈ ಮಧ್ಯೆ ಸಂಸ್ಕೃತಕ್ಕೆ ಆ ಸ್ಥಾನ ದೊರೆತಿದೆ. ಸಹಜವಾಗಿ ಆ ಸ್ಥಾನಕ್ಕೆ ಅರ್ಹವಾದುದು ಅದು ಮತ್ತು ಪ್ರಾಕೃತ ಮಾತ್ರ. ಆದರೆ ಆ ಸ್ಥಾನ ನೀಡುವುದರೊಡನೆ ಸರ್ಕಾರ ಅಂಥ ಭಾಷೆಗೆ ಸಂಬಂಧಿಸಿದಂತೆ ಅಧ್ಯಯನ-ಸಂಶೋಧನಗಳ ಸಂಸ್ಥೆಯ ಸ್ಥಾಪನೆ, ವಿವಿಧ ವಿಶ್ವವಿದ್ಯಾಲಯಗಳಲ್ಲಿ ಅದರ ಅಧ್ಯಯನಕ್ಕೆ ಪೀಠ ಸ್ಥಾಪನೆ, ಅದರ ಅಭಿವೃದ್ಧಿಗೆ ದುಡಿದವರಿಗೆ ಅಂತರಾಷ್ಟ್ರೀಯ ಗೌರವ ಪ್ರಶಸ್ತಿ ನೀಡಿಕೆ ಮುಂತಾದ ಸವಲತ್ತುಗಳನ್ನು ನೀಡುತ್ತದೆ. ಇದು ಕನ್ನಡಕ್ಕೂ ದೊರೆತರೆ ನಮಗೆ ಅಭಿಮಾನವೆನಿಸುವುದರ ಜೊತೆಗೆ ರಾಷ್ಟ್ರ ಮತ್ತು ಅಂತಾರಾಷ್ಟ್ರ ಮಟ್ಟಗಳಲ್ಲಿ ಅದಕ್ಕೆ ಹೆಚ್ಚಿನ ಮಾನ್ಯತೆ ಉಂಟಾಗುತ್ತದೆ.

ಆದರೆ ಕನ್ನಡಕ್ಕೆ ಆ ಸ್ಥಾನ ನೀಡಬಾರದೆಂದು ಈಗ ತಮಿಳುನಾಡಿನ ಪ್ರಭಾವೀ ರಾಜಕಾರಣಿಗಳು ಕೇಂದ್ರ ಸರ್ಕಾರದ ಮೇಲೆ ಒತ್ತಡ ಹೇರುತ್ತಿರುವುರಂತೆ. ತಮಿಳಿನ ಹೊರತು ಮಿಕ್ಕ ಭಾಷೆಗಳಿಗೆ ಗೌರವ ದೊರೆಯುವುದಕ್ಕೆ ಅವರ ವಿರೋಧ. ತಮಿಳುನಾಡಿನ ಎಲ್ಲ ರಾಜಕಾರಣಿಗಳೂ ಈ ಮನೋಭಾವದವರೇ; ಅದರಲ್ಲೂ ಪಾರ್ಲಿಮೆಂಟಿನ ಡಿಎಂಕೆ ಸದಸ್ಯರು; ಅವರಲ್ಲಿ ಕೇಂದ್ರ ಸಚಿವರಾಗಿರುವವರು; ಅವರಲ್ಲಿಯೂ ಸಂಪರ್ಕಸಚಿವ ದಯಾನಿಧಿ ಮಾರನ್. ಈ ಮಾರನ್ ಸ್ಪಷ್ಟವಾಗಿ ಇದನ್ನು ಅಧಿಕಾರಿಗಳಿಗೆ ಸೂಚಿಸಿರುವುದು ಈಗ ಬೆಳಕಿಗೆ ಬಂದಿದೆ. ಅವರ ಒತ್ತಡದಿಂದಾಗಿಯೇ ಸರ್ಕಾರ ಶಾಸ್ತ್ರೀಯ ಭಾಷೆಗೆ ಬೇಕಾದ ಒಂದು ಅರ್ಹತೆ, ಪ್ರಾಚೀನತೆಯ ಅವಧಿಯನ್ನು ಒಂದೂವರೆ ಅಥವಾ ಎರಡು ಸಾವಿರ ವರ್ಷಗಳಿಗೆ ಏರಿಸಲು ಆಲೋಚಿಸುತ್ತಿರುವುದು.

ನ್ಯಾಯಯುತವಾಗಿ ಈ ಪ್ರಕ್ರಿಯೆ ನಡೆದಿದ್ದರೆ, ಮೊದಲು ನಿಯಮಗಳನ್ನು ರೂಪಿಸಿ, ಅವುಗಳನ್ನು ಹೊಂದಿದ ಎಲ್ಲ ಭಾಷೆಗಳಿಗೂ ಆ ಸ್ಥಾನವನ್ನು ಒಮ್ಮೆಗೇ ನೀಡಬೇಕಾಗಿತ್ತು. ಪರೀಕ್ಷೆಯಲ್ಲಿ ಪಾಸಾಗಲು ಶೇಕಡ ಮೂವತ್ತೈದು ಅಂಕಗಳನ್ನು ಪಡೆದಿರಬೇಕು ಎಂಬ ನಿಯಮವಿದ್ದರೆ ಅಷ್ಟು ಪಡೆದ ಎಲ್ಲ ವಿದ್ಯಾರ್ಥಿಗಳೂ ತೇರ್ಗಡೆಗೊಳ್ಳಬೇಕಲ್ಲವೇ? ಆದರೆ ಮೊದಲು ತುರ್ತು ಪರಿಸ್ಥಿತಿ ಹೇರಿ ಆನಂತರ

ಸಚಿವ ಸಂಪುಟ ಸಭೆಯಲ್ಲಿ ಒಪ್ಪಿಗೆ ಪಡೆದ ಇಂದಿರಾ ಗಾಂಧಿ ಅವರ ವಾರಸುದಾರ ಸರ್ಕಾರ ಈಗಲೂ ಬೇಕಾದಂತೆ ಮಾಡಿ ಆಮೇಲೆ ನಿಯಮ ರೂಪಿಸಿದ್ದಾರೆ; ಇತರರಿಗೆ ಒಳ್ಳೆಯದಾಗುವುದನ್ನು ಸಹಿಸದವರು ನಿಯಮಗಳನ್ನೇ ಬದಲಿಸಲು ಹುನ್ನಾರ ನಡೆಸಿದ್ದಾರೆ. ಕನ್ನಡ-ಕನ್ನಡಿಗ-ಕರ್ನಾಟಕಗಳಿಗೆ ಆದ ಅನ್ಯಾಯವನ್ನು ಪ್ರತಿಭಟಿಸುವ ತಾಕತ್ತು ನಮ್ಮ ರಾಜಕಾರಣಿಗಳಿಗಿಲ್ಲ. ಬಹುತೇಕ ಜನರು ದೆಹಲಿಯ ಬಾಯ್ದಂಬುಲಕ್ಕೆ ಕೈಚಾಚುವವರು; ಇಲ್ಲ ಪರಸ್ಪರರ ಕಾಲೆಳೆಯುವ ಮತ್ತು ದುಡ್ಡು ಹೊಡೆಯುವ ದಂಧೆಯಲ್ಲಿ ಮುಳುಗಿರುವವರು. ತಮಿಳೆಂದರೆ ಪಕ್ಷಾತೀತವಾಗಿ ಬೆಂಬಲ ನೀಡುವ ಅಲ್ಲಿಯ ರಾಜಕಾರಣಿಗಳ ಮನೋಭಾವಕ್ಕೆ ವಿರುದ್ಧವಾಗಿ ನಮ್ಮವರು ಪಕ್ಷಾತೀತವಾಗಿಯೇ ಈ ವಿಷಯದಲ್ಲಿ ನಿಷ್ಕ್ರಿಯರು. ನಮ್ಮ ಮುಖ್ಯಮಂತ್ರಿಗಳು ಕನ್ನಡಕ್ಕಿಂತ ಉರ್ದುವನ್ನೇ ಹೆಚ್ಚು ಮಾತನಾಡುವವರು; ಕೆಮ್ಮಲು ಕೂಡ ದೆಹಲಿಯ ಅನುಮತಿ ಬೇಡುವವರು! ಉಳಿದವರಿನ್ನೇನು? ಇಂತಹ ವಿಚಾರಗಳ ಬಗ್ಗೆ ಸ್ವಂತವಾಗಿ ಆಲೋಚನೆ ಮಾಡುವ ಶಕ್ತಿಯೇ ಇವರಿಗಿಲ್ಲವಲ್ಲ!

ರಾಜ್ಯೋತ್ಸವದ ನೆಪದಲ್ಲಿ ಸಾರ್ವಜನಿಕ ಶಾಂತಿಯನ್ನು ಹಾಳುಮಾಡಿ, ದುಡ್ಡು ಕಮಾಯಿಸಿಕೊಂಡು ಧಾಂಧೂಂ ಮಾಡುವ ಹೋರಾಟಗಾರರು ಜನರಲ್ಲಿ ಕನ್ನಡತನವನ್ನು ಉದ್ದೀಪಿಸುವ ಕಾರ್ಯವನ್ನು ಮಾಡಬೇಕಾಗಿದೆ. ಕೆಲವು ಕಾಲದ ಹಿಂದೆ ಕನ್ನಡ ಚಳುವಳಿಗೆ ಒಂದಷ್ಟು ಮರ್ಯಾದೆ ಲಭಿಸಿತ್ತು; ಈಗ ಅದೂ ಮಾಯವಾಗುತ್ತಿದೆ. ಅಂದಂದಿನ ವಿಷಯಗಳಿಗೆ ಹೋರಾಟ ನಡೆಸಿ ತೇಪೆ ಕೆಲಸ ಮಾಡುವ ಬದಲು ಕನ್ನಡ ಚಳುವಳಿಯು ಕನ್ನಡತನದ ಮತ್ತು ತಾತ್ವಿಕತೆಯ ಗಟ್ಟಿ ನೆಲಗಟ್ಟಿನ ಮೇಲೆ ರೂಪುಗೊಳ್ಳಬೇಕಾಗಿದೆ. ಇರುವುದರಲ್ಲೇ ಗಿಂಜುವ ಮನೋಭಾವ ಬಿಟ್ಟು ಸಮಗ್ರವಾಗಿ ಹೋರಾಡುವ ದೂರದರ್ಶಿತ್ವದ ನಾಯಕತ್ವ ಇಂದಿನ ತುರ್ತು ಅಗತ್ಯ. ಈ ವಿಷಯದಲ್ಲಿ ನಾವು ಬೇರೆಯವರಿಂದ ಕಲಿಯಬೇಕಾದ್ದು ಬಹಳ ಇದೆ.

☆ - ☆ - ☆

# ಪ್ರಕೃತಿ – ಸಂಸ್ಕೃತಿ

ತಾನಾಗಿ ಮೊದಲಿನಿಂದಲೂ ಇರುವುದು ಪ್ರಕೃತಿ, ಮನುಷ್ಯ ತನ್ನ ಬುದ್ಧಿಬಲದಿಂದ ಸೃಷ್ಟಿಸಿಕೊಂಡದ್ದು ಸಂಸ್ಕೃತಿ. ಪ್ರಕೃತಿ ಅಗಾಧ, ಮಾನವ ಅದರ ಒಂದು ಕಿರು ಅಂಗ. ಆದರೂ ತನಗೆ ಅನುಭವಜನ್ಯ ಜ್ಞಾನ, ತಾರ್ಕಿಕ ಜ್ಞಾನ ಬೆಳೆದಂತೆಲ್ಲ ಅವನು ತನ್ನನುಕೂಲಕ್ಕೆ ತಕ್ಕಂತೆ ತನ್ನದೇ ಒಂದು ಪರಿಸರವನ್ನು ನಿರ್ಮಿಸಿಕೊಂಡಿದ್ದಾನೆ, ಅದನ್ನು ಅನುದಿನವೂ ವಿಸ್ತರಿಸುತ್ತಲೂ, ಬದಲಿಸುತ್ತಲೂ ಇದ್ದಾನೆ. ಆದರೆ ಪ್ರಕೃತಿಯ ಒಳ ರಚನೆ ಈ ಭರದಲ್ಲಿ ಮಾರ್ಪಾಟು ಹೊಂದುವುದಿಲ್ಲ. ಅದರಲ್ಲಿ ಯಾವುದೋ ಒಂದು ಸಮತೋಲ, ಅದರ ಭಾಗಗಳಲ್ಲಿ ಹೊಂದಾಣಿಕೆ ಇದ್ದೇ ಇದೆ. ಪರಸ್ಪರ ವಿರುದ್ಧವಾದವುಗಳಿದ್ದರೂ ಎರಡರಲ್ಲಿ ಒಂದು ಉಳಿದು ಇನ್ನೊಂದು ನಾಶವಾಗುವ ಪರಿಯಿಲ್ಲ. ಇದನ್ನೇ ಇಂಗ್ಲಿಷ್ ಕವಿ ಎಸ್.ಟಿ. ಕೋಲೆರಿಜ್ "ಪರಿಪೂರ್ಣತೆ" ಎಂಬ ಹೆಸರಿನಿಂದ ಕರೆದ; ಮನುಷ್ಯನ ಆದರ್ಶ ಎಂದರೆ ಈ ಪರಿಪೂರ್ಣತೆಯೇ ಎಂದು ಪ್ರತಿಪಾದಿಸಿದ. ಪ್ರಾಯಶಃ ಪ್ರಕೃತಿ ಪ್ರೇಮವೆಂದರೆ ಈ ಪರಿಪೂರ್ಣತೆಯ ಆರಾಧನೆಯೇ ಎಂದವನ ಅಭಿಪ್ರಾಯ.

ಅಗಾಧವೂ ಅಗಮ್ಯವೂ ಅಜ್ಞೇಯವೂ ಆದ ಈ ಪ್ರಕೃತಿಯ ಸ್ವರೂಪದ ಕೆಲವಂಶಗಳನ್ನು ಮನುಷ್ಯ ವಿಜ್ಞಾನದ ಮೂಲಕ ಆವಿಷ್ಕರಣಗೊಳಿಸಿಕೊಂಡು ಅವುಗಳ ಸಹಾಯದಿಂದ ತನಗೆ ಅನನುಕೂಲಕರವಾದ ಕೆಲವು ವಿಷಯಗಳ ತೊಡಕುಗಳನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದ್ದಾನೆ, ಅನೇಕ ಬಗೆಗಳಲ್ಲಿ ಯಶಸ್ವಿಯೂ ಆಗಿದ್ದಾನೆ. ಆದರೆ ಅವನು ಇಡೀ ಪ್ರಕೃತಿಯಲ್ಲಿ ತಾನೇ ಇರುವುದು ಎಂಬಂತೆ ಇತರ ಎಲ್ಲವನ್ನು ಅವಜ್ಞೆ ಮಾಡಿ ತನ್ನ ಅನುಕೂಲವನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಹೊಸ ಅನ್ವೇಷಣೆಗಳನ್ನು ಮಾಡುವುದರಿಂದ ಪ್ರಕೃತಿಯ ಸಮತೋಲನ ಏರುಪೇರಾಗಿ ಅನೇಕ ಪ್ರಾಕೃತಿಕ ವೈಪರೀತ್ಯಗಳಾಗುತ್ತವೆಂಬುದನ್ನು ವಿಜ್ಞಾನಿಗಳೇ ಎತ್ತಿ ತೋರಿಸಿದ್ದಾರೆ; ವಿಜ್ಞಾನ–ತಂತ್ರಜ್ಞಾನಗಳು ಪ್ರಕೃತಿಯ ಮೇಲಣ ಅತ್ಯಾಚಾರವಾಗದಂತೆ ನಿಗಾ ವಹಿಸಬೇಕೆಂದೂ ಎಚ್ಚರಿಕೆ ನೀಡುತ್ತಿದ್ದಾರೆ.

ಪ್ರಕೃತಿಯ ಒಳ ಹೊಂದಾಣಿಕೆಯನ್ನು ಅರಿಯದೆ, ತನ್ನ ದೃಷ್ಟಿಕೋನದಿಂದ ಮಾತ್ರ ನೋಡಿದರೆ ಏನಾಗಬಹುದೆಂಬುದನ್ನು ವಿವರಿಸಲು ಚೀನಾದಲ್ಲಿನ ಸಾಂಸ್ಕೃತಿಕ

ಕ್ರಾಂತಿಯ ಕಾಲದಲ್ಲಿ ನಡೆಯಿತೆನ್ನಲಾದ ಒಂದು ಪ್ರಸಂಗವನ್ನು ಹೇಳಬಹುದು. ಅದು ಕೃಷಿ ಪ್ರಧಾನ ದೇಶ; ಹಾಗಾಗಿ ಅಲ್ಲಿನ ಕ್ರಾಂತಿ ಕೃಷಿಯ ಬೆಳವಣಿಗೆಗೇ ಪ್ರಾಧಾನ್ಯ ನೀಡಿತು. ವ್ಯವಸಾಯಯೋಗ್ಯ ಭೂಮಿಯನ್ನು ಕಮ್ಯೂನ್‌ಗಳಾಗಿ ವಿಂಗಡಿಸಿ ಸುತ್ತಮುತ್ತಲ ಎಲ್ಲ ಜನ ಸೇರಿ ಅದರಲ್ಲಿ ದುಡಿಯುವ ವ್ಯವಸ್ಥೆ ಬಂತು. ಹೀಗಿರ ಬೇಕಾದರೆ, ಸೂಕ್ಷ್ಮಜ್ಞನಾದ ಒಬ್ಬ ಕೃಷಿ ಪಂಡಿತ ಒಮ್ಮೆ ಒಂದು ಅಂಶವನ್ನು ಗಮನಿಸಿದ. ಅಲ್ಲಿ ಗುಬ್ಬಚ್ಚಿಗಳದು ಹೆಚ್ಚು ಸಂಖ್ಯೆ. ಈ ಅಸಂಖ್ಯಾತ ಹಕ್ಕಿಗಳು ಬೆಳೆದು ನಿಂತ ತೆನೆಗಳಲ್ಲಿನ ಕಾಳುಗಳನ್ನು ತಿಂದು ಇಳುವರಿ ಕಡಿಮೆಯಾಗುತ್ತಿದೆ; ಹಾಗಾಗಿ ಗುಬ್ಬಚ್ಚಿಗಳನ್ನು ನಿಯಂತ್ರಿಸಬೇಕು ಎಂಬುದೇ ಅದು. ಸರಿ, ಈ ವಿಷಯ ಮಾವೋ ಯಜಮಾನಿಕೆಯ ಸರ್ಕಾರದ ಗಮನಕ್ಕೆ ಬಂತು. ಈ ಅಂಶ ಅವನ ಗಮನ ಸೆಳೆಯಿತು, ಅದರ ನಿಯಂತ್ರಣಕ್ಕೆ ಆಜ್ಞೆ ಮಾಡಿದ. ಮನುಷ್ಯರು ಕಷ್ಟಪಟ್ಟು ಬೆಳೆದ ಕಾಳುಗಳನ್ನು ತಿಂದು ತೇಗುವ ಈ ಪುಟ್ಟ ಹಕ್ಕಿಗಳನ್ನು ಪ್ರಭುವಿನ ಆಶಯದಂತೆ "ರೈತರ ಶತ್ರು" ಎಂದು ಸಾರಲಾಯಿತು.

ಈ ತುಡುಗುಗಳನ್ನು ಇಲ್ಲವಾಗಿಸಲು ಸರ್ಕಾರ ಪಣ ತೊಟ್ಟಿತು; ಕವಣೆಕಲ್ಲಿನಿಂದ ಗುರಿಯಿಟ್ಟು ಹೊಡೆದು ತೆನೆಗಳ ಕಾಳು ತಿನ್ನಲು ಬರುವ ಗುಬ್ಬಚ್ಚಿಗಳನ್ನು ಹೊಡೆದುರುಳಿಸುವ ತರಬೇತಿಯನ್ನು ಎಲ್ಲ ರೈತಾಪಿ ಜನರಿಗೆ ಕೊಡುವ ಕಾರ್ಯಕ್ರಮ ವ್ಯಾಪಕವಾಗಿ ಜಾರಿಯಾಯಿತು. ಅದು ಕಟ್ಟುನಿಟ್ಟಿನ ಕಮ್ಯೂನಿಸ್ಟ್ ದೇಶ ತಾನೇ; ಯಾರೂ ತಮ್ಮ ಕರ್ತವ್ಯದಲ್ಲಿ ಪಾಲುಮಾರುವ ಹಾಗಿರಲಿಲ್ಲ; ಎಲ್ಲ ರೈತರೂ, ದೊಡ್ಡವರು ಚಿಕ್ಕವರೆನ್ನದೆ, ಗಂಡಸುಹೆಂಗಸುಮಕ್ಕಳಾದಿಯಾಗಿ ತರಬೇತಿ ಪಡೆದು "ಗುಬ್ಬಚ್ಚಿ ನಿರ್ಮೂಲನ ಕಾರ್ಯಕ್ರಮ"ದಲ್ಲಿ ಉತ್ಸಾಹದಿಂದ ಭಾಗಿಯಾದರು. ದಿನ ಕಳೆದಂತೆ ಎಲ್ಲರ ಕವಣೆಕಲ್ಲಿನ ಗುರಿ ಹೆಚ್ಚು ಹೆಚ್ಚು ನಿಖರವಾಗುತ್ತ ಸಾಗಿತು; ದಿನವಹಿ ಅವರೆಲ್ಲ ಸೇರಿ ಹೊಡೆದುರುಳಿಸುತ್ತಿದ್ದ ಗುಬ್ಬಚ್ಚಿಗಳ ಸಂಖ್ಯೆ ಕ್ರಮೇಣ ಜಾಸ್ತಿಯಾಯಿತು. ರೈತನ ಶತ್ರುವಿನ ಮೇಲಣ ದಾಳಿ ಯಶಸ್ವಿಯಾಯಿತು; ಬರುವ ವರ್ಷ ತಮ್ಮ ದುಡಿಮೆಗೆ ಹೆಚ್ಚು ಫಲ ಬರುವುದೆಂಬ ಭರವಸೆ ಎಲ್ಲರಲ್ಲಿ ಮೂಡಿತು. ತಮ್ಮ ಯೋಜನೆ ಯಶಸ್ವಿಯಾಯಿತೆಂದು ಕೃಷಿ ಪಂಡಿತರು ಬೀಗಿದರು; ಬಹು ಉಪಯುಕ್ತವಾದ ಸಲಹೆಯನ್ನು ಕೊಟ್ಟುದಕ್ಕಾಗಿ ಸರ್ಕಾರ ಅವರನ್ನು ಅಭಿನಂದಿಸಿತು. ಆ ಸಲಹೆಯಿತ್ತವರಿಗೆ ಸೂಕ್ತ ಬಹುಮಾನವೂ ಸಿಕ್ಕಿರಬೇಕು!

ಸುಗ್ಗಿ ಬಂತು. ಈ ಹಕ್ಕಿ ಪಿಡುಗಿದ್ದ ಪ್ರದೇಶಗಳಲ್ಲೆಲ್ಲ ರೈತರು ಬೆಳೆಯನ್ನು ಕಟಾವು ಮಾಡಲು ತೊಡಗಿದರು. ಎಲ್ಲರ ಮನಸ್ಸಿನಲ್ಲಿ ಹೆಚ್ಚು ಫಸಲಿನ ಆಸೆ ಯಿದ್ದುದರಿಂದ ಅವರ ಕುಡುಗೋಲಿಗೆ ಹೆಚ್ಚು ಚುರುಕು ಬಂದಿತ್ತು; ವ್ಯವಸಾಯದ ಉಸ್ತುವಾರಿ ಹೊತ್ತ ಅಧಿಕಾರಿಗಳ ಮನಸ್ಸು ಗರಿಗೆದರತೊಡಗಿತು. ಗಾಳಿಯಲ್ಲೆಲ್ಲ ನಿರೀಕ್ಷೆ ಭರವಸೆ ತುಂಬಿಕೊಂಡವು. ಕೊಯ್ಲಿನ ಕೆಲಸ ಮುಗಿಯಿತು; ಕಾಳು ಒಕ್ಕಿದ್ದೂ ಆಯಿತು. ನೋಡಿದರೆ ಕಳೆದ ವರ್ಷಕ್ಕಿಂತ ಇಳುವರಿ ಕಡಿಮೆ! ಎಲ್ಲರಿಗೂ ಸೋಜಿಗ;

ತಮ್ಮ ಲೆಕ್ಕಚಾರ ಎಲ್ಲಿ ತಲೆಕೆಳಗಾಯಿತೆಂದು ಕೃಷಿಪಂಡಿತರು ತಲೆ ಕೆರೆದುಕೊಂಡರು. ಸಲಹೆ ಕೊಟ್ಟವರ ಮೇಲೆ ಸರ್ಕಾರ ಸಿಟ್ಟಾಯಿತು. ಗುಬ್ಬಚ್ಚಿ ನಿರ್ಮೂಲನೆಯಾದರೂ ಬೆಳೆ ಕಡಿಮೆ ಆದುದೇಕೆ ಎಂದು ಪತ್ತೆ ಮಾಡಲು ಮತ್ತೊಂದು ಸಮಿತಿ ನೇಮಕ ಗೊಂಡಿತು

ಎರಡನೇ ಸಮಿತಿ ಈ ಸಲ ತುಂಬ ಕೂಲಂಕಷವಾಗಿ ಸಮಸ್ಯೆಯನ್ನು ಪರಿಶೀಲಿಸಿತು; ಇನ್ನೊಂದು ನಿಟ್ಟಿನಿಂದ ವಿಷಯವನ್ನು ವಿಶ್ಲೇಷಿಸಿತು. ಅದು ಪತ್ತೆ ಮಾಡಿದ್ದು ಇದು: ಕೃಷಿಪಂಡಿತರು ಹಿಂದೆ ಹೇಳಿದ್ದಂತೆ ಗುಬ್ಬಚ್ಚಿಗಳಿಂದ ಸಾಕಷ್ಟು ಪ್ರಮಾಣದ ಕಾಳು ಕಡಿಮೆಯಾಗುತ್ತಿದ್ದುದು ನಿಜ; ಆದರೆ ಗುಬ್ಬಚ್ಚಿ ತಾನು ತಿಂದ ಕಾಳಿಗಿಂತ ಹೆಚ್ಚಿನ ಬೆಲೆಯ ಸೇವೆ ಮಾಡುತ್ತಿತ್ತು; ಅದು ತಿನ್ನುತ್ತಿದ್ದುದು ಬರೀ ಕಾಳುಗಳನ್ನಲ್ಲ, ಪೈರನ್ನೇ ನಾಶಮಾಡುವ ಹುಳುಹುಪ್ಪಟೆಗಳನ್ನೂ. ಹೀಗಾಗಿ ಅವು ತೆನೆಗಳಲ್ಲಿ ಸಾಕಷ್ಟು ಕಾಳು ಉಳಿಯುವ ಹಾಗೆ ಮಾಡುತ್ತಿದ್ದವು. ಆದ್ದರಿಂದ ಗುಬ್ಬಚ್ಚಿಗಳು "ರೈತರ ಮಿತ್ರ"ರೇ ಹೊರತು ಶತ್ರುಗಳಲ್ಲ. ಕಡಿಮೆ ತಿಂದು ನಿಯತ್ತಿನಿಂದ ಕೀಟಸಂಹಾರ ಮಾಡುವ ಗುಬ್ಬಚ್ಚಿಗಳ ಸಂಖ್ಯೆಯನ್ನು ವೃದ್ಧಿಪಡಿಸಬೇಕು ಎಂಬುದು ಈ ಸಮಿತಿಯ ಶಿಫಾರಸು. ಅದನ್ನೊಪ್ಪಿದ ಸರ್ಕಾರ ರೈತರು ಗುಬ್ಬಚ್ಚಿಗಳನ್ನು ಸಾಕುವಂತೆ ರೈತರಿಗೆ ಆದೇಶಿಸಿತು!

☆ – ☆ – ☆

# ಕಾಲ ಕೆಡುತ್ತಿ(ತ್ತ)ದೆಯೇ?

ಒಂದು ನಂಬಿಕೆಯಿದೆ: ಧರ್ಮ ಎಂಬ ಹಸು ಕೃತಯುಗದಲ್ಲಿ ತನ್ನ ನಾಲ್ಕೂ ಕಾಲುಗಳ ಮೇಲೆ ನಿಂತಿರುತ್ತದೆ; ತ್ರೇತಾಯುಗದಲ್ಲಿ ಮೂರು ಕಾಲುಗಳ ಮೇಲೆ; ದ್ವಾಪರಯುಗದಲ್ಲಿ ಎರಡು ಕಾಲುಗಳ ಮೇಲೆ; ಹಾಗೂ ಕಲಿಯುಗದಲ್ಲಿ ಒಂದೇ ಕಾಲಿನ ಮೇಲೆ ನಿಂತಿರುತ್ತದೆ ಎಂದು. ಅಂದರೆ ಬರಬರುತ್ತ ಜನರಲ್ಲಿ ಧರ್ಮಪ್ರವೃತ್ತಿ ಕಡಿಮೆಯಾಗುತ್ತದೆ ಎಂದು ತಾತ್ಪರ್ಯ. ವಯಸ್ಸಾದವರು ಸಾಮಾನ್ಯವಾಗಿ "ಕಾಲ ಕೆಟ್ಟು ಹೋಯಿತು" ಎಂದೋ "ಕಲಿಗಾಲವಲ್ಲವೇ!" ಎಂದೋ ಉದ್ಗರಿಸುವುದನ್ನು ಕೇಳುತ್ತಿರುತ್ತೇವೆ. "ಇಂಥ ಕಾಲದಲ್ಲಿ ಮಳೆಬೆಳೆ ಸರಿಯಾಗಿ ಹೇಗೆ ಆಗುತ್ತದೆ!" ಎಂದು ವಿಷಾದಿಸುತ್ತಾರೆ. ಕಾಲ ಕೆಡುತ್ತದೆ ಎಂದರೆ ಕಾಲ ಸರಿದಂತೆ ಜನರು ಅನೀತಿ ವಂತರಾಗುತ್ತಾರೆ, ಮೌಲ್ಯಗಳನ್ನು ಕಳೆದುಕೊಳ್ಳುತ್ತಾರೆ ಎಂದರ್ಥ. ವಯಸ್ಸಾದವರಿರಲಿ, ಇತರರ ಬಗ್ಗೆ ಟೀಕಿಸುವ ಅವಕಾಶ ಸ್ವಲ್ಪ ಸಿಕ್ಕರೂ ಸಾಕು, ಚಿಕ್ಕವರೂ ಹಾಗೇ ಮಾತಾಡುತ್ತಾರೆ. ಕೆಲವು ಉಪಾಧ್ಯಾಯರು "ಈಗಿನ ಕಾಲದ ಹುಡುಗರಿಗೆ ಬುದ್ಧಿ ಹೇಳಲು ಸಾಧ್ಯವೇ?" ಎಂದು ಲೊಚಗುಟ್ಟುತ್ತಾರೆ. ನೋಡಿದರೆ, ಅವರು ಓದು ಮುಗಿಸಿ ಉಪಾಧ್ಯಾಯರಾಗಿ ಐದು ವರ್ಷವೂ ಆಗಿರುವುದಿಲ್ಲ!

ಕಾಲ ಕೆಡುತ್ತದೆಯೇ ಅಥವಾ ಕಾಲ ಕಳೆದಂತೆ ಜನರು ದುಷ್ಟರಾಗುತ್ತ ಹೋಗುತ್ತಾರೆಯೇ ಎಂಬುದು ಪ್ರಶ್ನೆ. ನಮ್ಮ ಕಾಲವೇ ಶ್ರೇಷ್ಠ ಎಂಬುದು ಬರಿ ಅಭಿಮಾನದ ಪ್ರಶ್ನೆ ಎಂದು ನನಗನ್ನಿಸುವುದಿಲ್ಲ; ಅದು ಕಾಲ ವ್ಯಕ್ತಿಯ ಮೇಲೆ ಮಾಡಿದ ಪರಿಣಾಮ ಮಾತ್ರವೂ ಅಲ್ಲ, ಅದು ವ್ಯಕ್ತಿಯ ಮನಸ್ಸಿನ ಮುಕ್ತತೆ ಹೋಗುತ್ತಿರುವುದರ ಸಂಕೇತ ಎನ್ನಿಸುತ್ತದೆ. ಹಿಂದಿನ ಕಾಲದಲ್ಲಿ ಎಂಥೆಂಥ ಮಹಾತ್ಮರು ಎಂಥ ಋಷಿಮುನಿಗಳು ಇದ್ದರು ಎಂದು ಪೌರಾಣಿಕ ವ್ಯಕ್ತಿಗಳನ್ನು ಉದಹರಿಸುವವರಿಗೆ ಆ ಕಾಲದಲ್ಲಿದ್ದ ದುಷ್ಟ ವ್ಯಕ್ತಿಗಳು ನೆನಪಿಗೆ ಬರುವುದೇ ಇಲ್ಲವೇನೋ. ಧರ್ಮರಾಯನ ಬಗ್ಗೆ ಹೇಳುವವರು ದುರ್ಯೋಧನನ್ನು ಮರೆತಿರುತ್ತಾರೆ, ರಾಮನ ಬಗ್ಗೆ ಹೇಳುವವರು ರಾವಣನನ್ನು ಗಮನಿಸುವುದಿಲ್ಲ.

ಕಾಲ ಒಂದು ರೀತಿಯಲ್ಲಿ ಕೆಡಬಹುದು. ಉದಾಹರಣೆಗೆ, ಈಗಿನ ತಂತ್ರ ಜ್ಞಾನದ ವೇಗದಿಂದಾಗಿ ಜೀವನದ ಸೂಕ್ಷ್ಮಗಳನ್ನು ನಾವು ಕಳೆದುಕೊಳ್ಳುತ್ತಿರುವುದು; ಮಾಲಿನ್ಯ ಹೆಚ್ಚುತ್ತಿರುವುದು; ಬದುಕು ಯಾಂತ್ರಿಕವಾಗುತ್ತಿರುವುದು ಇತ್ಯಾದಿ. ಹಿಂದೆ

ಇವುಗಳಿಗೆ ಸಂವಾದಿಯಾದ ಬೇರೆ ಬಗೆಯ ಪರಿಸ್ಥಿತಿ ಇದ್ದಿರಬಹುದು. ಪೌರಾಣಿಕ ವ್ಯಕ್ತಿಗಳ ಬಗ್ಗೆ ಮಾತನಾಡುತ್ತ ಎಷ್ಟೋ ವೇಳೆ ವಯಸ್ಸಾದವರು, ದಶರಥ ಎಂಬತ್ತು ಸಾವಿರ ವರ್ಷ ಬದುಕಿದ ಎಂದೋ, ಭರತ ಇಪ್ಪತ್ತು ಸಾವಿರ ವರ್ಷ ರಾಜ್ಯಭಾರ ಮಾಡಿದ ಎಂದೋ; ಅವರು ಹತ್ತು ಅಡಿ ಎತ್ತರ ಇದ್ದರು, ಅವರ ತೋಳುಗಳು ನಮ್ಮ ತೊಡೆಗಳಿಗಿಂತ ಹೆಚ್ಚು ಗಾತ್ರದವು ಎಂದೋ ಹೇಳುವರಾದರೂ ವಾಸ್ತವವಾಗಿ, ಪ್ರಾಕೃತಿಕ ವಿಕೋಪಗಳಿಗೆ, ರೋಗಗಳಿಗೆ ಈಗಿಗಿಂತ ಹಿಂದೆ ಹೆಚ್ಚು ಜನ ಬಲಿಯಾಗುತ್ತಿದ್ದರಲ್ಲವೇ?

ಯಾವುದೇ ಕಾಲದಲ್ಲಿ ನೂರಕ್ಕೆ ನೂರು ಭಾಗ ಒಳ್ಳೆಯ ಅಥವಾ ಕೆಟ್ಟ ವ್ಯಕ್ತಿ ಇರುವುದು ಹೇಗೆ ಅಸಂಭವವೋ ಹಾಗೆಯೇ ಬರಿ ಒಳ್ಳೆಯದಾಗಲೀ ಬರಿ ಕೆಟ್ಟುದಾಗಲೀ ಇರುವುದು ಸಾಧ್ಯವೇ ಇಲ್ಲ. ಅಲ್ಲದೆ, ಒಳ್ಳೆಯದು ಕೆಟ್ಟುದು ಎಂಬುದು ಕೇವಲ(absolute) ಮೌಲ್ಯಗಳಲ್ಲ; ಅವುಗಳನ್ನು ಕಾಲದೇಶಗಳ ಹಿನ್ನೆಲೆಯಲ್ಲಿ ಮಾತ್ರ ಬೆಲೆಗಟ್ಟಬಹುದು. ಹಿಂದೆ ಶ್ರೇಷ್ಠವಾದದ್ದು ಇವತ್ತು ಕ್ಷುಲ್ಲಕವಾಗಬಹುದು; ಹಿಂದೆ ಅಮೂಲ್ಯವೆನಿಸಿದ್ದು ಇವತ್ತು ಅಮಾನವೀಯ ಎನ್ನಿಸಬಹುದು. ಹಿಂದೆ ರಾಜನೊಬ್ಬ ನಿಗೆ ಲೆಂಕ ತನ್ನ ಪ್ರಾಣವನ್ನೇ ಒಪ್ಪಿಸುವ ಸ್ವಾಮಿನಿಷ್ಠೆ ತೋರಿಸಿರಬಹುದು; ಈಗ ಅಂಥ ರಾಜಭಕ್ತಿಗೆ ಅವಕಾಶವೇ ಇಲ್ಲ. ಹಿಂದಿನ ಆಡಳಿತಗಾರನಿಗೆ ಜಾತಿಗಳು ಬೆರೆಯದಿರುವಂತೆ ನೋಡಿಕೊಳ್ಳುವುದು ಪವಿತ್ರ ಕರ್ತವ್ಯವಾಗಿದ್ದುದು ಇಂದು ಜಾತಿವಿನಾಶವೇ ಆದರ್ಶವೆನ್ನಿಸಬಹುದು. ಹಿಂದೆ ಪಾತಿವ್ರತ್ಯ ಬಹು ದೊಡ್ಡ ಮೌಲ್ಯ, ಆದರೆ ಇವತ್ತು ಸ್ತ್ರೀಸಮಾನತೆ ನಮ್ಮ ಗುರಿ.

ಅಲ್ಲದೆ, ಬದಲಾದ ಮನೋಭಾವದ ಕಾರಣದಿಂದ ಹಿಂದಿನವರ ಸ್ವಭಾವ ವಿಶ್ಲೇಷಣೆ ಮಾಡುವ ರೀತಿಯೂ ವ್ಯತ್ಯಾಸವಾಗಿದೆ. ಹಿಂದಿನದೆಲ್ಲ ಸರಿ ಎಂಬ ನಂಬಿಕೆ ಬಲವಾಗಿರುವವರಿಗೆ ರಾಮನ ಪುರುಷೋತ್ತಮತ್ವ ಕಾಣುತ್ತದೆಯೇ ಹೊರತು, ಅವನು ಸೀತೆಗೆ ಮಾಡಿದ ಅನ್ಯಾಯ ಕಾಣದು; ದುರ್ಯೋಧನನ ದುಷ್ಟತನ ಮುಖಕ್ಕೆ ಬಡಿದಂತಾಗುವುದೇ ವಿನಾ ಕರ್ಣನಿಗೆ ಅವನು ಕೊಟ್ಟ ಹೊಸ ಬದುಕು ಗಮನಕ್ಕೆ ಬರುವುದೇ ಇಲ್ಲ. ಹಿಂದೆ ಸರಿಯಾದದ್ದು ಬದಲಾದ ಪರಿಸ್ಥಿತಿಯಲ್ಲಿ ಸರಿಯಾಗಿ ಕಾಣದಿರಬಹುದು ಎಂಬ ಅರಿವು ಇಂಥವರಿಗಿರುವುದಿಲ್ಲ. ಅವರದು ಸದಾ ಹಳೆಯ ಮಾನದಂಡಗಳಿಂದ ಮೌಲ್ಯಮಾಪನ ಮಾಡುವ ರೀತಿ. ಇಂಥವರು ಒಂದು ಕಾಲದಲ್ಲಿ ಮಾತ್ರ ಇರುವವರಲ್ಲ. ಮನಸ್ಸಿನ ಮುಕ್ತತೆ ಮತ್ತು ಹೊಂದಾಣಿಕೆಯ ಸ್ವಭಾವ ಕುಂಠಿತಗೊಂಡಾಗ 'ಕಾಲ ಕೆಟ್ಟಿತು' ಎಂದು ಅನ್ನಿಸುತ್ತದೆ. ಹಾಗಾಗಿ ಸ್ವಲ್ಪ ವಯಸ್ಸಾದರೆ ಅವರಿಗೆ ಕಾಲ ಕೆಟ್ಟಂತೆ ಗೋಚರಿಸುತ್ತದೆ. ಅಥವಾ ಹೀಗೂ ಹೇಳಬಹುದು: 'ಕಾಲ ಕೆಟ್ಟಿದೆ' ಅನ್ನಿಸುವ ವ್ಯಕ್ತಿಯ ಬೆಳವಣಿಗೆ ನಿಂತಿದೆ. ಕಾಲದ ಬದಲಾದ ಸ್ಥಿತಿಗೆ ಹೊಂದಿಕೊಂಡು ಹೋಗುವವನಿಗೆ, ಅದನ್ನು ಸೂಕ್ತ ಹಿನ್ನೆಲೆಯಲ್ಲಿ ಪರಿಶೀಲಿಸಬಲ್ಲವನಿಗೆ ಕಾಲದಲ್ಲಿ ಏನೂ ಕೆಡುಕು ಕಾಣಿಸದು.

ಹಳೆಯದಕ್ಕೆ ಜೋತು ಬಿದ್ದು, ಎಲ್ಲವನ್ನೂ ಅದರಿಂದಲೇ ಅಳೆಯ ಹೊರಡುವವರು ಎಲ್ಲ ಕಾಲದಲ್ಲೂ ಇದ್ದರು, ಇರುತ್ತಾರೆ; ಹಾಗೆಯೇ ಹೊಸತಕ್ಕೆ ಹೊಂದಿಕೊಂಡು ಸಹಾನುಭೂತಿಪರವಾಗಿ ವಿಶ್ಲೇಷಣೆ ಮಾಡಬೇಕೆನ್ನುವವರೂ ಎಲ್ಲ ಕಾಲದಲ್ಲಿಯೂ ಇರುತ್ತಾರೆ. "ಪುರಾಣಮಿತ್ಯೇವ ನಸಾಧು ಸರ್ವಂ, ನಚಾಪಿ ಸರ್ವಂ ನವಮಿತ್ಯವದ್ಯಂ" (ಹಿಂದಿನದೆಲ್ಲ ಒಳ್ಳೆಯದೂ ಅಲ್ಲ, ಹೊಸತಾದುದೆಲ್ಲ ಕೆಟ್ಟುದೂ ಅಲ್ಲ) ಎಂದು ಕಾಳಿದಾಸನೇ ಹೇಳಿದ್ದಾನಲ್ಲ. ಹೊಸ ದೃಷ್ಟಿಕೋನದಿಂದಾಗಿಯೇ ಕಾವ್ಯವಸ್ತು ಹಳೆಯದಾದರೂ, ದೃಷ್ಟಿ ಹೊಸದಾಗಿ ಕಾವ್ಯವೂ ಹೊಸ ರೂಪವನ್ನು ಪಡೆದಿರುವುದನ್ನು ಕಾಣಬಹುದು. ನಮ್ಮ ಪಂಪರನ್ನನಾಗಚಂದ್ರರಂತಹ ಕವಿಗಳು ಈ ಹೊಸ ದೃಷ್ಟಿಯಿಂದಲೇ ಸಾಂಪ್ರದಾಯಿಕವಾಗಿ ಖಳರೆಂಬ ಹಣೆಪಟ್ಟಿ ಹೊತ್ತ ಪಾತ್ರಗಳ ಮಾನವೀಯ ಮುಖವನ್ನು ಕಾಣಿಸಲು ಸಾಧ್ಯವಾದದ್ದು.

ಒಂದು ಅವಧಿಯಲ್ಲಿ ಹೊರ ಬದುಕಿನ ಸ್ತರಗಳನ್ನು ಅಳೆಯುವಷ್ಟು ಸುಲಭವಾಗಿ ಒಳಸತ್ವವನ್ನು ಅಳೆಯುವುದು ಸಾಧ್ಯವಿಲ್ಲ. ಒಂದು ಕಾಲದ ಜನರ ಸತ್ಯವಂತಿಕೆ, ಪ್ರಾಮಾಣಿಕತೆ, ಕಾರುಣ್ಯಪರತೆ, ಕರ್ತವ್ಯಪ್ರಜ್ಞೆ ಇಂತಹ ಮಾನವೀಯ ಮೌಲ್ಯಗಳನ್ನು ಅಳೆಯುವುದಾದರೂ ಹೇಗೆ? ನಮಗೆ ಸರಿಹೋಗಲಿಲ್ಲ ಎಂಬ ಕಾರಣಕ್ಕಾಗಿ, ನಮ್ಮ ಸಂಕುಚಿತ ದೃಷ್ಟಿಕೋನದಿಂದಾಗಿ ಕಾಲವನ್ನು ತೆಗಳುವುದು ಸರಿಯಲ್ಲ. ಎಲ್ಲ ಕಾಲವೂ ಒಂದೇ; ಜನ ಬದಲಾಗುತ್ತಾರೆ, ಮೌಲ್ಯಗಳು ಬದಲಾಗುತ್ತವೆ. ಕಾಲ ಕೆಟ್ಟಂತೆ ಕಾಣಿಸಬಹುದು, ಆದರೆ ಕೆಟ್ಟಿರುವುದು ನಮ್ಮ ದೃಷ್ಟಿಕೋನ ಅಷ್ಟೆ.

☆ – ☆ – ☆

# ಹಳಗನ್ನಡ – ಹೊಸ ಪೀಳಿಗೆ

ಕನ್ನಡ ಭಾಷೆಯ ಇತಿಹಾಸ ಎರಡು ಸಾವಿರ ವರ್ಷಗಳಷ್ಟು. ನಮ್ಮ ಭಾಷೆಯ ಬೆಳವಣಿಗೆಯನ್ನು ಮೂರು ಹಂತಗಳಾಗಿ ವಿಂಗಡಿಸುವುದು ವಾಡಿಕೆ: ಹಳಗನ್ನಡ, ನಡುಗನ್ನಡ, ಹೊಸಗನ್ನಡ. ಪಂಪನಂತಹ ಹಿಂದಿನ ಕವಿಯ ಕಾವ್ಯವನ್ನು ಓದುವುದು ಸಾಕಷ್ಟು ಕನ್ನಡ ಬಲ್ಲವರಿಗೂ ಕಷ್ಟ; ಇನ್ನು ಸಾಮಾನ್ಯರ ಪಾಡೇನು? ಆದರೆ ಅದೂ ಕನ್ನಡವೇ. ಅರ್ಥವಾಗದಿದ್ದರೂ ಅದನ್ನು ಕನ್ನಡವಾಗಿ ಮಾಡಿರುವುದು ಯಾವುದು? ಅದೆಂದರೆ ಯಾವತ್ತೂ ಬದಲಾವಣೆಯಾಗದ ಕೆಲವು ಮೂಲಭೂತ ಅಂಶಗಳು. ಇದು ಕನ್ನಡಕ್ಕೆ ಮಾತ್ರ ವಿಶಿಷ್ಟವೇನಲ್ಲ. ಎಲ್ಲ ಭಾಷೆಗಳಿಗೂ ಬದಲಾಗದ ಇಂತಹ ಅಂಶಗಳಿರುತ್ತವೆ; ಹಾಗಾಗಿ ತಟ್ಟನೆ ಅರ್ಥವಾಗದಿದ್ದರೂ ಅದು ಆ ಭಾಷೆಯೇ ಆಗಿರುತ್ತದೆ. ಹಿಂದಿನ ಪರಂಪರೆಯ ಅರಿವು ಎಲ್ಲ ಕಾಲದವರಿಗೂ ಬೇಕಾದ್ದೇ. ಆದರೆ ಅದನ್ನು ಮೂಡಿಸುವುದು ಹೇಗೆ?

ಎಲ್ಲರಿಗೂ ಹಳಗನ್ನಡದ ಇಂದಿನವರೆಗಿನ ಮಾರ್ಪಾಟುಗಳನ್ನು ವಿಶದವಾಗಿ ತಿಳಿಸಲು ಸಾಧ್ಯವಿಲ್ಲ. ಕನ್ನಡವನ್ನು ಒಂದು ಭಾಷೆಯಾಗಿ ಓದುವ ವಿದ್ಯಾರ್ಥಿಗಳಿಗೆ ಅಲ್ಪ ಸ್ವಲ್ಪ ಹಳಗನ್ನಡ ಕಾವ್ಯಭಾಗಗಳನ್ನು ಪಠ್ಯವಾಗಿ ಇಟ್ಟಿರುತ್ತಾರೆ. ವಿದ್ಯಾರ್ಥಿಗಳು ಹೇಗೋ ಪಾಸಾಗುತ್ತಾರೆ. ಎಂ.ಎ. ಓದುವ ವಿದ್ಯಾರ್ಥಿಗಳಿಗೂ ಇದರ ತಿಳಿವಳಿಕೆ ಬಹು ಸೀಮಿತವಾದದ್ದೇ. ಮಿಕ್ಕ ಅನೇಕ ವಿಷಯಗಳ ಜೊತೆಗೆ ಒಂದೆರಡು ಕಾವ್ಯಗಳ ಮೂರ್‍ನಾಲ್ಕು ಆಶ್ವಾಸಗಳನ್ನಷ್ಟೇ ಆ ಕೋರ್ಸಿನಲ್ಲಿ ಓದಲು ಸಾಧ್ಯವಾಗುವುದು. ಅಲ್ಲದೆ ಈಗ ಹಳಗನ್ನಡ ಕಾವ್ಯಗಳನ್ನು ಓದದೆಯೇ ಎಂ.ಎ. ಮಾಡಬಹುದು. ಅವರು ಮೇಷ್ಟರಾಗಿ ಬಂದಾಗ ತಮ್ಮ ವಿದ್ಯಾರ್ಥಿಗಳಿಗೆ ಹಳಗನ್ನಡ ಕಾವ್ಯಭಾಗವನ್ನು ಪಾಠ ಮಾಡಬೇಕಾದರೆ ಅವರು ಕಷ್ಟಪಡುತ್ತಾರೆ. ಪಠ್ಯಪುಸ್ತಕದ ಕೊನೆಗೆ ಅದಕ್ಕೆ ಸಂಬಂಧಿಸಿದ ಟಿಪ್ಪಣಿ ಇದ್ದರೆ ಅದನ್ನು ಓದಿಕೊಂಡು ಪಾಠ ಹೇಳಬಹುದು; ಇಲ್ಲದಿದ್ದರೆ ಯಾರಾದರೂ ಅನುವಾದ ಮಾಡಿದ್ದರೆ ಆ ಕೃತಿಗಳ ಸಹಾಯ ಪಡೆಯಬಹುದು.

ಈಗಿನ ಪೀಳಿಗೆಗೆ ಹಳಗನ್ನಡ ಕಾವ್ಯಗಳನ್ನು ಪರಿಚಯಿಸುವುದು ಹೇಗೆ? ಹಿಂದೆ ಕನ್ನಡ ಸಾಹಿತ್ಯ ಪರಿಷತ್ತು ಸಾಮಾನ್ಯ ಓದುಗನಿಗೆಂದು ಮುಖ್ಯವಾದ

ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಪ್ರತಿ ಪದ್ಯಕ್ಕೂ ಅನುವಾದ ಮಾಡಿಸಿ ಪ್ರಕಟಿಸಿತ್ತು. ಈಚೆಗೆ ಅವುಗಳೆಲ್ಲ ಪುನರ್‌ಮುದ್ರಣಗೊಂಡಿವೆ/ಗೊಳ್ಳುತ್ತಿವೆ. ಬೇರೆ ಅನೇಕರೂ ಅನುವಾದ ಮಾಡಿದ್ದಾರೆ. ಅಂಥ ಅನುವಾದದ ಬಗ್ಗೆ ಈಚೆಗೆ ಒಂದು ಚರ್ಚೆ ನಡೆಯಿತು. ಅದು ಹೊಸದೇನೂ ಅಲ್ಲ, ಅನೇಕ ಸಲ ಅದು ನಡೆದಿದೆ. ಹೊಸಗನ್ನಡದಲ್ಲಿ ಅನುವಾದ ಮಾಡಿಬಿಟ್ಟರೆ ಈಗಿನವರು ಹಳಗನ್ನಡವನ್ನು ಅಭ್ಯಾಸ ಮಾಡುವುದೇ ಇಲ್ಲ ಅನ್ನುವುದು ಮುಖ್ಯ ವಾದ. ಹಾಗಾಗಿ ಅಂಥ ಅನುವಾದ ಕಾರ್ಯಕ್ಕೆ ಕೈ ಹಾಕಬಾರದು ಎಂಬುದು ಕೆಲವರ ಅಭಿಪ್ರಾಯ.

ಹಳಗನ್ನಡ ಕಾವ್ಯವನ್ನು ಅರ್ಥಮಾಡಿಕೊಳ್ಳಲು ಮುಖ್ಯವಾಗಿ ಮೂರು ಹಂತಗಳಿವೆ; ಅವು ಸಂಸ್ಕೃತ ಕಾವ್ಯಮಾದರಿಯನ್ನು ಅನುಸರಿಸಿದ್ದರಿಂದ ಅಲ್ಲಿರುವುದು ಸಮಾಸಯುಕ್ತವಾದ ಬರವಣಿಗೆ; ಹೀಗಾಗಿ ಪದವಿಭಾಗಕ್ರಮ ಮೊದಲ ಮೆಟ್ಟಿಲು. ಎರಡನೆಯದು ಅನ್ವಯಕ್ರಮ; ಅಂದರೆ, ಪದ್ಯರಚನೆಯಲ್ಲಿ ವಾಕ್ಯದಲ್ಲಿನ ಪದಗಳ ಕ್ರಮ ಬದಲಾಗಿರುತ್ತದೆ, ಅದನ್ನು ಜೋಡಿಸಿಕೊಳ್ಳುವುದು. ಮೂರನೆಯದು ಪದಗಳ ಅರ್ಥ ಹುಡುಕುವುದು. ಅದಕ್ಕೆ ಹಳಗನ್ನಡ ಶಬ್ದಸ್ವರೂಪದ ಅರಿವು ತಕ್ಕಮಟ್ಟಿಗಾದರೂ ಇರಬೇಕು. ಇದಕ್ಕೆಲ್ಲ ಸಾಕಷ್ಟು ಅಭ್ಯಾಸ ಅಗತ್ಯ. ಅನುವಾದಗಳನ್ನು ಮಾಡಿಬಿಟ್ಟರೆ ವಿದ್ಯಾರ್ಥಿಗಳು ಈ ಅಭ್ಯಾಸಕ್ಕೆಂದು ಕಷ್ಟ ಪಡುವುದೇ ಇಲ್ಲ ಎಂಬುದು ಹಲವರ ವಾದ.

ನಮ್ಮ ಹಳೆಯ ಕಾವ್ಯಗಳ ಪರಿಚಯ ಈಗಿನ ಪೀಳಿಗೆಗೂ ಆವಶ್ಯ ಎಂಬುದರಲ್ಲಿ ಎರಡು ಮಾತಿಲ್ಲ. ಕಾವ್ಯ ಹಳೆಯವಾದರೂ ಅವುಗಳಲ್ಲಿ ಅನೇಕ ಸಲ ಈ ಕಾಲಕ್ಕೂ ಪ್ರಸ್ತುತವಾದ ಅಂಶಗಳಿರುತ್ತವೆ. ಪಂಪ ಹರಿಹರ ಕುಮಾರವ್ಯಾಸರಂತಹ ಕವಿಗಳು ತಮ್ಮ ಕಾವ್ಯಗಳ ಮೂಲಕ ಕೇವಲ ಕತೆಗಳನ್ನು ಹೇಳಲಿಲ್ಲ; ಅವುಗಳಲ್ಲಿ ತಮ್ಮ ವೈಯಕ್ತಿಕ ನಿಲವಿನೊಡನೆಯೇ ಸಾರ್ವಕಾಲಿಕ ಮೌಲ್ಯಗಳನ್ನೂ ಪ್ರತಿಪಾದಿಸಿದ್ದಾರೆ. ಹಾಗಾಗಿ ನಮಗೆ ಅವು ಬೇಕು. ಅವುಗಳನ್ನು ನೇರವಾಗಿ ಓದಲು ಸಾಧ್ಯವಾಗದಾದಾಗ ಅನುವಾದವನ್ನು ಓದಬಾರದೇಕೆ? ಮೂಲವನ್ನು ಓದುವುದಕ್ಕೂ ಅನುವಾದವನ್ನು ಓದುವುದಕ್ಕೂ ವ್ಯತ್ಯಾಸವಿದೆ, ನಿಜ. ಆದರೆ ಪೂರ್ತಿ ಕಳೆದುಕೊಳ್ಳುವುದರ ಬದಲು ಅನುವಾದಗಳ ಸಹಾಯದಿಂದ ಅವುಗಳ ಗಣನೀಯ ಭಾಗವನ್ನಾದರೂ ನಮ್ಮದಾಗಿಸಿಕೊಳ್ಳಬಹುದಲ್ಲ.

ಕೆಲವರು ಪ್ರತಿ ಪದ್ಯವನ್ನೂ ಅನುವಾದ ಮಾಡುವುದರ ಬದಲು ಒಟ್ಟು ಅಭಿಪ್ರಾಯವನ್ನು ಹೊಸ ರೀತಿಯಲ್ಲಿ ಮಂಡಿಸಬಹುದು. ಮತ್ತೆ ಕೆಲವರು ಅನುವಾದ ಮಾಡುವುದಕ್ಕೇ ಹೋಗದೆ ಮೂಲ ಪದ್ಯಗಳನ್ನು ಪದವಿಭಾಗ ಮಾಡಿ ಅನ್ವಯ ಕ್ರಮದಲ್ಲಿ ಪ್ರಕಟಿಸಿದ್ದಾರೆ. ಮೂಲದ ಜೊತೆಗೆ ಇಂತಹ ಪಠ್ಯಗಳನ್ನಿರಿಸಿಕೊಂಡರೆ ಪದವಿಭಜನಕ್ರಮ ಮತ್ತು ಅನ್ವಯಕ್ರಮ ತಕ್ಕಮಟ್ಟಿಗೆ ಅರ್ಥವಾಗುತ್ತ ಹೋಗುತ್ತದೆ. ಇದು ಸಾಕಷ್ಟು ಓದಿದವರಿಗೆ ಸರಿ. ಆದರೆ ಸಾಮಾನ್ಯರಿಗೆ ಇದೂ ಎಟುಕುವುದಿಲ್ಲ. ಆದ್ದರಿಂದ ಮುಖ್ಯ ಕಾವ್ಯಗಳನ್ನು ಈಗಿನ ಭಾಷೆಯಲ್ಲಿ ನೀಡುವುದೂ ಮುಖ್ಯ.

ಎಲ್ಲ ಕಾಲಕ್ಕೂ ಮೂಲಕ್ಕೇ ಹೋಗಿ ವಿಷಯ ತಿಳಿದುಕೊಳ್ಳಬೇಕೆಂಬ ಪ್ರವೃತ್ತಿಯವರು ಅಲ್ಪಸಂಖ್ಯಾತರೇ. ಅವರು ಕಷ್ಟಪಟ್ಟು ಆ ಮಾರ್ಗವನ್ನುಸರಿಸುತ್ತಾರೆ. ಆದರೆ ಎಲ್ಲರೂ ಹಾಗಿರಲು ಸಾಧ್ಯವಿಲ್ಲ; ಇದನ್ನೇ ಎಲ್ಲರೂ ತಮ್ಮ ಬದುಕಿನ ಧ್ಯೇಯವನ್ನಾಗಿರಿಸಿಕೊಳ್ಳಲು ಆಗುವುದಿಲ್ಲ. ಆದರೆ ಹಿಂದಿನದರ ಬಗ್ಗೆ ಅಭಿಮಾನ, ಅದರ ವೈಶಿಷ್ಟ್ಯವನ್ನು ಅರಿಯಬೇಕೆಂಬ ಆಸೆ ಅನೇಕರಿಗೆ ಇರುತ್ತದೆ, ಅವರಿಗಾಗಿ ಅನುವಾದಗಳೂ ಬೇಕು, ಸಂಗ್ರಹಾನುವಾದಗಳೂ ಬೇಕು, ಮುಖ್ಯ ಭಾಗಗಳ ಪರಿಚಯವೂ ಬೇಕು. ದೀರ್ಘ ಇತಿಹಾಸವಿರುವ ಭಾಷೆಯ ಮುಖ್ಯ ಕೃತಿಗಳು ಎಲ್ಲ ಕಾಲದವರಿಗೂ ಆವಶ್ಯಕ. ಹೊಸ ಪೀಳಿಗೆಯವರಿಗಾಗಿ ಕಾಲಕಾಲಕ್ಕೆ ಹೊಸ ಬಗೆಯ ಅನುವಾದಗಳು ಆಗುತ್ತಲೇ ಇರಬೇಕು. ಮುಖ್ಯ ಕೃತಿಗಳನ್ನು ಕಾಲಕಾಲಕ್ಕೆ ವಿಮರ್ಶೆಯ ನಿಕಷಕ್ಕೊಡ್ಡುವುದು ಹೇಗೆ ಆವಶ್ಯಕವೋ ಹಾಗೆಯೇ ಅವುಗಳನ್ನು ಹೊಸ ಪೀಳಿಗೆಗೆ ಎಟುಕಿಸುವ ಕಾರ್ಯವೂ ನಾನಾ ಬಗೆಯಲ್ಲಿ ನಿರಂತರವಾಗಿ ಆಗುತ್ತಿರಬೇಕು. ಆಗಲೇ ನಮ್ಮ ಭಾಷೆಯ ನಿರಂತರತೆಯೊಡನೆ ನಾವು ಹೆಜ್ಜೆ ಇಡಲು ಶಕ್ಯವಾಗುವುದು. ಪ್ರತಿ ಪೀಳಿಗೆಯೂ ಹಳೆ ಬೇರು ಹೊಸ ಚಿಗುರುಗಳನ್ನು ಮೈಗೂಡಿಸಿಕೊಳ್ಳಬೇಕಲ್ಲವೇ?

☆ – ☆ – ☆

# ಚಿಂತೆ – ಚಿಂತನೆ

"ಚಿಂತೆಗೂ ಚಿತೆಗೂ ಒಂದು ಸೊನ್ನೆ ಮಾತ್ರವೇ ವ್ಯತ್ಯಾಸ", "ಚಿತೆ ಹೊರಗೆ ಸುಟ್ಟರೆ, ಚಿಂತೆ ಒಳಗೆ ಸುಡುತ್ತದೆ" ಎಂಬಂತಹ ಮಾತುಗಳನ್ನು ನಾವು ಕೇಳುತ್ತಿರುತ್ತೇವೆ. ಚಿಂತೆ ಎಂದರೆ ಅಂಥದು. ಆದರೆ ಚಿಂತೆ ಯಾರನ್ನೂ ಬಿಟ್ಟಿದ್ದಲ್ಲ; ಅದು ಸಾರ್ವತ್ರಿಕ. ಚಿಂತೆ ಎಂಬ ಪದದ ಮೂಲ "ಚಿತ್"; ಅದರ ಅರ್ಥ ಬುದ್ಧಿ ಅಥವಾ ಜ್ಞಾನ ಎಂದು. ಅಂದರೆ ಚಿಂತೆಯು ಒಂದು ಬುದ್ಧಿಪೂರ್ವಕ ಕ್ರಿಯೆ. ಇದೇ ಮೂಲದ ಇನ್ನೊಂದು ಪದವಿದೆ; ಅದೆಂದರೆ "ಚಿಂತನೆ"; ಇದೂ ಬುದ್ಧಿಯಲ್ಲಾಗುವ ಕ್ರಿಯೆಯೇ. ಆದರೆ ಅದರ ಅರ್ಥ ಬೇರೆ; ಆಲೋಚನೆ, ಧ್ಯಾನ ಎಂದು. ಎರಡೂ ಪದಗಳ ಮೂಲ "ಚಿತ್" ಎಂಬ ಪದ ಹೇಗೋ ಹಾಗೆಯೇ ಎರಡು ಕ್ರಿಯೆ ಗಳಲ್ಲಿಯೂ ಬೆಂಕಿಯ ಅಂಶ ಸಮಾನವಾಗಿದೆ. ಆದರೆ ಚಿಂತೆ ಮನುಷ್ಯನನ್ನು ಸುಡುವ ಹಾಗೆ ಚಿಂತನೆ ಸುಡುವುದಿಲ್ಲ. ಒಂದು ಬೆಂಕಿಯಾದರೆ, ಮತ್ತೊಂದು ಬೆಳಕು. ಬೆಂಕಿ ಬೆಳಕಾಗುವುದು ಯಾವಾಗ; ಬೆಳಕು ಸುಡಬಹುದಾದ ಸಂದರ್ಭ ಯಾವುದು? ಇವೆರಡಕ್ಕಿರುವ ವ್ಯತ್ಯಾಸವೇನು? ಎರಡೂ ಕ್ರಿಯೆಗಳು ಬುದ್ಧಿಯ ನೆಲೆಯಲ್ಲಿ ನಡೆದರೂ ಒಂದು ಬೇಡವಾದದ್ದು, ಮತ್ತೊಂದು ಅಪೇಕ್ಷಣೀಯ ವಾದದ್ದು. ಒಂದು ಅಹಿತಕರ, ಮತ್ತೊಂದು ಸುಖಕರ; ಒಂದರಿಂದ ಕಷ್ಟ, ಮತ್ತೊಂದರಿಂದ ಅನುಕೂಲ. ಹೇಗೆ?

ಚಿಂತೆ ಎಂಬುದರೊಡನೆ ಬೇಗುದಿ–ದುಃಖಗಳು ಸೇರಿವೆ. ನಮ್ಮ ಹಳೆಯ ನಿಘಂಟುಗಳು, "ಚಿಂತೆ ತಾನೆಯುಬ್ಬೆಗಮಕ್ಕುಂ" ಎಂದೋ "ಬೇವಸಮೆ ಚಿಂತೆ" ಎಂದೋ ಅರ್ಥೈಸುತ್ತವೆ. ಚಿಂತೆಯ ಸ್ವರೂಪವನ್ನು ಕುರಿತು ನೋಡೋಣ. ಚಿಂತೆ ಎಂಬುದು ವೈಯಕ್ತಿಕವಾದ ಆಲೋಚನೆ. ಎಂದರೆ ವ್ಯಕ್ತಿಗೂ ಯಾವುದೋ ವಿಷಯಕ್ಕೂ ಇರುವ ಸಂಬಂಧದಿಂದ ಚಿಂತೆ ಉಂಟಾಗುತ್ತದೆ. ಉದಾಹರಣೆಗೆ ಒಂದು ವಸ್ತುವಿನ ಬಗ್ಗೆ ಇರುವ ಮೋಹ. ಇದರಿಂದ ಆ ವಸ್ತು ತನ್ನ ವೈಯಕ್ತಿಕ ಸ್ವತ್ತಾಗಬೇಕೆಂಬ ಚಪಲ ಉಂಟಾಗುತ್ತದೆ. ವಸ್ತುವಿನ ಮೇಲಣ ಮೋಹ ತೀವ್ರ ವಾದಷ್ಟೂ, ಅದು ದೊರೆಯದಿದ್ದಾಗ ಅದಕ್ಕನುಗುಣವಾದ ತೀವ್ರತೆಯ ದುಃಖ ಆವರಿಸುತ್ತದೆ. ಎಂದರೆ ವಸ್ತುವಿನ ಮೇಲೆ ವ್ಯಕ್ತಿಯ ಬುದ್ಧಿ ಸಂಬಂಧವನ್ನು ಬೆಸೆದು ಕೊಂಡಾಗ ಅದು ವೈಯಕ್ತಿಕ ವಿಷಯವಾಗುತ್ತದೆ. ವಸ್ತುವನ್ನು ಪಡೆಯುವುದು

ಸಂತೋಷ ಉಂಟುಮಾಡಿದರೆ, ಅದನ್ನು ಹೊಂದದಿರುವುದು ದುಃಖದಾಯಕವಾಗುತ್ತದೆ. ಇದನ್ನೇ ಚಿಂತೆ ಎನ್ನುವುದು; ವಸ್ತು ತನಗೆ ದೊರೆಯಲಿಲ್ಲವಲ್ಲ ಎಂಬುದ್ನು ಕುರಿತೇ ಬುದ್ಧಿ ಆಲೋಚಿಸುತ್ತಿರುತ್ತದೆ.

ಆಲೋಚನೆಯೇ ಸ್ವರೂಪವಾದ ಚಿಂತನೆ ಇನ್ನೊಂದು ಬಗೆಯದು. ಇಲ್ಲಿಯೂ ಬುದ್ಧಿಯೇ ನೆಲೆ. ಆದರೆ ಅಲ್ಲಿ ವೈಯಕ್ತಿಕತೆ ಇರುವುದಿಲ್ಲ. ವಸ್ತು ಮತ್ತು ವ್ಯಕ್ತಿಗಳ ನಡುವಣ ಸಂಬಂಧ ಇಲ್ಲಿ ಚಪಲದ ರೂಪದ್ದಲ್ಲ. ಇಲ್ಲಿನ ಆಲೋಚನೆಯಲ್ಲಿ ಮೋಹದ ಅಂಶವಿಲ್ಲ. ವಸ್ತುವನ್ನು ದೂರವಿರಿಸಿ ನೋಡಬಹುದಾದ ಮನೋಭಾವ ಇಲ್ಲಿರುತ್ತದೆ. ಆಗ ವಸ್ತುವಿನ ಬಗೆಗಿನ ವಿಶ್ಲೇಷಣೆಯಲ್ಲಿ ಸ್ವಂತದ ಅಂಶವಿರುವುದಿಲ್ಲ; ಅಂದರೆ ವಸ್ತುವನ್ನು ಹೊಂದಬೇಕೆಂಬ ಬಯಕೆ ಇರುವುದಿಲ್ಲ. ಹೀಗಾಗಿ ಇವೆರಡರ ನಡುವೆ ಯಾವುದೋ ಒಂದು ಬಗೆಯ "ದೂರ" ನಿರ್ಮಾಣವಾಗುತ್ತದೆ. ಹತ್ತಿರವಿದ್ದಾಗ ಬೆಂಕಿ ಸುಡುವಂತೆ ದೂರವಿದ್ದಾಗ ಸುಡುವುದಿಲ್ಲ, ಬದಲು ಬೆಳಕು ಚೆಲ್ಲುತ್ತದೆ. ಅಂದರೆ ಬುದ್ಧಿ ಕುರಿತು ಆಲೋಚಿಸುವ ವಸ್ತು ಒಂದೇ ಆಗಿರಬಹುದು, ಆದರೆ ಅದರಲ್ಲಿ "ತಾನು" ತೊಡಗಿಕೊಂಡರೆ ಚಿಂತೆಯಾಗುತ್ತದೆ; ತನ್ನನ್ನು ದೂರವಿರಿಸಿ ನೋಡಿದರೆ ಚಿಂತನೆಯಾಗುತ್ತದೆ. ಒಂದು ವ್ಯಕ್ತಿನಿಷ್ಠ; ಮತ್ತೊಂದು ವಸ್ತುನಿಷ್ಠ.

ಸಾಮಾನ್ಯ ಜನರ ಮನಃಪ್ರವೃತ್ತಿ ಎಂದರೆ ಪ್ರತಿಯೊಂದನ್ನೂ ವೈಯಕ್ತಿಕತೆಯ ನೆಲೆಯಲ್ಲಿಯೇ, ಅಂದರೆ ಅತ್ಯಂತ ಸಂಕುಚಿತ ಸ್ತರದಲ್ಲಿಯೇ, ನೋಡುವುದು, ಆಲೋಚಿಸುವುದು. ಹಾಗಾಗಿ ಅವರು ಬೇವಸಕ್ಕೊಳಗಾಗುತ್ತಾರೆ, ಯಾಕಂದರೆ ಬದುಕಿನಲ್ಲಿ ಪಡೆಯುವುದು ಕಡಿಮೆ, ಕಳೆದುಕೊಳ್ಳುವುದು ಹೆಚ್ಚು. ಆದ್ದರಿಂದಲೇ ಬದುಕು ದುರ್ಭರ ಎನಿಸುವುದು. ಆದರೆ ಬಯಸುವುದರ ಬದಲು ಅದನ್ನು ಕುರಿತು ದೂರದಿಂದ ಆಲೋಚಿಸುವ ಕ್ರಮ ಅನುಸರಿಸುವ ಚಿಂತಕರು ಇಂಥ ದುಃಖಕ್ಕೊಳಗಾಗುವುದಿಲ್ಲ, ಬದಲು ಅದರಿಂದ ಹೊಸ ಚೈತನ್ಯ ಪಡೆಯುತ್ತಾರೆ. ಚಿಂತನೆಯಲ್ಲಿ ಸುಖವಿದೆ; ಯಾಕೆಂದರೆ ಅಲ್ಲಿ ವೈಯಕ್ತಿಕತೆಯಿಲ್ಲ. ಆ ಬಗೆಯ ಆಲೋಚನೆಯ ಫಲವನ್ನೇ "ಸತ್ಯ" ಎನ್ನುವುದು. ಭೌತಿಕ ವಿಷಯಗಳಲ್ಲಿ ಅದು ಪ್ರಕೃತಿ ನಿಯಮಗಳನ್ನು ಗುರುತಿಸಿದರೆ, ಅನುಭವದ ನೆಲೆಯಲ್ಲಿ ದೊರಕುವುದು "ಅನುಭವ ಸತ್ಯ".

ಪು.ತಿ. ನರಸಿಂಹಾಚಾರ್ಯರ 'ಏತಕೆ?' ಎಂಬುದೊಂದು ಕವನವಿದೆ. ಕವನದ ನಿರೂಪಕ ಕವಿಯೇ. ತನ್ನ ಚಿಕ್ಕ ಮಗುವು ಸತ್ತಾಗ ಅತೀವ ದುಃಖ ಆವರಿಸುತ್ತದೆ; ಅದನ್ನು ಮಣ್ಣುಮಾಡಿ ಬರುವಾಗ "ಮನದೊಲುಳಿಯಿತು 'ಏತಕೆ' – ಬೆರೆವುದೇತಕೆ? ನಲಿವುದೇತಕೆ? ಬೆರೆದೊಡಗಲುವುದೇತಕೆ?" ಎಂಬ ಪ್ರಶ್ನೆಗಳು ಆವರಿಸುತ್ತವೆ. ಈಗ ಇವು ವೈಯಕ್ತಿಕತೆಯನ್ನು ಕಳೆದುಕೊಂಡ ಸಾರ್ವತ್ರಿಕ ಪ್ರಶ್ನೆಗಳಾಗುತ್ತವೆ. ಅದರಲ್ಲಿ ಹತ್ತಿರದವನು ಸತ್ತ ಚಿಂತೆ ದೂರವಾಗಿ ಸಾವನ್ನು ಕುರಿತ ಚಿಂತನೆ ನೆಲೆಗೊಂಡ ಬಗೆಯಿದೆ. ಸಾವಿನ ಒಂದು ಸನ್ನಿವೇಶ ವೈಯಕ್ತಿಕ ನೆಲೆಯಲ್ಲಿ

ನೋವನ್ನು ತಂದರೆ, ಅದರ ಕುರಿತಾದ ಚಿಂತನೆ ಬದುಕನ್ನು ಹೆಚ್ಚು ಆಳವಾಗಿ ಅರ್ಥಮಾಡಿಕೊಳ್ಳುವ ಕಡೆ ಕರೆದೊಯ್ಯುತ್ತದೆ.

ನಾವು ಚಿಂತಕರೆಂದು ಕರೆಯುವುದು ಹೀಗೆ ತಮ್ಮದನ್ನು ಬದಿಗಿಟ್ಟು, ಸಂದರ್ಭವನ್ನು ಸಾರ್ವತ್ರಿಕತೆಯ ಹಿನ್ನೆಲೆಗಿಟ್ಟು ನೋಡುವ ಮನೋಭಾವದವರನ್ನು. ಚಿಂತನೆ ಅವರನ್ನು ಸುಡುವುದಿಲ್ಲ, ಕೊರಗಿಗೆ ಈಡು ಮಾಡುವುದಿಲ್ಲ; ಬದಲು ಇತರರಿಗೂ ಅದರ ಫಲ ದೊರೆಯುವಂತೆ ಮಾಡುತ್ತದೆ. ಆ ಕಾರಣದಿಂದಲೇ ಚಿಂತಕರು ವ್ಯಾವಹಾರಿಕವಾಗಿ ಬಡವರಾಗಿರುತ್ತಾರೆ. ಅಥವಾ ಅವರ ಆಸೆಗಳು ಕಡಿಮೆ. ಅವರ ಜೀವನ ಸರಳತೆಯಿಂದ ಕೂಡಿರುತ್ತದೆ.

ಎಲ್ಲ ರಂಗಗಳಲ್ಲಿಯೂ ತನ್ನ ನೆಲೆಯಲ್ಲಿ ಆಲೋಚಿಸುವವನಿಗಿಂತಲೂ, ವ್ಯಾಪಕ ಹಿನ್ನೆಲೆಯಲ್ಲಿ ಪರಿಶೀಲಿಸುವವನು ಚಿಂತಕನಾಗುತ್ತಾನೆ. ಪ್ರತಿಯೊಂದನ್ನೂ ವ್ಯಾವಹಾರಿಕತೆಯಿಂದ ನೋಡುವವನು ಕೆಳಸ್ತರದಲ್ಲೇ ಉಳಿಯುತ್ತಾನೆ, ವಿಶಾಲ ನೆಲೆಯಲ್ಲಿ ಪರಿಭಾವಿಸುವವನು ಮೇಲೇರುತ್ತಾನೆ. ಮೊದಲನೆಯವನು ಓಡಾಡು ವವನು, ಎರಡನೆಯವನು ತೇಲಾಡುವವನು; ಒಬ್ಬ ಅಲ್ಪ, ಮತ್ತೊಬ್ಬ ಕಲ್ಪ. ಒಬ್ಬನಿಂದ ಸುಡುವ ಕೆಲಸವಾದರೆ, ಮತ್ತೊಬ್ಬನಿಂದ ಬೆಳಕು ಪಸರಿಸುತ್ತದೆ.

ಎಲ್ಲರೂ ಚಿಂತಕರಾಗಲು ಸಾಧ್ಯವಿರದಿರಬಹುದು; ಆದರೆ ತನ್ನ ಬದುಕಿನ ಬವಣೆಯನ್ನು ಕಡಿಮೆ ಮಾಡಿಕೊಳ್ಳಲು ಪ್ರತಿಯೊಬ್ಬನೂ ತಕ್ಕಮಟ್ಟಿಗಾದರೂ ವೈಯಕ್ತಿಕತೆಯಿಂದ ಪಾರಾಗಿ ವಿಶಾಲವಾಗಿ ಆಲೋಚಿಸುವುದನ್ನು ಅಭ್ಯಾಸ ಮಾಡಿ ಕೊಳ್ಳುವುದು ಅಪೇಕ್ಷಣೀಯ. ಸ್ವಂತವನ್ನೆಲ್ಲ ಬಿಟ್ಟು ಬದುಕಬೇಕೆಂದು ಇದರ ಅರ್ಥ ವಲ್ಲ. ಆದರೆ ಆಲೋಚನೆಯ ಕ್ರಮ ಬವಣೆಯ ತೀವ್ರತೆಯನ್ನು ಇಳಿಸುತ್ತದೆ. ಇದೇನೂ ಹೊಸ ವಿಷಯವಲ್ಲ. ಬಹು ಹಿಂದಿನಿಂದಲೂ ಹಿರಿಯರು ಇದನ್ನು ಹೇಳುತ್ತಲೇ ಬಂದಿದ್ದಾರೆ. ಆದರೆ ಪ್ರತಿ ಪೀಳಿಗೆಗೂ ಇದರ ಅರಿವು ಅಗತ್ಯವಲ್ಲವೇ?

☆ - ☆ - ☆

# ಕನ್ನಡ ಬಳಕೆ, ಉಳಿಕೆ

ಕೆಲವು ದಿನಗಳ ಹಿಂದೆ ನಮ್ಮ ಮನೆಗೆ ಕೆಲವು ಉತ್ಸಾಹಿ ಕನ್ನಡ ಕಾರ್ಯಕರ್ತರು ಬಂದಿದ್ದರು, ಕನ್ನಡಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಚರ್ಚೆ ಮಾಡಲು. ಅವರೆಲ್ಲ ವಿದ್ಯಾವಂತರು, ಒಳ್ಳೆಯ ಕೆಲಸದಲ್ಲಿರುವವರು, ಕನ್ನಡದ ಈಗಿನ ಸಮಸ್ಯೆಗಳ ಬಗ್ಗೆ ಅವರಿಗೆಲ್ಲ ಕಾಳಜಿ. ಪರಿಸ್ಥಿತಿ ಸುಧಾರಿಸಲು ಏನಾದರೂ ಮಾಡುವ ತವಕ; ಕನ್ನಡತನ ಉಳಿಸಿಕೊಳ್ಳುವ ಛಲ. ನಮ್ಮ ಚರ್ಚೆ ಕನ್ನಡತನದ ಕಡೆಗೇ ಹರಿಯಿತು. ಅದನ್ನು ಮೊದಲು ಅವರೊಲ್ಲೊಬ್ಬನೇ ಆರಂಭಿಸಿದ; ಅವನ ವಾದ: ನಮ್ಮ ಮಾತಿನಲ್ಲಿ ಕನ್ನಡಪದಗಳ ಸಂಖ್ಯೆ ತುಂಬ ಕಡಿಮೆ, ಅನೇಕ ಇಂಗ್ಲಿಷ್ ಪದಗಳು ನುಸುಳುತ್ತವೆ, ಇದು ತಪ್ಪಬೇಕು. ಅವನು ಮಾತ್ರವಲ್ಲ, ಅನೇಕ ಕನ್ನಡ ಕಾರ್ಯಕರ್ತರ ಸಮಸ್ಯೆ; ಎಷ್ಟೋ ಜನ ಮುಂದಿಡುವ ಪ್ರಶ್ನೆ.

ನಿಜ, ನಮ್ಮ ಮಾತಿನಲ್ಲಿ ಸಾಕಷ್ಟು ಇಂಗ್ಲಿಷ್ ಪದಗಳಿರುತ್ತವೆ; ಕಟ್ಟಾ ಕನ್ನಡಾಭಿಮಾನಿಯ ಮಾತಿನಲ್ಲಿಯೂ. ಇದು ಸರಿಯೇ? ಇಂಗ್ಲಿಷ್ ಶಬ್ದಗಳನ್ನು ಬಳಸುವುದು ತಪ್ಪಲ್ಲ ಎಂಬುದು ನನ್ನ ವಾದ. ಯಾವುದನ್ನು ನಾವು ಇಂಗ್ಲಿಷ್ ಶಬ್ದಗಳೆಂದು ಕರೆಯುತ್ತೇವೋ ಅವುಗಳು ನಾವು ಬಳಸಿ ಕನ್ನಡದವೇ ಆಗಿಬಿಟ್ಟಿವೆ; ಕೆಲವು ನೇರವಾಗಿ ಬಳಕೆಯಲ್ಲಿವೆ, ಕೆಲವು ಸ್ವರೂಪದಲ್ಲಿ ವ್ಯತ್ಯಾಸಗೊಂಡಿವೆ, ಮತ್ತೆ ಕೆಲವು ಅರ್ಥ ಬದಲಾವಣೆಯಿಂದ ಚಾಲತಿಯಲ್ಲಿವೆ. ನಾವು ಕನ್ನಡವೆಂದು ತಿಳಿದಿರುವ ಸಾವಿರಾರು ಶಬ್ದಗಳು ಸಂಸ್ಕೃತ–ಪ್ರಾಕೃತಗಳಿಂದ ಬಂದವು. ಪಂಪನ ಕೃತಿಗಳನ್ನು ನಾವು ಅರ್ಥಮಾಡಿಕೊಳ್ಳುವುದಕ್ಕೆ ವಿಶೇಷ ಪರಿಶ್ರಮ ಬೇಕು; ಆದರೆ ಅವೂ ಕನ್ನಡದಲ್ಲಿವೆ ಎಂದು ಹೇಗೆ ಹೇಳುತ್ತೇವೆ? ಭಾಷಾವಿಜ್ಞಾನದ ಅಲ್ಪ ಪರಿಚಯವಿದ್ದರೂ ತಿಳಿದಿರುತ್ತದೆ, ಯಾವುದೇ ಜೀವಂತ ಭಾಷೆಯಲ್ಲಿ ಬಳಕೆಗೊಳ್ಳುವ ಸುಮಾರು ಶೇಕಡ ಎಂಬತ್ತರಷ್ಟು ಪದಗಳು ಅನ್ಯಮೂಲದಿಂದ ಬಂದವು ಎಂಬುದು. "ಜೀವಂತ" ಎಂದರೆ ಜನರ ಬಳಕೆಯಲ್ಲಿರುವ ಎಂದು ಅರ್ಥ.

ಒಂದು ಭಾಷೆಯನ್ನಾಡುವ ಜನರು ಬೇರೆ ಭಾಷಿಕರ ಜೊತೆ ಸಂಪರ್ಕಕ್ಕೆ ಬರುತ್ತಾರೆ; ಸಹಜವಾಗಿಯೇ ಅವರ ಪ್ರಭಾವಕ್ಕೊಳಗಾಗುತ್ತಾರೆ, ಅವರ ಭಾಷೆಯೂ ಅನ್ಯಭಾಷೆಗಳ ಪ್ರಭಾವಕ್ಕೆ ಸಿಲುಕುತ್ತವೆ. ಹಾಗೆಯೇ ಇವರ ಮತ್ತು ಇವರ ಭಾಷೆಯ

ಪ್ರಭಾವ ಆ ಬೇರೆಯವರ ಮೇಲೆಯೂ ಆಗಿರುತ್ತದೆ. ಆದರೆ ಆಳುವವರು ಆಳ್ವಿಕೆಗೊಳಗಾದವರ ಮೇಲೆ ಹೆಚ್ಚು ಪ್ರಭಾವ ಬೀರುತ್ತಾರೆಂಬುದು ನಿಜ. ಸಂಸ್ಕೃತ ದೇವಭಾಷೆಯೆಂದು, ಇಂಗ್ಲಿಷ್ ಜನರು ನಮ್ಮನ್ನು ಅಧೀನಪಡಿಸಿಕೊಂಡಿದ್ದರೆಂದು ನಾವು ಅವುಗಳಿಂದ ಹೆಚ್ಚು ಪಡೆದಿದ್ದೇವೆ. ಅದಕ್ಕೇ ನಾವೀಗ ಹಿಂದಿಯನ್ನು ರಾಷ್ಟ್ರ ಭಾಷೆ ಎಂದು ಕರೆಯುವುದನ್ನು ವಿರೋಧಿಸುವುದು. ಈ ಹೆಸರೇ ಅದಕ್ಕೆ ಹೆಚ್ಚು ಮಾನ್ಯತೆ ತಂದುಕೊಡುತ್ತದೆ. ಕನ್ನಡವೂ ಅದಕ್ಕೆ ಸಮಾನವೆಂದು ಪರಿಗಣಿತವಾದರೆ ನಮ್ಮ ಮನಸ್ಸಿನಲ್ಲಿ ಸಮಾನತೆಯ ನೆಲೆಯಿರುತ್ತದೆ, ಕೊಡುಕೊಳುಗೆಗಳು ಆ ನೆಲೆಯಲ್ಲಿಯೇ ನಡೆಯುತ್ತವೆ.

ಇನ್ನು, ಭಾಷೆಯ ಸ್ವರೂಪದ ಕಡೆ ಮತ್ತೆ ಬರೋಣ. ಪ್ರತಿ ಭಾಷೆಗೂ ತನ್ನದೇ ಆದ, ಎಷ್ಟು ಹೊರ ಪ್ರಭಾವಗಳಿದ್ದರೂ ಬದಲಾಗದ ಸ್ವಂತ ಅಂಶಗಳಿರುತ್ತವೆ, ಅವೆಂದೂ ಬದಲಾವಣೆಯಾಗದು. ಕ್ರಿಯಾಪದಗಳು, ಪ್ರತ್ಯಯಗಳು, ಸರ್ವನಾಮಗಳು, ವಾಕ್ಯರಚನಾ ಕ್ರಮ – ಇನ್ನೂ ಅನೇಕವು. ಇವೆಲ್ಲ ಭಾಷೆಯ ಡಿಎನ್ಎ ಎಂದು ಕರೆಯಬಹುದು, ಇವುಗಳಿಂದ ಭಾಷೆಯ ಹುಟ್ಟನ್ನು ನಿರ್ಧರಿಸಬಹುದು. ನಾವು ಬಳಸುವ ವಸ್ತುಗಳು, ಮಾಡುವ ವಿಚಾರಗಳು, ಪರಿಕಲ್ಪನೆಗಳು ಬೇರೆ ಭಾಷೆಯ ಜನರಿಂದ ಬಂದಿದ್ದರೆ ಅವುಗಳನ್ನು ಸ್ವೀಕರಿಸಿರುತ್ತೇವೆ. ಹಾಗಾಗಿಯೇ ದೇವಭಾಷೆಯೆಂದು ಪರಿಗಣಿತವಾದ ಸಂಸ್ಕೃತದಿಂದ ಪೂಜೆ, ಆಧ್ಯಾತ್ಮ ಮುಂತಾದವುಗಳಿಗೆ ಸಂಬಂಧಿಸಿದ ಶಬ್ದಗಳು ಕನ್ನಡಕ್ಕೆ ಬಂದಿವೆ; ವಿಜ್ಞಾನ–ತಂತ್ರಜ್ಞಾನಗಳ ಪಾರಿಭಾಷಿಕ ಶಬ್ದಗಳು ಇಂಗ್ಲಿಷಿನಿಂದ; ಮುಸಲ್ಮಾನರ ಆಳ್ವಿಕೆಯ ಕಾರಣ ಆಡಳಿತದ ಅನೇಕ ಶಬ್ದಗಳು ಪರ್ಷಿಯನ್–ಅರೆಬಿಕ್ ಕಡೆಯಿಂದ ಬಂದಿವೆ. ಪಡೆಯುವ ಹೊಸ ವಸ್ತು, ವಿಚಾರಗಳ ಜೊತೆಗೆ ಅವುಗಳನ್ನು ಸೂಚಿಸುವ ಶಬ್ದಗಳು ಬರುವುದು ಸಹಜ.

ಇಂಗ್ಲಿಷಿನಲ್ಲಿಯೂ ಇದೇ ಪರಿಸ್ಥಿತಿ ಎಂದು ಅವರಿಗೆ ವಿವರಿಸಿದೆ; ಪ್ರಮಾಣಿತ ನಿಘಂಟಿನಲ್ಲಿ ಪ್ರತಿ ಶಬ್ದದ ಅರ್ಥವಿವರಣೆಯ ನಂತರ ಅದರ ವ್ಯುತ್ಪತ್ತಿಯನ್ನು ಕೊಟ್ಟಿರುತ್ತಾರೆ, ಅಂದರೆ ಆ ಶಬ್ದದ ಮೂಲವನ್ನು ಕೊಟ್ಟಿರುತ್ತಾರೆ. ಅದನ್ನು ನೋಡಿದರೆ ಸಾಕು, ಅಲ್ಲಿಯೂ ಶೇಕಡ ಎಂಬತ್ತರಷ್ಟು ಬೇರೆಯ ಮೂಲದಿಂದ ಬಂದ ಶಬ್ದಗಳೇ ಇವೆ ಎಂಬುದು. ಲ್ಯಾಟಿನ್, ಗ್ರೀಕ್ ಮುಂತಾದ ಅಸಂಖ್ಯ ಶಬ್ದಗಳು ಅಲ್ಲಿ ತುಂಬಿವೆ, ಸಂಸ್ಕೃತದ ಅನೇಕ ಶಬ್ದಗಳೂ ಇವೆ; ಫ್ರೆಂಚ್, ಜರ್ಮನ್ ಭಾಷೆಗಳ ಶಬ್ದಗಳೂ ಆಯಾ ಭಾಷೆಗಳನ್ನಾಡುವ ಜನರು ಇಂಗ್ಲಿಷ್ ಜನರ ಮೇಲೆ ಮೂಡಿಸಿದ ಪ್ರಭಾವಕ್ಕನುಗುಣವಾಗಿ ಅವರ ಭಾಷೆಯನ್ನು ಹೊಕ್ಕಿವೆ. ಭಾಷೆಯೊಂದಕ್ಕೆ ಹೆಚ್ಚು ಧಾರಣಶಕ್ತಿ ಬರುವುದು ಇಂತಹ ಸ್ವೀಕರಣದಿಂದಲೇ. ಅನ್ಯ ಭಾಷೆಗಳ ಶಬ್ದಗಳನ್ನು ಬಳಸುವುದು ತಪ್ಪಲ್ಲ; ಅಷ್ಟೇ ಅಲ್ಲ, ಅನಿವಾರ್ಯ, ಆವಶ್ಯಕ. ಅವುಗಳನ್ನು ಬಳಸಿದರೆ ಅವು ಕನ್ನಡದವೇ ಆಗುತ್ತವೆ. ಹಿಂದೆ ಸಾವಿರಾರು ಸಂಸ್ಕೃತದ ಶಬ್ದಗಳಿಗೆ "ಇಸು" ಎಂಬ ಪ್ರತ್ಯಯ ಸೇರಿಸಿ ನಮ್ಮದಾಗಿ ಮಾಡಿಕೊಂಡಿದ್ದೇವೆ;

ಇಂಗ್ಲಿಷಿನ ವ್ಯಂಜನಾಂತ ಶಬ್ದಗಳಿಗೆ "ಉ" ಎಂದು ಸೇರಿಸಿದರೆ ಕನ್ನಡವಾಗಿಬಿಡುತ್ತದೆ. ಪೂಜಿಸು, ಟೆಸ್ಟು ಇಂತಹವು.

ಈ ತಾಂತ್ರಿಕ ಪರಿಣತಿಯ ಯುಗದಲ್ಲಿ ಕನ್ನಡ ಬದುಕಬೇಕಾಗಿದೆ. ಹಾಗಾಗಿ ದಿನನಿತ್ಯದ ಬದುಕಿನ ಸಮಸ್ತವನ್ನೂ ಅದು ಒಳಗೊಳ್ಳಬೇಕು. ಭಾಷೆಯ ಸೃಜನಶೀಲತೆ ಎಂದರೆ ಕೇವಲ ಹೊಸತನ್ನು ರೂಪಿಸಿಕೊಳ್ಳುವುದರಲ್ಲಿ ಮಾತ್ರವಲ್ಲ, ಅನ್ಯ ಪ್ರಭಾವವನ್ನು ಜೀರ್ಣಿಸಿಕೊಳ್ಳುವುದರಲ್ಲಿಯೂ ಇದೆ. ಕನ್ನಡ ಜೀವಂತವಾಗಿರುವುದು ತನ್ನ ಅಸ್ತಿತ್ವದ ಮೊದಲಿನಿಂದಲೂ ಈ ಪ್ರಕ್ರಿಯೆಗಳಿಗೆ ಒಳಗಾಗುತ್ತ ಬಂದಿರುವುದರಿಂದಲೇ. ಆದರೆ ನಮ್ಮ ಶಬ್ದಗಳನ್ನು ಅನವಶ್ಯಕವಾಗಿ ಕೈಬಿಡಕೂಡದು. ನಮ್ಮತನವನ್ನು ಬಿಟ್ಟರೆ ನಮ್ಮ ನುಡಿಯೂ ಅಂಥದೇ ಬದಲಾವಣೆಗೊಳಗಾಗುತ್ತದೆ. ನಮ್ಮದನ್ನು ಉಳಿಸಿಕೊಳ್ಳುವ ಜಿಗುಟುತನ ಇರಬೇಕು, ಆದರೆ ಅನ್ಯವನ್ನು ನಮ್ಮದಾಗಿ ಮಾಡಿಕೊಳ್ಳುವ ಜೀರ್ಣಶಕ್ತಿಯನ್ನೂ ಹೊಂದಬೇಕು.

ಕ್ರಿಸ್ತಶಕ ಹದಿಮೂರನೇ ಶತಮಾನದಲ್ಲಿ ಆಂಡಯ್ಯ ಎಂಬ ಕನ್ನಡದ ಕವಿಯೊಬ್ಬನಿದ್ದ, ಅವನು "ಕಬ್ಬಿಗರ ಕಾವಂ" ಎಂಬ ಚಿಕ್ಕ ಕಾವ್ಯವನ್ನು ಬರೆದಿದ್ದಾನೆ. ಅವನ ವೀರಪ್ರತಿಜ್ಞೆ ಎಂದರೆ ತನ್ನ ಕಾವ್ಯದಲ್ಲಿ ಒಂದೂ ಸಂಸ್ಕೃತ ಶಬ್ದವನ್ನೂ ಬಳಸಿವುದಿಲ್ಲ ಎಂಬುದು. ಆದರೆ ತದ್ಭವ ಶಬ್ದಗಳನ್ನು ಧಾರಾಳವಾಗಿ ಬಳಸಿದ್ದಾನೆ. ತದ್ಭವ ಎಂದರೆ ಸಂಸ್ಕೃತದ ಶಬ್ದಗಳು ಕನ್ನಡಕ್ಕೆ ಬದಲಾವಣೆಗೊಂಡು ಬಂದಂಥವು. ಆಂಡಯ್ಯನ ಮಾರ್ಗವನ್ನು ಬೇರಾರೂ ಅನುಸರಿಸಲಿಲ್ಲ; ಅದರ ಶೈಲಿ ಕೃತಕವಾಯಿತು ಎಂಬ ಕಾರಣಕ್ಕಾಗಿ. ಆದರೆ ಸಂಸ್ಕೃತ ಕನ್ನಡದ ಮೇಲೆ ಸವಾರಿ ಮಾಡುವುದನ್ನು ಆಂಡಯ್ಯ ಪ್ರತಿಭಟಿಸಿದ ರೀತಿಯಿದು. ನಮಗೆ ಎಲ್ಲ ಕಾಲಕ್ಕೂ ಬೇಕಾದದು ಅತಿ ಅನ್ಯಾಕ್ರಮಣವನ್ನು ಪ್ರತಿಭಟಿಸುವ ಆಂಡಯ್ಯನ ಕನ್ನಡಾಭಿಮಾನ, ಅನ್ಯಪ್ರಭಾವಕ್ಕೊಳಗಾಗುವುದಿಲ್ಲ ಎಂಬ ಅವನ ಮಡಿವಂತಿಕೆಯಲ್ಲ.

☆ – ☆ – ☆

# ಶಿವನಿಗೆ ಕೋರ್ಟ್ ಮಾರ್ಷಲ್

ಹದಿನೈದನೇ ಶತಮಾನದಲ್ಲಿ ರಚಿತವಾದ 'ಶೂನ್ಯಸಂಪಾದನೆ' ಎಂಬ ಹೆಸರಿನ ಒಂದು ಕನ್ನಡ ಗ್ರಂಥವಿದೆ. ಬಸವಾದಿಗಳ ವಚನಗಳನ್ನೇ ಸಂಭಾಷಣೆಯ ರೂಪದಲ್ಲಿ ಹೆಣೆದು ವಚನಚಳವಳಿಯ ಧಾರ್ಮಿಕ ಆಶಯಗಳನ್ನು ಒಟ್ಟಾರೆ ಗ್ರಹಿಸುವ ಅಪರೂಪದ ಗ್ರಂಥ ಅದು. ಕಾಲಾನುಕ್ರಮದಲ್ಲಿ ಮೂರು ಬಾರಿ ವಿವಿಧ ಯತಿಗಳಿಂದ ಪರಿಷ್ಕರಣೆಗೊಂಡ ಅದರ ಅಂತಿಮ ಪಠ್ಯ ಇಂದಿಗೂ ವಿರಕ್ತ ಪರಂಪರೆಯ ಪೂಜನೀಯ ಕೃತಿ.

ಆ ಕೃತಿಯಲ್ಲಿ ಒಂದು ಪ್ರಸಂಗವಿದೆ, ನುಲಿಯ ಚಂದಯ್ಯ ಎಂಬ ಶರಣನಿಗೆ ಸಂಬಂಧಿಸಿದ್ದು. ಅವನ ಹೆಸರಿನ ಹಿಂದಣ ವಿಶೇಷಣವೇ ಸೂಚಿಸುವಂತೆ ಅವನ ಕಾಯಕ ಹುಲ್ಲಿನಲ್ಲಿ ನುಲಿ ಅಥವಾ ಹಗ್ಗವನ್ನು ಹೊಸೆಯುವುದು. ಅದನ್ನು ನಿಗದಿತ ಬೆಲೆಗೆ ಮಾರಿ ಆತ ಜೀವಿಸುತ್ತಿದ್ದ. ಜೌಗು ಪ್ರದೇಶದಲ್ಲಿ ಬೆಳೆದ ಸೊಂಪಾದ ಹುಲ್ಲನ್ನು ಕತ್ತರಿಸಿ ಒಣಗಿದ ಮೇಲೆ ಅದನ್ನು ಹಗ್ಗವಾಗಿ ಹೊಸೆಯುತ್ತಿದ್ದ. ಶರಣಸಂಕುಲದಲ್ಲಿ ಅವನ ಕಾಯಕನಿಷ್ಠೆ ಜನಜನಿತ. ಒಮ್ಮೆ ಸಾಕ್ಷಾತ್ ಶಿವನಿಗೆ ಅವನನ್ನು ಪರೀಕ್ಷೆ ಮಾಡಬೇಕೆನಿಸಿತು.

ಅಂದು ಎಂದಿನಂತೆ ಚಂದಯ್ಯ ಕೊಳದ ಕಲ್ಯಾಣದ ಹೊರವಲಯದಲ್ಲಿದ್ದ ಒಂದು ಕೊಳದ ದಡದಲ್ಲಿ ಹುಲುಸಾಗಿ ಬೆಳೆದಿದ್ದ ಹುಲ್ಲನ್ನು ಕೊಯ್ಯುತ್ತಿದ್ದ. ತನ್ನ ಕೆಲಸದ ಮೇಲಲ್ಲದೆ ಇನ್ನಾವುದೂ ಗಮನಕ್ಕೆ ಬಾರದಷ್ಟು ಏಕಾಗ್ರತೆ ಅವನದು. ಅವನು ಕಟ್ಟಿಕೊಂಡಿದ್ದ ಇಷ್ಟಲಿಂಗ ಚಂದಯ್ಯನನ್ನು ಪರೀಕ್ಷಿಸಲೆಂದು ಕೊರಳಿಂದ ಜಾರಿ ಕೊಳದಲ್ಲಿ ಬಿತ್ತು. ಆದರೆ ಅದರ ಪರಿವೆಯೇ ಚಂದಯ್ಯನಿಗಿಲ್ಲ; ಹುಲ್ಲು ಕೊಯ್ಯುವ ಕೆಲಸದಲ್ಲಿ ಅವನ ಮನಸ್ಸು ನೂರಕ್ಕೆ ನೂರು ತಲ್ಲೀನಗೊಂಡಿತ್ತು. ಇದರಿಂದ ಶಿವ ಬೇಸ್ತುಗೊಂಡ. ಇಷ್ಟಲಿಂಗ ಜಾರಿ ನೀರಲ್ಲಿ ಬಿದ್ದಿರುವುದನ್ನು ಚಂದಯ್ಯನ ಗಮನಕ್ಕೆ ತರುವುದು ಹೇಗೆ ಎಂಬ ಚಿಂತೆ ಅವನನ್ನು ಆವರಿಸಿತು.

ಸರಿ, ಶಿವ ಪುರುಷರೂಪವನ್ನು ಧರಿಸಿ ಚಂದಯ್ಯನ ಬಳಿ ಬಂದ; ಲಿಂಗ ಜಾರಿ ನೀರಿಗೆ ಬಿದ್ದ ವಿಷಯ ತಿಳಿಸಿ ಮತ್ತೆ ತನ್ನನ್ನು ಧರಿಸಬೇಕೆಂದು ಕೇಳಿಕೊಂಡ. ಉಹ್ದೂ, ಚಂದಯ್ಯ ಒಪ್ಪಲಿಲ್ಲ; ಜಾರಿ ಬೀಳಲು ತಾನೇನೂ ಹೇಳಲಿಲ್ಲ, ಹಾಗಾಗಿ

ಪುನಃ ತಾನು ಧರಿಸಲಾರೆ ಎಂದು ಕಡ್ಡಿ ತುಂಡುಮಾಡಿದಂತೆ ಹೇಳಿಬಿಟ್ಟ. ಪರಮ ಪವಿತ್ರವಾದ ಇಷ್ಟಲಿಂಗ ಜಾರಿ ಬಿದ್ದ ವಿಷಯ ತಿಳಿದು ಚಂದಯ್ಯ ಪೇಚಾಡಬಹುದೆಂದು ಭಾವಿಸಿದ್ದ ಶಿವ ತಾನೇ ಮತ್ತಷ್ಟು ಪೇಚಾಡುವವಂತಾಯಿತು. ಅವನ ಹಿಂದೆ ಹಿಂದೆಯೇ ಹೋಗಿ ಪರಿಪರಿಯಾಗಿ ಬೇಡಿಕೊಂಡ, ಒಂದೇ ಸಮನೆ ಕಾಡಿದ. ಕೊನೆಗೆ ಚಂದಯ್ಯ ಎರಡು ಷರತ್ತುಗಳನ್ನು ಹಾಕಿ ಇಷ್ಟಲಿಂಗವನ್ನು ಸ್ವೀಕರಿಸಲು ಒಪ್ಪಿದ. ಒಂದು, ಮತ್ತೊಬ್ಬ ಕಾಯಕನಿಷ್ಠನಾದ ಮಡಿವಾಳ ಮಾಚಯ್ಯನ ಹೊಣೆ ತರಬೇಕು; ಮತ್ತು ಎರಡು, ಪುರುಷರೂಪು ಧರಿಸಿರುವವರೆಗೂ ಶಿವ ತನ್ನಂತೆ ಕಾಯಕದಲ್ಲಿ ತೊಡಗಬೇಕು. ಹೊಣೆ ತರುವುದೆಂದರೆ, ಮತ್ತೆ ಇಂಥ ತಪ್ಪು ನಡೆಯುವುದಿಲ್ಲವೆಂಬ ಮಾಚಯ್ಯನ ಗ್ಯಾರಂಟಿ. ಅದಕ್ಕೆ ಶಿವ ಒಪ್ಪಿ ಹಸಿ ಹುಲ್ಲನ್ನು ಕತ್ತರಿಸುವುದರಲ್ಲಿ ಮತ್ತು ಒಣ ಹುಲ್ಲನ್ನು ಹಗ್ಗವಾಗಿ ಹೊಸೆಯುವುದರಲ್ಲಿ ಚಂದಯ್ಯನ ಸಹಾಯಕನಾದ.

ನಿಗದಿತ ಅವಧಿಯ ಕಾಯಕ ಮುಗಿದ ಮೇಲೆ ಅಂದು ಹೊಸೆದಿದ್ದ ಹಗ್ಗವನ್ನು ಮಾರಿಕೊಂಡು ಬರಲು ಚಂದಯ್ಯ ಪುರುಷರೂಪಿನ ಶಿವನನ್ನು ಊರಿಗೆ ಕಳಿಸಿದ. ಅವನು ಶಿವ ತಾನೇ, ನೇರವಾಗಿ ಬಸವಣ್ಣನ ಬಳಿ ಹೋದ. ಬಸವಣ್ಣ ಚಂದಯ್ಯನ ಮೇಲಿನ ಗೌರವದಿಂದ ಒಂದು ಸಾವಿರ ಹೊನ್ನು ಕೊಟ್ಟು ನುಲಿಯನ್ನು ಕೊಂಡ. ಶಿವ ಅದನ್ನು ತಂದು ಚಂದಯ್ಯನಿಗೊಪ್ಪಿಸಿದ. ಆ ಹಣವನ್ನು ನೋಡಿದ ಚಂದಯ್ಯ ಕೆಂಡಾಮಂಡಲವಾದ. ತಾನು ಕಳಿಸಿದ್ದ ಹಗ್ಗದ ಬೆಲೆ ಒಂದು ಹಾಗ ಮಾತ್ರ, ಅದಕ್ಕೆ ಸಾವಿರ ಹೊನ್ನು ಕೊಟ್ಟು ತನ್ನ ದೊಡ್ಡಸ್ತಿಕೆಯನ್ನು ಪ್ರದರ್ಶಿಸುವ ಬಸವಣ್ಣನ ಹುಂಬತನವನ್ನು ತೆಗಳಿ, ಹಣವನ್ನು ಅವನಿಗೇ ವಾಪಸು ಕೊಟ್ಟು, ಒಂದು ಹಾಗ ಮಾತ್ರ ಉಳಿಸಿಕೊಳ್ಳಲು ಹೇಳಿದ. ವಿಧಿಯಿಲ್ಲದೆ ಶಿವ ಹಾಗೆಯೇ ಮಾಡಿದನಂತೆ

ಇದು ಕತೆ, ಆದರೆ ಈ ಸುಂದರ ಪ್ರಸಂಗದಲ್ಲಿ ಎರಡು ಆಶಯಗಳು ಅಡಕವಾಗಿವೆ. ಮೊದಲನೆಯದು ಲಿಂಗಧಾರಣೆ ಎಷ್ಟು ಅನಿವಾರ್ಯ ಎಂಬ ಜಿಜ್ಞಾಸೆ. ತನ್ನ ಕರ್ತವ್ಯ ನಿರ್ವಹಣೆಯ ಕಾಲದಲ್ಲಿ ಚಂದಯ್ಯನಿಗೆ ಲಿಂಗದ ಮೇಲೆ ಗಮನವೇ ಇಲ್ಲದಷ್ಟು ತಾದಾತ್ಮ್ಯ. ಅದು ಮೈಮೇಲಿದ್ದರೂ ಒಂದೇ, ಇಲ್ಲದಿದ್ದರೂ ಒಂದೇ. ಅಷ್ಟೇ ಅಲ್ಲ, ತನ್ನ ಕಾಯಕಕ್ಕೆ ಅಡ್ಡಿಯಾಗುವುದಾದರೆ ಅದು ಬೇಡವೇ ಬೇಡ. ಎರಡನೆಯದು ತನ್ನ ದುಡಿಮೆಗೆ ತಕ್ಕಷ್ಟು ಮಾತ್ರ ಪ್ರತಿಫಲ ಪಡೆಯಬೇಕೆಂಬ ಆದರ್ಶ. ಇವೆರಡರಿಂದಾಗಿ ಚಂದಯ್ಯನಿಗೆ ತನ್ನನ್ನು ಪರೀಕ್ಷೆಗೊಡ್ಡಬಯಸಿದ ಶಿವನನ್ನೇ ತರಾಟೆಗೆ ತೆಗೆದುಕೊಳ್ಳುವ ಆತ್ಮಸ್ಥೈರ್ಯ ಉಂಟಾಯಿತು. ಕರ್ತವ್ಯನಿಷ್ಠೆಯಿಂದ ಮನುಷ್ಯನಿಗೆ ಬರುವ ಧೃತಿ ಇಂತಹುದು.

ಇಂಥ ಕತೆಗಳನ್ನು ಕೇಳಿ ಜನ ತಲೆದೂಗುತ್ತಾರೆ, ಭಕ್ತಿಯಿಂದ ನಮಸ್ಕರಿಸುತ್ತಾರೆ, ಚಂದಯ್ಯನ ಧೈರ್ಯವನ್ನು ಕಂಡು ಬೆರಗಾಗುತ್ತಾರೆ. ಆದರೆ ಮರುಕ್ಷಣವೇ

ತಮ್ಮ ಎಂದಿನ ಆಸೆಬುರುಕುತನದಲ್ಲಿ ಮುಳುಗುತ್ತಾರೆ. ಕತೆ ಕೇಳಿ ಭಕ್ತಿಯಿಂದ ಕೈ ಮುಗಿದರೆ ಸಾಕೇ? ಕತೆಯ ಒಳಗಿನ ಆಶಯವನ್ನು ಮನದಟ್ಟುಮಾಡಿಕೊಳ್ಳುವುದೂ, ಜೀವನದಲ್ಲಿ ಅಳವಡಿಸಿಕೊಳ್ಳುವುದೂ ಬೇಡವೇ? ಕತೆ ಹಣ್ಣಿನ ಸಿಪ್ಪೆ ಇದ್ದಂತೆ, ಅದರ ಆಶಯ ತಿರುಳು. ಸಿಪ್ಪೆಯ ಬಣ್ಣಕ್ಕೆ ತಲೆದೂಗಿ, ತಿರುಳನ್ನು ಗಮನಿಸದಿದ್ದರೆ ಪ್ರಯೋಜನವೇನು? ಸಾಮಾನ್ಯರಿಗೆ ಕತೆ ಮುಖ್ಯವಾಗುತ್ತದೆ, ಅದರ ಆಶಯ ಗಮನಕ್ಕೆ ಬಾರದೇ ಹೋಗುತ್ತದೆ.

ಪುರಾಣಕತೆಗಳು ನಮಗೆ ಪ್ರಸ್ತುತವಾಗುವುದು ಇಲ್ಲಿ. ಲಾಂಛನವೇ ಎಲ್ಲ ಎಂದು ಹೊಡೆದಾಡುವ ದಡ್ಡತನ ಒಂದು ಕಡೆ; ತಾನು ಮಾಡಿದ ಕೆಲಸ ಎಷ್ಟೇ ಆಗಲಿ, ಆದಷ್ಟೂ ಹಿರಿದುಕೊಳ್ಳಬೇಕೆಂಬ ದುರಾಸೆ ಮತ್ತೊಂದು ಕಡೆ. ಜನ ನೂರಾರು ವರ್ಷಗಳಿಂದ ಪುರಾಣಕತೆಗಳನ್ನು ಕೇಳುತ್ತ ಬಂದಿದ್ದಾರೆ, ಭಕ್ತಿಯಿಂದ ಕೈಮುಗಿದಿದ್ದಾರೆ, ಮತ್ತೆ ತಮ್ಮ ಸ್ವಭಾವದಲ್ಲೇ ಮುಳುಗಿದ್ದಾರೆ. ಪುರಾಣಪಾತ್ರಗಳು ದೈವಿಕವಾದವು, ಅವುಗಳನ್ನು ತಾವು ಅನುಕರಿಸಲು ಸಾಧ್ಯವಿಲ್ಲ ಎಂದೇ ಜನರ ನಂಬಿಕೆ. ಲೋಕಾಯುಕ್ತರ ಕೈಗೆ ಸಿಕ್ಕಿಬೀಳುವವರಲ್ಲಿ ಬಹುಮಂದಿ ದೈವಭಕ್ತರೇ ಇರುತ್ತಾರೆ, ಪ್ರಾಯಶಃ ಅವರಿಗೇ ಶ್ರದ್ಧೆ ಹೆಚ್ಚು. ಕೊಳ್ಳೆ ಹೊಡದ ಹಣದಲ್ಲಿ ತಿರುಪತಿ ತಿಮ್ಮಪ್ಪನಿಗೆ ಪಾಲು ಅರ್ಪಿಸುವ ಮನೋಭಾವವನ್ನು ಹೋಗಲಾಡಿಸುವುದು ಹೇಗೆ? ಕೃತಿಗಳಲ್ಲಿ ಕತೆಗಳ ಮೂಲಕ ಮೌಲ್ಯಪ್ರತಿಪಾದನೆ ನಡೆದಿರುತ್ತದೆ, ಜನ ಭಕ್ತಿಯಿಂದ ಅವುಗಳನ್ನು ಕೇಳಿ ಅಲ್ಲಿಗೇ ಕೈಬಿಡುತ್ತಾರೆ. ಅಲ್ಲದೆ ಕತೆಗಳ ಒಳ ಅರ್ಥ ಅರಿಯುವ ಬುದ್ಧವಂತಿಕೆ ಬೇರೆ, ಆದರ್ಶಗಳನ್ನು ಅಂತಸ್ಥಮಾಡಿಕೊಳ್ಳುವ ಸ್ವಭಾವ ಬೇರೆ. ಪ್ರಾಯಶಃ, ಸಾಂಕೇತಿಕ ನಿರೂಪಣೆಯ ಘಟನೆಗಳನ್ನು ತದ್ವತ್ತಾಗಿ ಸ್ವೀಕರಿಸಿ, ಅವುಗಳ ಮಹತ್ವವನ್ನು ಗಮನಿಸದಿರುವ ಜನರ ರೀತಿ ಹೀಗೇ ಮುಂದುವರಿಯುತ್ತಲೇ ಇರುತ್ತದೇನೊ!

☆ – ☆ – ☆

# ಕುಸುಮಕೋಮಲ; ರಣಕೋಲಾಹಲ

ಮನುಷ್ಯನ ಸ್ವಭಾವವೇ ವಿಚಿತ್ರ ಅನ್ನಿಸುತ್ತದೆ. ಅಲ್ಲದೆ, ಎಂತಹವರಿಗೇ ಆಗಲಿ ವ್ಯಕ್ತಿತ್ವದಲ್ಲಿ ಎರಡು ಪದರಗಳಿರುತ್ತವೆಂದೂ ಕಾಣುತ್ತದೆ. ಇಲ್ಲದಿದ್ದರೆ, ಒಬ್ಬನೇ ವ್ಯಕ್ತಿ ಕೆಲವು ಸನ್ನಿವೇಶಗಳಲ್ಲಿ ಬಹು ಆರ್ದ್ರತೆಯಿಂದ ನಡೆದುಕೊಂಡರೆ, ಮತ್ತೆ ಕೆಲವು ಸನ್ನಿವೇಶಗಳಲ್ಲಿ ತೀರ ಕಠಿಣವಾಗಿಬಿಡುತ್ತಾನೆ, ಯಾಕೆ? ಮಾನವನ ನಡವಳಿಕೆಯ ಈ ರೀತಿಗೆ, ಸನ್ನಿವೇಶ–ವ್ಯಕ್ತಿಗಳ ನಡುವೆ ಇರುವ ಸಂಬಂಧ ಕಾರಣ, ನಿಜ. ಆದರೆ ಇದು ಒಂದು ಆದರ್ಶವೇ ಆಗಿಬಿಟ್ಟರೆ?

ನಾನು ಯೋಚಿಸುತ್ತಿರುವುದು ಕೊಲ್ಲುವುದರ ಬಗ್ಗೆ. ಕೊಲ್ಲುವ ಕ್ರಿಯೆ ಎರಡು ನೆಲೆಯಲ್ಲಿ ನಡೆಯಬಹುದು: ಒಂದು, ವೈಯಕ್ತಿಕ ಕಾರಣದಿಂದ; ಮತ್ತೊಂದು, ಸಾಮೂಹಿಕ ಕಾರ್ಯವಾಗಿ. ವೈಯಕ್ತಿಕ ಸಂಬಂಧದ ಕಾರಣದಿಂದ ಒಬ್ಬ ಮತ್ತೊಬ್ಬನನ್ನು ಕೊಂದರೆ ಅದು ಕೊಲೆಯಾಗುತ್ತದೆ. ಹಾಗೆ ಮಾಡಿದ ಸುದ್ದಿ ಕೇಳಿದಾಗ ನಮ್ಮ ಮೈ ನವಿರೇಳುತ್ತದೆ, ಎಷ್ಟು ಭಯಂಕರವಾಗಿ ಕೊಂದಿದ್ದಾನೆ ಎಂದು ನಡುಗುವಂತಾಗುತ್ತದೆ. ಅದನ್ನು ವಿಚಾರಿಸಲು ನ್ಯಾಯಾಲಯಗಳಿವೆ. ಆದರೆ ಅದೇ ಯುದ್ಧದ ಹೆಸರಿನಲ್ಲಿ ಕೊಲೆ ನಡೆದರೆ ಅದು ನಮ್ಮ ಪ್ರಶಂಸೆಗೆ ಪಾತ್ರವಾಗುತ್ತದೆ. ಮೊದಲ ಕೊಲೆಯನ್ನು ಬರ್ಬರ ಎಂದು ಬಣ್ಣಿಸಿದರೆ, ಎರಡನೆಯದನ್ನು ಧೈರ್ಯ ಎಂದು ಕೊಂಡಾಡುತ್ತೇವೆ. ಕೊಲೆ ನಡೆದಿರುವುದು ಸಾಬೀತಾದರೆ ಅಪರಾಧಿಗೆ ಮರಣದಂಡನೆಯವರೆಗೂ ಶಿಕ್ಷೆ ವಿಧಿಸಬಹುದು. ಅದೇ ಯುದ್ಧರಂಗದಲ್ಲಿ ಕೊಂದರೆ ಸೈನಿಕನ ಕೊರಳಿಗೆ ಪದಕಗಳ ಮಾಲೆ ಬೀಳುತ್ತದೆ, ಭುಜದ ಮೇಲೆ ಮೆಡಲುಗಳು ರಾರಾಜಿಸುತ್ತವೆ. ಊರಲ್ಲಿ ಕೊಲ್ಲುವವನು ಕ್ರೂರಿ, ಯುದ್ಧರಂಗದಲ್ಲಿ ಕೊಲ್ಲುವವನು ಪರಾಕ್ರಮಿ!

ಒಂದೇ ಹೃದಯ, ಒಂದೇ ಮನಸ್ಸು; ಆದರೆ ಒಂದೇ ಬಗೆಯ ಕೃತ್ಯಕ್ಕೆ ಎರಡು ಹೆಸರುಗಳು. ಕೊಲೆಯಲ್ಲಿ ವೈಯಕ್ತಿಕತೆ ಮುಖ್ಯ, ಎರಡನೆಯದರಲ್ಲಿ ಸಾಮೂಹಿಕ ಅನಿಸಿಕೆಗೆ ಪ್ರಾಧಾನ್ಯ. ಎರಡರಲ್ಲೂ ಜೀವಹಾನಿಯಾಗುತ್ತದೆ. ಆದರೆ ಅದನ್ನು ನೋಡುವ ಪರಿ ಬೇರೆಯಾಗುತ್ತದೆ. ಹಾಗಾದರೆ ಎಲ್ಲರೂ ಕೊಂಡಾಡುವ ಕರುಣೆ ಎಂದರೆ ಯಾವುದು? ಎಲ್ಲರೂ ಎತ್ತಿ ಹಿಡಿಯುವ "ಅಹಿಂಸೆ" ಎಂದರೆ

ಯಾವುದು? ಅದರ ಸ್ವರೂಪವೇನು? ವೈಯಕ್ತಿಕ ನೆಲೆಯಲ್ಲಿ ಜೀವಹಾನಿ ಮಾಡದಿರುವ ಮನೋಭಾವ ತೋರಿದರೆ ಕರುಣೆ; ಯುದ್ಧದ ಸಂದರ್ಭದಲ್ಲಿ ಕೊಲ್ಲಲು ಹಿಂಜರಿದರೆ ಹೇಡಿತನ. ಅರ್ಜುನ ಯುದ್ಧರಂಗದಲ್ಲಿ ಕರುಣೆ ತೋರಿಸುವ ಮನೋಭಾವ ವ್ಯಕ್ತಪಡಿಸಿದಾಗ ತಾನೇ ಶ್ರೀಕೃಷ್ಣ ಹದಿನೆಂಟು ಅಧ್ಯಾಯಗಳ ಭಗವದ್ಗೀತೆಯನ್ನು ಬೋಧಿಸಿ ಅವನ ಕರುಣೆಯನ್ನು ಕಿತ್ತುಹಾಕಿದ್ದು?

ಎಲ್ಲ ಮತಧರ್ಮಗಳ ಆದರ್ಶವೂ ಅಹಿಂಸೆಯೇ. ಎಂತಹ ಬಗೆಯದು ಎಂದರೆ, ತನ್ನ ನಡವಳಿಕೆಯಿಂದ ಇತರರ ಮನಸ್ಸಿಗೆ ನೋವಾದರೂ ಹಿಂಸೆ ಎಂದು ಪರಿಗಣಿಸುವಷ್ಟು, ಪ್ರಾಯಶ್ಚಿತ್ತ ಮಾಡಿಕೊಳ್ಳುವಷ್ಟು ಸೂಕ್ಷ್ಮ ಅದರ ಪರಿಕಲ್ಪನೆ. ಜನ್ನ ಎಂಬ ಕವಿಯ "ಯಶೋಧರ ಚರಿತೆ" ಎಂಬ ಸುಂದರವಾದ ಕನ್ನಡ ಕಾವ್ಯವೊಂದಿದೆ. ಅದರ ನಾಯಕ ಯಶೋಧರ ಎಂಬ ರಾಜ ಮಹಾ ಪರಾಕ್ರಮಿ; ಅವನ ನೀಳವಾದ ತೋಳುಗಳು ಪರರಾಜರ ರಾಜ್ಯಲಕ್ಷ್ಮಿಯನ್ನು ಹಿಡಿದೆಳೆಯುವ ಕಾರ್ಯದಲ್ಲಿ ನಿರತವಾಗಿತ್ತೆಂದು ಕವಿ ವರ್ಣಿಸುತ್ತಾನೆ. (ಈ "ರಾಜ್ಯಲಕ್ಷ್ಮಿ"ಯನ್ನು ಪಂಪ, "ಸೈನಿಕರ ಕತ್ತಿಗಳ ಸಮೂಹವೆಂಬ ನೈದಿಲೆಯ ಬನದಲ್ಲಿ ಝೇಂಕರಿಸುತ್ತ ಸುತ್ತಾಡುವ ದುಂಬಿ" ಎಂದು ವರ್ಣಿಸುತ್ತಾನೆ). ಅಂದರೆ ಅದು ಹಿಂಸೆಯಿಂದ ಮಾತ್ರ ಪಡೆಯಲು ಸಾಧ್ಯವಾಗುವಂಥದು. ಆದರೆ ಅರಿನೃಪರನ್ನು ಯುದ್ಧರಂಗದಲ್ಲಿ ನಿರ್ದಯವಾಗಿ ಕೊಲ್ಲುತ್ತಿದ್ದ ಈ ಯಶೋಧರ ಮಹಾರಾಜ ಅಹಿಂಸಾವ್ರತ ತೊಟ್ಟವನು! ತನ್ನ ತಾಯಿಯ ಒತ್ತಾಯಕ್ಕೆ ಮಣಿದು ಹಿಟ್ಟಿನ ಹುಂಜವೊಂದನ್ನು ಬಲಿ ಕೊಡಲು ನಿರ್ಧರಿಸುತ್ತಾನೆ. ಅದಕ್ಕಾಗಿ ತಾಯಿ–ಮಗ ಇಬ್ಬರೂ ಎಂಟು ಹೀನಜನ್ಮಗಳನ್ನೆತ್ತಬೇಕಾಗುತ್ತದೆ. ನಮ್ಮ ಆದಿಕವಿ ಪಂಪ ತನ್ನನ್ನು ಕವಿ ಹಾಗೂ ಕಲಿ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ. ಶತ್ರುರಾಜರನ್ನು ಸದೆಬಡಿದು ಭೂಮಿಯನ್ನು ಪಡೆದ ರಾಜನೆಂದು ತನ್ನ ಕಾವ್ಯದ ಪರ್ಯಾಯ ನಾಯಕನಾದ ಅರಿಕೇಸರಿಯನ್ನು ವರ್ಣಿಸುವ, ವೈಭವೀಕರಿಸುವ ಈ ಕವಿಯೇ "ಅಹಿಂಸಾ ಪರಮೋಧರ್ಮಃ" ಎಂಬ ಸಿದ್ಧಾಂತದ ಪ್ರತಿಪಾದಕನಾದ ಆದಿತೀರ್ಥಂಕರನನ್ನು ಕುರಿತ "ಆದಿಪುರಾಣ"ವನ್ನು ರಚಿಸಿದ್ದಾನೆ.

ಯುದ್ಧದ ಸನ್ನಿವೇಶದಲ್ಲಿನ ಮನೋಭಾವವಾದರೂ ಎಂತಹುದು? ಒಂದು ಸನ್ನಿವೇಶ ನೆನಪಿಗೆ ಬರುತ್ತದೆ. ನಾನು ಮೈಸೂರಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಚೀನಾ ಭಾರತದ ಮೇಲೆ ಆಕ್ರಮಣ ನಡೆಸಿದ ಕಾರಣದಿಂದ ಯುದ್ಧ ನಡೆಯಿತು. ನಾವು ಕೆಲವರು ಮೈಸೂರಿನ ಸಯ್ಯಾಜಿರಾವ್ ರಸ್ತೆಯಲ್ಲಿ ಸಾಯಂಕಾಲ ಡಬ್ಬಿ ಹಿಡಿದು ಜನರಿಂದ "ರಕ್ಷಣಾನಿಧಿ"ಗೆ ಚಿಲ್ಲರೆ ಸಂಗ್ರಹಿಸಿ ದೇಶಸೇವೆ ನಡೆಸಿದೆವು. ಚೀನ ಎಂದರೆ ಡ್ರ್ಯಾಗನ್ ಎಂದು ಆಗ ಬರೆದ ಪದ್ಯವೊಂದರಲ್ಲಿ ನಾನೇ ಸಮೀಕರಿಸಿದ್ದೆ. ಅಷ್ಟೇ ಅಲ್ಲ, ಆ ಮುಂದೆ ಹಲವಾರು ವರ್ಷಗಳು ಚೀನೀಯರು ನಮ್ಮ ಶತ್ರುಗಳು ಎಂಬ ಗುಂಗು ಮನಸ್ಸನ್ನಾವರಿಸಿತ್ತು. ಟಿಬೆಟನ್ನರೋ, ವಿಯೆಟ್ನಾಮಿಗಳೋ,

ಕೊರಿಯನ್ನರೋ ಯಾರು ಕಂಡರೂ ನಮಗೆ ಚೀನೀಯರ ತರಹವೇ ಕಾಣುತ್ತಿದ್ದು, ಅವರ ಬಗ್ಗೆ ಆಕ್ರೋಶ ಉಂಟಾಗುತ್ತಿತ್ತು.

ಸಾಮಾಜಿಕ ಜೀವನದಲ್ಲಿ ಅಹಿಂಸೆಗೆ ಪ್ರಾಶಸ್ತ್ಯ ನೀಡುವ ಮಾನವನ ಬುದ್ಧಿ ರಾಜಕಾರಣದ ಹಿನ್ನೆಲೆಯಲ್ಲಿ ನಾವು ಕಾಣದ ಜನರನ್ನೆಲ್ಲ ನಮ್ಮ ವೈರಿಗಳಂತೆ ಪರಿಗಣಿಸುವ ಹಾಗೆ ಮಾಡಿಬಿಡುತ್ತದಲ್ಲ! ಯುದ್ಧರಂಗದಲ್ಲಿ ಎದುರಿಗಿರುವವರನ್ನು ಶತ್ರು ಎಂದು ಪರಿಗಣಿಸುವ ಮನೋಭಾವವನ್ನು, ಯುದ್ಧದ ಸನ್ನಿವೇಶದಲ್ಲಿ ಕಾಠಿಣ್ಯವನ್ನು ತಳೆಯುವ ಮನಃಸ್ಥಿತಿಯನ್ನು ಸಮಾಜ ಜನರಲ್ಲಿ ಚಿಕ್ಕಂದಿನಿಂದಲೇ ಬೆಳೆಸಿರುತ್ತದೆ. ಜೊತೆಗೆ ಯುದ್ಧದ ಬಗ್ಗೆ ಆದರ್ಶವನ್ನೂ. ನಮ್ಮ ವೀರಗಲ್ಲುಗಳೆಲ್ಲ ಯುದ್ಧವನ್ನು ವೈಭವೀಕರಿಸುತ್ತದೆ, ಯುದ್ಧಕ್ಕೆ ಹಿಂಜರಿಯದಿರಲು ಯುವಜನರನ್ನು ಪ್ರೇರಿಸುತ್ತವೆ. ಸಾಮಾನ್ಯವಾಗಿ, ಇಂಥ ಶಾಸನಗಳ ಮೊದಲಲ್ಲಿ ಬರುವ ಶ್ಲೋಕ ಇದು: "ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ; ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ". ಅದರ ಅರ್ಥ: (ಯುದ್ಧದಲ್ಲಿ) ಗೆದ್ದರೆ ಲಕ್ಷ್ಮಿ ಸಿಗುತ್ತಾಳೆ, ಅದರಲ್ಲಿ ಸತ್ತರೆ ದೇವಕನ್ನಿಕೆಯರ ಸಹವಾದ ಸಿಗುತ್ತದೆ; ಹೀಗಿರುವಾಗ ಯುದ್ಧದಲ್ಲಾಗಲೀ, ಸಾಯುವುದಕ್ಕಾಗಲೀ ನಶ್ವರವಾದ ಈ ದೇಹದ ಬಗ್ಗೆ ಯೋಚಿಸ ಬೇಕೇಕೇ? ಇದಕ್ಕಿಂತ ದೊಡ್ಡ ಆಮಿಷ ಯುವಕರಿಗೆ ಬೇರೇನಿದೆ; ಗೆದ್ದರೆ ಹಣ, ಸತ್ತರೆ ಸುರಕನ್ನಿಕೆಯರು! ಯುವಜನತೆಯನ್ನು ಯುದ್ಧಕ್ಕೆ ಪ್ರೇರಿಸಲು ಪ್ರಬಲವಾದ ಆಕರ್ಷಣೆ! ಇದು ಹಿಂದಿನ ಕತೆಯೇನಲ್ಲ, ಈಗಿನದು ಕೂಡ. ಎಲ್ಲ ದೇಶಗಳೂ ರಕ್ಷಣೆಯ ಕಾರಣವೊಡ್ಡಿ ಸೈನ್ಯಕ್ಕೆ ಮೀಸಲಿಡುವ ಹಣ ಎಷ್ಟು, ಸೈನಿಕರಿಗೆ ನೀಡುವ ಸವಲತ್ತುಗಳೆಷ್ಟು!

ಕಟ್ಟಿದ್ದನ್ನು ಕೆಡಹುವ ಯುದ್ಧದ ಬಗ್ಗೆ ಅದಕ್ಕೇ ಸೂಕ್ಷ್ಮ ಮತಿಗಳು ಸದಾ ವಿರೋಧಭಾವ ವ್ಯಕ್ತಪಡಿಸುವುದು. ಆದರೆ ಯುದ್ಧಗಳು ನಿಂತಿಲ್ಲ. ಧರ್ಮಸಂಸ್ಥಾಪನೆಗಾಗಿ ಅನಿವಾರ್ಯವಾಗಿ ಮಾಡುತ್ತಿರುವ ಇದೇ ಕೊನೆಯ ಯುದ್ಧ ಎಂದು ಎಲ್ಲ ಯುದ್ಧಗಳ ಬಗ್ಗೆಯೂ ಹೇಳಿಕೊಳ್ಳುತ್ತ ಆ ಪರಂಪರೆ ಮುಂದುವರಿಯುತ್ತಲೇ ಇದೆ. ಇರಾಕ್ ಎಂಬ ಕುರಿಮರಿಯ ಮೇಲೆ ಅಮೆರಿಕ ತೋಳ ನಡೆಸಿದ ಯುದ್ಧ ಇತ್ತೀಚಿನ ನಿದರ್ಶನ.

☆ - ☆ - ☆

# ಶಿಕ್ಷಣ ಎಂಬ ಪ್ರಕ್ರಿಯೆ

ಹಿಂದಿನ ಕಾಲದಲ್ಲಿ ಶಿಕ್ಷಣ ಎಂದರೆ ಅಧ್ಯಾತ್ಮ ವಿದ್ಯೆ, ಮೋಕ್ಷಕ್ಕೆ ದಾರಿ ತೋರುವ ತಿಳಿವಳಿಕೆ ಎಂಬ ಅರ್ಥವೇ ಇದ್ದುದು. ಆ ಮಾರ್ಗ ಯಜ್ಞಮಾರ್ಗ, ಯಜ್ಞಗಳಿಂದಲೇ ದೇವತೆಗಳ ಸಂತೃಪ್ತಿ ಸಾಧ್ಯ ಎಂಬ ನಂಬಿಕೆ ಆಗಿನದು. ಹಾಗಾಗಿ ಮೋಕ್ಷಕ್ಕೆ ಅರ್ಹವಾದವರು ಮಾತ್ರ ವಿದ್ಯೆಗೆ ಅರ್ಹವಾಗಿದ್ದುದು, ಅಂದರೆ ದ್ವಿಜರು. ಯಜ್ಞವನ್ನು ಮಾಡಲು ಅರ್ಹರಾದವರು ಅವರು ಮಾತ್ರವೇ, ಅದ್ವಿಜರಲ್ಲ. ಅಂದರೆ ಪರಮೋಚ್ಚ ಶಿಕ್ಷಣಕ್ಕೆ ಅರ್ಹರಾದವರು ಅತ್ಯಂತ ಮೇಲುವರ್ಣದವರಾದ ಬ್ರಾಹ್ಮಣರು ಮಾತ್ರ; ಉಳಿದ ದ್ವಿಜರಾದ ಕ್ಷತ್ರಿಯರು ಮತ್ತು ವೈಶ್ಯರು ಅದರ ಪ್ರಾಥಮಿಕ ಜ್ಞಾನದ ನೆಲೆಯಲ್ಲಿಯೇ ತೃಪ್ತಿಪಡೆಯಬೇಕಾಗಿತ್ತು. ವೇದಗಳ ಉನ್ನತ ಶಿಕ್ಷಣಕ್ಕೆ ಘಟಿಕಾಸ್ಥಾನ ಗಳಂತಹ ಸಂಸ್ಥೆಗಳಿದ್ದವು; ವೇದಾಧ್ಯಯನನಿರತರಾದವರಿಗೆ ಸಕಲ ಸವಲತ್ತುಗಳನ್ನು ಆಡಳಿತ ಒದಗಿಸುತ್ತಿತ್ತು.

ಸಾಮಾನ್ಯರಿಗೆ ಬದುಕು ನಡೆಸಲು ಶಿಕ್ಷಣದ ಆವಶ್ಯಕತೆಯೇ ಇಲ್ಲ ಎಂಬುದು ಆಗಿನ ಭಾವನೆ. ಅಂದರೆ ಬದುಕು ಸಾಗಿಸಲುಬೇಕಾದ ವೃತ್ತಿಯ ತಿಳಿವಳಿಕೆಗೆ ವಿಶೇಷ ಅಭ್ಯಾಸವೇನೂ ಬೇಕಾಗದು, ವೃತ್ತಿನಿರತರ ಮನೆಯಲ್ಲಿ ಕಿರಿಯರು ಹಿರಿಯರ ಕಾರ್ಯವೈಖರಿಯನ್ನು ನೋಡಿಯೇ ಅದನ್ನು ಕರಗತಮಾಡಿಕೊಳ್ಳುವುದರಿಂದ ವೃತ್ತಿಶಿಕ್ಷಣಕ್ಕೆ ಪ್ರತ್ಯೇಕ ವ್ಯವಸ್ಥೆಯೇನೂ ಇರಲಿಲ್ಲ. ಅಂದರೆ ವೃತ್ತಿಯ ತಿಳಿವಳಿಕೆಯನ್ನು ವಿದ್ಯೆ ಎಂದೇ ಪರಿಗಣಿಸಿರಲಿಲ್ಲ. ಬ್ರಿಟಿಷರು ನಮ್ಮನ್ನು ಆಳತೊಡಗಿದ ಮೇಲೆ ನಮ್ಮ ಮನೋಭಾವ ವ್ಯತ್ಯಾಸಗೊಂಡು ವೃತ್ತಿ ನಡೆಸಲೂ ಶಿಕ್ಷಣ ಆವಶ್ಯಕ ಎಂಬ ಭಾವನೆ ಬಲಿಯಿತು. ಯಾಕಂದರೆ ವೃತ್ತಿ ಆನುವಂಶಿಕವಾಗಿಯೇ ಇರಬೇಕೆಂಬ ಭಾವನೆ ಬದಲಾಯಿತು.

ಅಂದರೆ ಬ್ರಿಟಿಷರ ಪ್ರಭಾವದಿಂದಾಗಿ ಶಿಕ್ಷಣ ಎಂಬುದು ಕೆಲವರಿಗೆ ಮಾತ್ರ ಸೀಮಿತವಾಗಿದ್ದುದು, ಅಂದರೆ ಧಾರ್ಮಿಕ ತಳಹದಿಯ ಮೇಲೆ ನಡೆಯುತ್ತಿದ್ದುದು, ತಪ್ಪಿ ವ್ಯಾಪಕತೆಯನ್ನು ಪಡೆಯಿತು. ಈ ಮಾರ್ಪಾಟು ಸಾಧ್ಯಮಾಡಿದ ಪರಕೀಯರಿಗೆ ನಾವೆಷ್ಟು ಕೃತಜ್ಞರಾಗಿದ್ದರೂ ಸಾಲದು. ಶಿಕ್ಷಣ ಎಂಬುದು ಬದುಕಿನ ನಂತರಕ್ಕೆ ಆವಶ್ಯಕವಾದಷ್ಟೇ ಬದುಕು ನಡೆಸಲೂ ಬೇಕು ಎಂದು ಮನವರಿಕೆ ಮಾಡಿಕೊಂಡ ನಂತರ ನಮ್ಮ ಶಿಕ್ಷಣ ಪದ್ಧತಿ ಸಾಕಷ್ಟು ಮಾರ್ಪಾಟುಗಳನ್ನು ಹೊಂದುತ್ತ ನಡೆದಿದೆ.

ಹೀಗಾಗಿ ಬ್ರಿಟಿಷ್ ಆಡಳಿತ ಸುಸ್ಥಾಪಿತಗೊಂಡ ನಂತರ ಶಿಕ್ಷಣ ಪದ್ಧತಿ ಹಾಗೂ ಸಂಸ್ಥೆಗಳು ಹೊಸ ಸ್ವರೂಪವನ್ನು ತಾಳಿದವು. ಹಿಂದೆ ವಿದ್ಯೆ ಪಡೆಯಲು ಗುರುವಿನ ಬಳಿ ವಿದ್ಯಾರ್ಥಿ ಹೋಗುವುದು ತಪ್ಪಿತು; ಅಥವಾ ರಾಜಕುಮಾರರಂತಹ ಆಡಳಿತಾರೂಢರ ಮಕ್ಕಳಿಗೆ ವಿದ್ಯೆ ನೀಡಲು ಗುರುಗಳೇ ಶಿಷ್ಯರ ಬಳಿ ಹೋಗುವುದೂ ತಪ್ಪಿತು. ವಿದ್ಯೆಯ ವ್ಯತ್ಯಸ್ಥ ಪರಿಕಲ್ಪನೆಗೆ ತಕ್ಕಂತೆ ಶಿಕ್ಷಣ ಸಂಸ್ಥೆಗಳು ಧಾರ್ಮಿಕ ನೆಲೆಗಟ್ಟಿನಿಂದ ಹೆಚ್ಚು ಹೆಚ್ಚಾಗಿ ಪಾರಾದವು. ಕನಿಷ್ಠ ಪಕ್ಷ, ಬದುಕಿನ ಶಿಕ್ಷಣ ಎಂಬುದು ಒಂದು ಧರ್ಮನಿರಪೇಕ್ಷಕ ಪ್ರಕ್ರಿಯೆ ಎಂಬ ಭಾವನೆ ಬಲಿಯಿತು. ಉಪಜೀವನಕ್ಕೆ ಬೇಕಾದ ಸಿದ್ಧತೆ ಮತ್ತು ಜೀವನಾವಶ್ಯಕವಾದ ಮೌಲ್ಯಗಳ ಅಳವಡಿಕೆ – ಈ ಎರಡರ ಸಂಯೋಜನೆ ಮಾಡುವುದು ಮುಖ್ಯವೆಂಬ ಮನೋಧರ್ಮ ಬೆಳೆಯಿತು.

ಈಗ ನಾವು ಇನ್ನೊಂದು ತುದಿಯನ್ನು ತಲುಪಿರುವಂತೆ ಕಾಣುತ್ತದೆ. ಅದೆಂದರೆ ವಿದ್ಯೆ ಇರುವುದು ಬದುಕು ನಡೆಸುವುದಕ್ಕೆ; ಅಥವಾ ಬದುಕು ನಡೆಸಲು ಬೇಕಾದ ಹಿನ್ನೆಲೆಯನ್ನು ಹೊಂದುವುದಷ್ಟೇ ವಿದ್ಯೆಯ ಉದ್ದೇಶ ಎಂಬ ಹಂತಕ್ಕೆ. ಜೊತೆಗೆ ಜಾಗತೀಕರಣದ ಹಿನ್ನೆಲೆಯಲ್ಲಿ ನಾವು ಶಿಕ್ಷಣದ ಬಗ್ಗೆ ಹೊಸ ಮೌಲ್ಯಗಳನ್ನು ರೂಪಿಸಿಕೊಳ್ಳಲು ತೊಡಗಿದ್ದೇವೆ. ನಮ್ಮ ಮುಂದಿರುವ ಮಾದರಿ ಎಂದರೆ ಅಮೆರಿಕದ್ದು. ಅಂದರೆ ಶಿಕ್ಷಣವೂ ಹೈಟೆಕ್ ಆಗಲು ತೊಡಗಿದೆ. ಸ್ವಾತಂತ್ರ್ಯ ಪಡೆದ ನಂತರ ನಾವು ತಳೆದಿದ್ದ ಆದರ್ಶಗಳು ಬದಲಾವಣೆಗೊಳ್ಳುತ್ತಿವೆ; ಅಥವಾ ಬದಲಿಸಿ ಕೊಳ್ಳುವಂತೆ ನಮ್ಮ ಮೇಲೆ ಒತ್ತಡ ಬರುತ್ತಿದೆ.

ಈ ಹೈಟೆಕ್ ಸ್ವರೂಪದ ಪ್ರಮುಖಾಂಶಗಳೆಂದರೆ, ಶಿಕ್ಷಣ ಸಂಸ್ಥೆಗಳ ಸ್ವರೂಪ ವ್ಯತ್ಯಾಸ ಮತ್ತು ಪಠ್ಯವಸ್ತುವಿನ ಬದಲಾವಣೆ. ಉನ್ನತ ಶಿಕ್ಷಣವನ್ನು ನಾವು ಅಂತಾರಾಷ್ಟ್ರೀಕರಣಗೊಳಿಸ ತೊಡಗಿದ್ದೇವೆ. ಅದರ ಪರಿಣಾಮಗಳು ನಾನಾ ಬಗೆಯಾದವು: ವಿದೇಶಿ ಶಿಕ್ಷಣ ಸಂಸ್ಥೆಗಳೇ ನೇರವಾಗಿ ಇಲ್ಲಿ ತಮ್ಮ ಶಾಖೆಗಳನ್ನು ಸ್ಥಾಪಿಸುವುದು; ಇಲ್ಲಿಯೇ ಶಿಕ್ಷಣ ಕೊಟ್ಟು ವಿದೇಶದ ಸರ್ಟಿಫಿಕೇಟ್ ಪಡೆಯುವುದು; ಸಂಸ್ಥೆಗಳು ತಮ್ಮವೇ ಆದ ಪಠ್ಯವಸ್ತುವನ್ನು ರೂಪಿಸಿಕೊಳ್ಳುವುದು; ಖಾಸಗಿ ಸಂಸ್ಥೆಗಳ ಸಹಯೋಗದಿಂದ ಸಾರ್ವಜನಿಕ ಸಂಸ್ಥೆಗಳು ಕಾರ್ಯನಿರ್ವಹಿಸುವುದು; ಆಕರ್ಷಕ ವಾದ ಕಟ್ಟಡ ಮುಂತಾದವನ್ನು ಹೊಂದುವುದು ಇತ್ಯಾದಿ. ಸರ್ಕಾರ ಇಲ್ಲಿಯೂ ಖಾಸಗೀಕರಣಕ್ಕೆ ಹೆಚ್ಚು ಅವಕಾಶ ನೀಡುತ್ತಿರುವುದರಿಂದ ಖಾಸಗೀ ಸಂಸ್ಥೆಗಳು ಇವೆಲ್ಲಕ್ಕೆ ಬೇಕಾದ ಸಂಪನ್ಮೂಲ ಹೊಂದಿಸಿಕೊಳ್ಳುವ ಕಾರಣದಿಂದ ದುಬಾರಿ ಶುಲ್ಕವನ್ನು ನಿಗದಿಪಡಿಸುವುದು ಹೆಚ್ಚಿದೆ.

ಈ ಶಿಕ್ಷಣದ ಮುಖ್ಯ ಉದ್ದೇಶ ಕರಿಯರ್‌ಗೆ ವಿದ್ಯಾರ್ಥಿಯನ್ನು ಸಿದ್ಧಗೊಳಿಸು ವುದು. ಅದಕ್ಕಾಗಿ ಎಷ್ಟು ಬೇಕೋ ಅಷ್ಟು. ನಾವು ಓದುತ್ತಿದ್ದಾಗ ಶಿಕ್ಷಣ ಸಂಸ್ಥೆಗಳಲ್ಲಿ ದೊಡ್ಡ ಮೈದಾನಗಳಿರುತ್ತಿದ್ದವು; ಆಗಾಗ ಚರ್ಚೆ–ಸಂಗೀತ–ನಾಟಕ ಇತ್ಯಾದಿ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತಿದ್ದವು. ವಿದ್ಯಾರ್ಥಿಗಳನ್ನು ಪ್ರಜಾಪ್ರಭುತ್ವಕ್ಕೆ

ಸಿದ್ಧಗೊಳಿಸುವ ಉದ್ದೇಶದಿಂದ ಕಾಲೇಜುಗಳಲ್ಲಿ ವಿದ್ಯಾರ್ಥಿ ಸಂಘಗಳಿರುತ್ತಿದ್ದವು; ಅವುಗಳಿಗೆ ಚುನಾವಣೆಗಳು ನಡೆಯುತ್ತಿದ್ದವು. ಅಂದರೆ ಪರೀಕ್ಷೆಗೆ ಹೊರತಾದ ವಿಷಯಗಳ ತರಬೇತಿಗೂ ಒಂದಷ್ಟು ಅವಕಾಶವಿರುತ್ತಿದ್ದವು. ಇದರ ಉದ್ದೇಶ ವಿದ್ಯೆ ಎಂಬುದು ಜೀವನೋಪಾಯಕ್ಕೆ ವ್ಯಕ್ತಿಯನ್ನು ಸಿದ್ಧಪಡಿಸುವುದು ಹೇಗೋ ಅವನ ವ್ಯಕ್ತಿತ್ವ ರೂಪಣೆ ಮಾಡುವುದು ಕೂಡ ಎಂಬ ಆದರ್ಶ. ಜೊತೆಗೆ ವಿದ್ಯೆಯಲ್ಲಿ ಸಾಮಾಜಿಕ ಕಾರಣಗಳಿಂದ ಹಿಂದುಳಿದವರಿಗೆ ಉತ್ತೇಜನ ನೀಡುವ ಕಾರಣದಿಂದ ಸರ್ಕಾರ ಆ ವರ್ಗಗಳವರಿಗೆ ಹೆಚ್ಚು ಸವಲತ್ತುಗಳನ್ನು ನೀಡುವ ಜವಾಬ್ದಾರಿಯನ್ನೂ ಹೊತ್ತಿತ್ತು. ಆದರೆ ಈಗ ಚಿತ್ರ ಬದಲಾಗಿದೆ.

ಆಹ್ವಾನದ ಮೇರೆಗೆ ನಾನೊಂದು ಕಾಲೇಜಿಗೆ ಹೋಗಿದ್ದೆ. ಐದು ಮಹಡಿಗಳ ಕಟ್ಟಡ, ಐಟಿ ಕಂಪೆನಿಗಳು ಕಟ್ಟಿದಂತೆ ಆ ಈ ಕಡೆ ಒಂದು ಕಾರು ಸಾಗುವಷ್ಟು ಮಾತ್ರವೇ ಜಾಗ; ಭೂಗತ ನೆಲೆಯಲ್ಲಿ ವಾಹನನಿಲ್ದಾಣ; ಹೊರಗೆಲ್ಲ ಹೊಳೆಯುವ ಗಾಜುಗಳ ಹೊದಿಕೆ; ಇಡೀ ಕಾಲೇಜಿನ ಕಟ್ಟಡಕ್ಕೆ ಕೇಂದ್ರೀಕೃತ ಏರ್‌ಕಂಡಿಷನಿಂಗ್ ವ್ಯವಸ್ಥೆ; ಶೇಕಡ ೧೦೦ರಷ್ಟು ವಿದ್ಯುತ್ ಬದಲಿ ವ್ಯವಸ್ಥೆ; ಪ್ರತಿ ವಿದ್ಯಾರ್ಥಿಗೂ ಪ್ರತ್ಯೇಕ ಆಸನ; ಮಹಡಿಯಿಂದ ಮಹಡಿಗೆ ಹತ್ತಿಳಿಯಲು ನಾಲ್ಕಾರು ಲಿಫ್ಟ್‌ಗಳು – ಮೇಲೆ ಬರೆದುಕೊಳ್ಳಲು, ಅದರ ಕೆಳಗೆ ಪುಸ್ತಕಗಳನ್ನಿಟ್ಟುಕೊಳ್ಳಲು ಜಾಗ – ಹೀಗೆ ಎಲ್ಲ ಅಚ್ಚುಕಟ್ಟು. ವಿದ್ಯಾರ್ಥಿ ಓದಿದರೆ ಸಾಕು, ಆದ್ದರಿಂದ ಮೈದಾನ ಇತ್ಯಾದಿ ಆನವಶ್ಯಕ ಪರಿಕರಗಳಿಲ್ಲ. ಇಷ್ಟೆಲ್ಲ ಇದ್ದ ಮೇಲೆ ಅದರ ಖರ್ಚು ನಿಭಾಯಿಸಲು ಹಣ ಬೇಡವೇ? ಆದ್ದರಿಂದ ಒಬ್ಬ ಪಿಯು ವಿದ್ಯಾರ್ಥಿ ವರ್ಷಕ್ಕೆ ಕೊಡಬೇಕಾದ ಫೀಸು ಕೇವಲ ಮೂವತ್ತೈದು ಸಾವಿರ ರೂಪಾಯಿಗಳು, ಅಷ್ಟೆ! ಇದಾವ ಮಹಾ; ಅಮೆರಿಕದಲ್ಲಾಗಿದ್ದರೆ ಇನ್ನೆಷ್ಟೋ. ವಿದ್ಯಾದಾನದ ಅದರ್ಶ ಹೊತ್ತ ಆಡಳಿತಮಂಡಳಿ ಅದಕ್ಕೇ ಭಾರತೀಯ ವಿದ್ಯಾರ್ಥಿ ಕೊಡಬಹುದಾದ ಶುಲ್ಕವನ್ನಷ್ಟೇ ನಿಗದಿಪಡಿಸಿದೆ! ಈ ಮಧ್ಯೆ, ಅಲ್ಲಿ ಮೆರಿಟ್ ಆಧಾರದ ಮೇಲೆ ನೇಮಕಗೊಂಡು ಕೆಲಸ ಮಾಡುವ ಅಧ್ಯಾಪಕರಿಗೆ ತಿಂಗಳಿಗೆ ಆರು ಸಾವಿರ ರೂಪಾಯಿಗಳು.

ಮಧ್ಯಾಹ್ನದ ಬಿಸಿಯೂಟ ತಿಂದು ಶಾಲೆಯ ಓದನ್ನು ಮುಗಿಸಿ ಬಂದ ನಮ್ಮ ಹಳ್ಳಿಯ ವಿದ್ಯಾರ್ಥಿ ಈ ಕಾಲೇಜಿಗೆ ಬಂದಾನೇ? ಅಂದರೆ ಈಗ ವಿದ್ಯೆ ಯಾರಿಗೆ? ಹಿಂದೆ ವಿದ್ಯೆ ಕೆಲವರ ಸೊತ್ತಾಗಿತ್ತು; ಈಗ ಎಲ್ಲರಿಗೂ ಅದೆಷ್ಟು ನಿಲುಕುತ್ತಿದೆ?

☆ – ☆ – ☆

# 'ದೊಡ್ಡವರ' ಪರಿ

ಕನ್ನಡಕ್ಕೆ ಶಾಸ್ತ್ರೀಯಭಾಷೆಯ ಸ್ಥಾನಮಾನ ಕುರಿತಂತೆ ಅನುಸರಿಸಬೇಕಾದ ರೀತಿಯ ಕುರಿತು ಮೊನ್ನೆ ಇಬ್ಬರು ಹೆಸರಾಂತ ಬರಹಗಾರರು ವೇದಿಕೆಯ ಮೇಲೆ ಜಟಾಪಟಿ ಮಾಡಿದ್ದು ಎಲ್ಲರ ಮನಸ್ಸಿನಲ್ಲಿ ಹಸುರಾಗಿದೆ. ಅದಕ್ಕೆ ಪತ್ರಿಕೆಗಳಲ್ಲಿ ಮಸ್ತು ಪ್ರಚಾರ ಸಿಕ್ಕಿತು. ಅದಕ್ಕೋಸ್ಕರವೇ ಅವರು ಹಾಗೆ ಮಾಡಿದ್ದು ಎಂದೂ ಕೆಲವರು ಆಡಿಕೊಂಡರು. ಮುಖ್ಯಮಂತ್ರಿಗಳು ಕೂಡ ಅದು "ದುರದೃಷ್ಟಕರ" ಎಂದು ಉದ್ಗಾರ ತೆಗೆದರು, ಮುಂದೆ ಕೆಲವು ದಿನಗಳವರೆಗೆ ಆ ಇಬ್ಬರು ಸಾಹಿತಿಗಳ ಬಗ್ಗೆಯೂ ಪತ್ರಿಕೆಗಳಲ್ಲಿ ಬರೆದರು.

ನಾನಿಲ್ಲಿ ಕನ್ನಡಕ್ಕೆ ಶಾಸ್ತ್ರೀಯಭಾಷೆಯ ಸ್ಥಾನಮಾನ ಕುರಿತಾಗಲೀ ಸದರಿ ಸಾಹಿತಿಗಳ ಬಗ್ಗೆಯಾಗಲೀ ಹೇಳಲು ಹೊರಟಿಲ್ಲ. ಈ ಸನ್ನಿವೇಶದ ಹಿನ್ನೆಲೆಯಲ್ಲಿ, ಮುಗ್ಧರಾದ ಜನರು "ಸಾಹಿತಿಗಳೂ ಹೀಗೆ ಜಗಳವಾಡುತ್ತಾರಲ್ಲ!" ಎಂದು ಬೆರಗುಗೊಂಡರಲ್ಲ, ಆ ಕುರಿತು ಯೋಚನೆ ಮಾಡಲು ಹೊರಟಿದ್ದೇನೆ. ಸಾಹಿತಿಗಳು ಜಗಳವಾಡಿದರೆ ಜನರ ಪ್ರತಿಕ್ರಿಯೆ ಹೀಗಿರುತ್ತದಲ್ಲ, ಅವರ ಮನಸ್ಸಿನಲ್ಲಿ ಸಾಹಿತಿಗಳ ಬಗ್ಗೆ ಏನೆಲ್ಲ ಭಾವನೆಗಳಿರುತ್ತವಲ್ಲ ಎಂಬ ಬೆರಗು ನನ್ನದು. ಬರೀ ಸಾಹಿತಿಗಳು ಮಾತ್ರವಲ್ಲ, ಎಲ್ಲ ಹೆಸರಾಂತವರ ಬಗ್ಗೆಯೂ, ಅವರು ಯಾವುದೇ ಕ್ಷೇತ್ರದಲ್ಲಿ ಹೆಸರು ಮಾಡಿರಲಿ, ಅವರ ಕುರಿತು ಸಾಮಾನ್ಯ ಜನ ಇದೇ ರೀತಿ ಪ್ರತಿಕ್ರಿಯಿಸುತ್ತಾರೆ.

ಆ ಹೆಸರಾಂತವರೂ ಮನುಷ್ಯರಲ್ಲವೇ? ಜನರ ಮನಸ್ಸಿನಲ್ಲಿ "ದೊಡ್ಡವರು" ಎಂದರೆ ಅತಿಮಾನುಷ ವ್ಯಕ್ತಿಗಳು ಎಂಬ ಭಾವನೆ ನೆಲಸಿಬಿಟ್ಟಿರುತ್ತದೆಂದು ತೋರುತ್ತದೆ. ಅದಕ್ಕೇ ನಮ್ಮ ಪತ್ರಿಕೆಗಳ ತುಂಬ ಇರುವುದು ಇಂಥವರಿಗೆ ಸಂಬಂಧಿಸಿದ ಸಾಮಾನ್ಯ ವಿಷಯಗಳೇ. ದೊಡ್ಡವರಿಗೆ ಸಂಬಂಧಿಸಿದ ಸಾಮಾನ್ಯ ಅಂಶಗಳೂ ಜನರಿಗೆ ವಿಶಿಷ್ಟವೆಂಬಂತೆಯೇ ಕಾಣುತ್ತದೆ. ಒಬ್ಬ ಮಂತ್ರಿ ಸರ್ಕಾರದ ಕಾರ್ಯಕ್ರಮದ ಬಗ್ಗೆ ಏನಾದರೂ ಹೇಳಿದರೆ ಅದು ಜನರಿಗೆ ತಿಳಿಯಬೇಕು, ಪ್ರಚಾರ ಬೇಕು, ಸರಿ. ಆದರೆ ಆ ಮಂತ್ರಿ ಎಳನೀರು ಕುಡಿಯುವಂತಹ ಚಿತ್ರವನ್ನೂ ಪತ್ರಿಕೆಗಳು ಪ್ರಕಟಿಸುತ್ತವೆ; ಜನ ಅದನ್ನು ನೋಡಿ ಏನೋ ವಿಚಿತ್ರ ಭಾವನೆಯನ್ನು ಹೊಂದುತ್ತಾರಲ್ಲ! ತಾವು ಮಾಡುವುದನ್ನು ದೊಡ್ಡವರು ಮಾಡಿದಾಗ ಏನೋ ಒಂದು ಅನಿರ್ವಚನೀಯ ಸಮಾಧಾನ ಸಾಮಾನ್ಯರಿಗೆ ದೊರಕುವಂತೆ ಕಾಣುತ್ತದೆ!

ಸಾಹಿತಿಗಳು, ಕಲಾವಿದರು, ರಾಜಕಾರಣಿಗಳು, ಕ್ರೀಡಾಪಟುಗಳು, ಉದ್ಯಮಿಗಳು, ಮಠಾಧಿಪತಿಗಳು ಎಲ್ಲರೂ ಮನುಷ್ಯರೇ. ಅವರಿಗೆ ಎಲ್ಲರಿಗಿರುವಂತೆಯೇ ಅನಿಸಿಕೆಗಳೂ ಇರುತ್ತವೆ, ಆಸೆ–ದ್ವೇಷಗಳೂ ಇರುತ್ತವೆ, ಹಾಗಿರುವುದು ಸಾಧ್ಯ ಎಂದು ಜನ ಅಂದುಕೊಳ್ಳುವುದೇ ಇಲ್ಲ. ಅವರು ಮಾಡಿದ ಅತಿಸಾಮಾನ್ಯದಲ್ಲೂ ವಿಶೇಷವನ್ನೇ ಕಾಣುತ್ತಾರೆ. ಇದೊಂದು ಸೋಜಿಗ. ಅದಕ್ಕೇ ಒಬ್ಬ ಮಂತ್ರಿ ಸೈಕಲ್ ತುಳಿದರೆ ಸುದ್ದಿಯಾಗುತ್ತದೆ, ಬಸ್ಸಲ್ಲಿ ಪ್ರಯಾಣಿಸಿದರೆ ವಿಶೇಷವೆನಿಸುತ್ತದೆ. ಆದರೆ ದೊಡ್ಡವರೂ ಮನುಷ್ಯರೇ. ಅವರಿಗೆ 'ಹೆಸರಿದೆ', ಆದ್ದರಿಂದ ದೊಡ್ಡವರೆನ್ನಿಸಿಕೊಳ್ಳುತ್ತಾರೆ. ಎಲ್ಲ ಒಂದೇ ಬಗೆ ಎಂದು ನಾನು ಹೇಳುತ್ತಿಲ್ಲ. ಎಲ್ಲ ಕ್ಷೇತ್ರಗಳ ವ್ಯಕ್ತಿಗಳಲ್ಲಿಯೂ "good, bad, ugly" ಅನ್ನುತ್ತಾರಲ್ಲ, ಎಲ್ಲ ಇರುತ್ತಾರೆ. ಪ್ರಾಯಶಃ ಪ್ರತಿಯೊಬ್ಬನದೂ ದ್ವೈಧೀಭಾವ, ಇಬ್ಬದಿಯ ವ್ಯಕ್ತಿತ್ವ, ಅವನು ಆಗಿರುವುದು ಮತ್ತು ಅವನು ಕಾಣಿಸಿಕೊಳ್ಳುವುದು. ಇದಕ್ಕೆ ಸಾಹಿತಿಯೂ ಹೊರತಲ್ಲ, ಮಠಾಧಿಪತಿಯೂ ಅಪವಾದವಲ್ಲ. ಸಾಹಿತಿಗೆ ಇತರರಿಗೆ ಇರದ ಯಾವುದೋ ವಿಶಿಷ್ಟ ಸಾಮರ್ಥ್ಯವಿರುತ್ತದೆ, ಅದರಿಂದ ಸಾಹಿತ್ಯ ರಚಿಸಬಲ್ಲ. ಮಿಕ್ಕವರು ಅವರವರ ಕ್ಷೇತ್ರಗಳಲ್ಲಿ ಹೀಗೆ ಮಾಡುವವರು. ಎಲ್ಲರಿಗೂ ಎರಡು ಅಸ್ತಿತ್ವಗಳೂ: ಒಂದು ವೈಯಕ್ತಿಕ ಅಸ್ತಿತ್ವ, ಮತ್ತೊಂದು ಪ್ರಾತಿಭ ವ್ಯಕ್ತಿತ್ವ. ಕೃತಿರಚನೆಯ ಹೊರತಾಗಿ, ಅಂದರೆ ವ್ಯಕ್ತಿಯಾಗಿ, ಅವನು ಇತರರಂತೆಯೇ.

ಸಾಮಾನ್ಯರಲ್ಲಿ ಶ್ರೇಷ್ಠರಿರುತ್ತಾರೆ; ಹಾಗೆಯೇ ದೊಡ್ಡವರಲ್ಲಿ ಕ್ಷುಲ್ಲಕರಿರುತ್ತಾರೆ. ಮಾಸ್ತಿಯವರ 'ವೆಂಕಟಿಗನ ಹೆಂಡತಿ' ಎಂಬ ಕತೆಯ ನಾಯಕ ಒಬ್ಬ ಸಾಮಾನ್ಯ ವ್ಯಕ್ತಿ. ಅವನು ಒಬ್ಬಳು ದೊಂಬ ಹುಡುಗಿಯನ್ನು ಮದುವೆಯಾಗುತ್ತಾನೆ; ಕೆಲಕಾಲದ ನಂತರ ಅವಳು ಮತ್ತೊಬ್ಬನೊಡನೆ ಓಡಿಹೋಗುತ್ತಾಳೆ; ಒಂದೆರಡು ವರ್ಷಗಳನಂತರ ಇನ್ನೊಬ್ಬನಲ್ಲಿ ಭ್ರಮನಿರಸನಗೊಂಡ ಅವಳು ವಾಪಸು ಬರುತ್ತಾಳೆ; ಈಗ ಅವಳ ಕೈಯಲ್ಲಿ ಒಂದು ಮಗು ಬೇರೆ ಇದೆ; ಆದರೂ ಅವಳ ಬಗ್ಗೆ ಇನ್ನೂ ಪ್ರೀತಿ ಇರಿಸಿಕೊಂಡಿದ್ದ ವೆಂಕಟಿಗ ಏನೂ ಪ್ರಶ್ನೆ ಮಾಡದೆ, ಯಾವ ಮುಜುಗರಕ್ಕೂ ಒಳಗಾಗದೆ ಅವಳನ್ನು ಹೆಂಡತಿಯಾಗಿ ಮತ್ತೆ ಸ್ವೀಕರಿಸುತ್ತಾನೆ. ವೆಂಕಟಿಗನ ಉದಾತ್ತತೆಯನ್ನು, ಒಬ್ಬ ಕ್ಷುದ್ರನ ಮಾತು ಕೇಳಿ ತಾನೇ ಅಗ್ನಿಪರೀಕ್ಷೆಗೆ ಗುರಿಪಡಿಸಿದ್ದ ಸೀತೆಯನ್ನು ಕಾಡಿಗೆ ಕಳಿಸಿದ "ಪುರುಷೋತ್ತಮ"ನೆನಿಸಿಕೊಂಡ ಶ್ರೀರಾಮನೊಡನೆ ಈ ಅಂಶದಲ್ಲಿ ಹೋಲಿಸಬಹುದೇ?

ವಿಶೇಷವಾದೊಂದು ಸಾಮರ್ಥ್ಯವಿದೆಯೆಂದಾಕ್ಷಣ ವ್ಯಕ್ತಿಯ ಗುಣ ಬದಲಾಗದು, ಅಥವಾ ಪೂರ್ತಿ ಮಾರ್ಪಡದು. ಅಂಥ ಶಕ್ತಿಯಿರುವವನೂ ತನ್ನ ಸ್ವಂತ ವ್ಯಕ್ತಿತ್ವವನ್ನು ಪ್ರಯತ್ನದಿಂದಲೇ ಬದಲಿಸಿಕೊಳ್ಳಬೇಕು. ನಮ್ಮ ಎಷ್ಟೋ ಕಾವ್ಯಗಳಲ್ಲಿ ಆಶಯಗಳ ದ್ವಂದ್ವ ಇರುವುದನ್ನು ಕಾಣಬಹುದು. ಕಾವ್ಯರಚನೆಗೆ ಅಥವಾ ಅಂತಹ ಯಾವುದೇ ವಿಶೇಷಕ್ಕೆ ಕಾರಣವಾದುದು ಪ್ರತಿಭೆ. ಪ್ರತಿಭೆ ಎಂದರೆ

ಮಿಂಚು ಎಂದರ್ಥ, ಅಂದರೆ ಬೆಳಕು. ಆ ಬೆಳಕಿನಲ್ಲಿ ವ್ಯಕ್ತಿಯ ಪರಿಮಿತಿಯನ್ನು ಮೀರಿದ ವಾಸ್ತವ ಗೋಚರಿಸುತ್ತದೆ; ಹಾಗಾಗಿ ಅದರಲ್ಲಿ ಸಾರ್ವತ್ರಿಕ ಸತ್ಯ ಗೋಚರಿಸುತ್ತದೆ. ಯಾವುದೇ ಬಗೆಯ ರಚನೆ ಧ್ಯಾನಸ್ಥ ಸ್ಥಿತಿಯಲ್ಲಿ ನಡೆಯುವಂಥದು. ಪ್ರತಿಭೆ ಕಾರ್ಯಶೀಲವಾಗದ ಸಾಧಾರಣ ಕ್ಷಣಗಳಲ್ಲಿ ಕಲೆಗಾರ ಕೇವಲ ವ್ಯಕ್ತಿಯಾಗಿರುತ್ತಾನೆ. ಹೀಗಾಗಿ ಅವನು ಆಗ ಮಿಕ್ಕೆಲ್ಲ ವ್ಯಕ್ತಿಗಳಂತೆಯೇ ನಡೆದುಕೊಳ್ಳುತ್ತಾನೆ. ಎಲ್ಲರಲ್ಲಿ ಹೇಗೋ ಹಾಗೆಯೇ ದೊಡ್ಡವರಲ್ಲಿಯೂ ಸಣ್ಣತನ, ಉದಾತತ್ತೆ, ಕೃಪಣತೆ, ಔದಾರ್ಯ ಮುಂತಾದ ಗುಣಗಳೆಲ್ಲ ಇರುತ್ತವೆ, ಅವರ ಸ್ವಂತ ವ್ಯಕ್ತಿತೆ ಮತ್ತು ಪ್ರಾತಿಭ ಶಕ್ತಿ ಕಾಣುವ ಆಶಯಗಳು ಇವೆರಡರಲ್ಲಿ ವ್ಯತ್ಯಾಸಗಳಿರುತ್ತವೆ. ಯಾರು ಇವೆರಡರ ನಡುವಣ ವ್ಯತ್ಯಾಸವನ್ನು ಕನಿಷ್ಠವಾಗಿಸಿಕೊಳ್ಳುತ್ತಾರೋ ಅಂತಹವರೇ ಶ್ರೇಷ್ಠರು.

ಆದರೆ ಕೆಲವರಲ್ಲಿ ಹೀಗಿರುವುದಿಲ್ಲ. ಕೆಲವು ರಾಜಕಾರಣಿಗಳ ಭಾಷಣದಲ್ಲಿ ವ್ಯಕ್ತವಾಗುವ ಆದರ್ಶ ಅವರ ವಾಸ್ತವ ಜೀವನದಲ್ಲಿ ಹೇಗೆ ಕಾಣಿಸುವುದಿಲ್ಲವೋ ಹಾಗೆಯೇ ಮಿಕ್ಕೆಲ್ಲ ಕ್ಷೇತ್ರಗಳಲ್ಲಿ ಕಾರ್ಯಶೀಲರಾದವರಲ್ಲಿಯೂ; ಅವರು ಅಭಿವ್ಯಕ್ತಿಗೊಳಿಸುವ ಆಶಯ ಒಂದಾದರೆ ಬದುಕುವುದು ಇನ್ನೊಂದು ಪರಿಯಲ್ಲಿಯೇ. ಒಂದು ಕ್ಷೇತ್ರದವರ ಬಗ್ಗೆ ಮತ್ತೊಂದರ ಜನರಿಗೆ ವಿವರಗಳು ಗೊತ್ತಿಲ್ಲದಿರುವುದರಿಂದ ದೂರದ ಬೆಟ್ಟ ನುಣ್ಣಗೆ ಕಾಣುತ್ತದೆ. ಬದುಕಿನ ಎಲ್ಲ ರಂಗಗಳ ಜನರಲ್ಲೂ ಆದರ್ಶ–ವಾಸ್ತವ, ಅಂತರಂಗ–ಬಹಿರಂಗ, ನಡೆ–ನುಡಿ ಇವೆರಡರ ಸಮನ್ವಯ ಕಾಣುವುದು ಕಡಿಮೆಯೇ. ಬದುಕು ಕೃತಿಗಳಿಗಿಂತ ದೊಡ್ಡದು ಎಂದು ಎಲ್ಲರೂ ಹೇಳುತ್ತಾರೆ; ವಿಪರ್ಯಾಸವೆಂದರೆ ಕೆಲವರ ಕೃತಿ ಮಹತ್ವದ್ದಾಗಿರುವಷ್ಟು ಅವರ ಬದುಕು ಇರುವುದಿಲ್ಲ. ನಾವು ಯಾವುದಕ್ಕೆ ಹೆಚ್ಚು ಮಾನ್ಯತೆ ಕೊಡಬೇಕು, ಬದುಕಿಗೋ ಕೃತಿಗೋ? ಕೃತಿಯ ಬೆಲೆಗಟ್ಟಬೇಕಾದರೆ ಕೃತಿಕಾರನ ವ್ಯಕ್ತಿತ್ವ ನಮ್ಮ ಗಮನದಲ್ಲಿರಬಾರದು ನಿಜ, ಆದರೆ ವ್ಯಕ್ತಿಯ ಯೋಗ್ಯತೆ ಅಳೆಯಬೇಕಾದರೆ ಅವನ ವಾಸ್ತವ ಬದುಕೇ ಮುಖ್ಯವಾಗುತ್ತದಲ್ಲವೇ? ಆದರೆ ಬಹಳ ಜನ ದೊಡ್ಡವರ ಕೃತಿಗಳು ಕಾಣುವಂತೆ ಅವರ ಒಳ ಬದುಕು ಜನರಿಗೆ ಕಾಣದು. ಹೀಗಾಗಿ ದೊಡ್ಡವರ ಬಗ್ಗೆ ಸಾಮಾನ್ಯರಿಗೆ ಇಂಥ ಭ್ರಮೆಗಳು ಉಳಿಯುತ್ತವೆಂದು ಕಾಣುತ್ತದೆ. ಆದ್ದರಿಂದಲೇ ದೊಡ್ಡವರ ಸಣ್ಣತನ ಕಂಡಾಗ ಸಾಮಾನ್ಯರು ಗೊಂದಲಗೊಳ್ಳುತ್ತಾರೆನ್ನಿಸುತ್ತದೆ.

☆ – ☆ – ☆

# 'ಸುವರ್ಣ' ಕರ್ನಾಟಕ

'ಸುವರ್ಣ' ಎಂಬ ಪದಕ್ಕೆ ಎರಡು ಅರ್ಥಗಳು; ಒಳ್ಳೆಯ ಬಣ್ಣ ಎಂಬುದು ಒಂದಾದರೆ, ಚಿನ್ನ ಎಂಬುದು ಇನ್ನೊಂದು. ಹೊಳಪು ಬಣ್ಣವಿರುವುದರಿಂದಲೇ ಚಿನ್ನಕ್ಕೆ ಸುವರ್ಣ ಎಂಬ ಹೆಸರು ಬಂದಿರುವುದು. ೨೦೦೫ರ ನವೆಂಬರ್ ಒಂದರಿಂದ ೨೦೦೬ರ ನವೆಂಬರ್ ಒಂದನೇ ತಾರೀಕಿನವರೆಗೆ ಸುವರ್ಣ ಕರ್ನಾಟಕ ಎಂದು ಆಚರಿಸಲು ಸರ್ಕಾರ ಸಿದ್ಧತೆ ನಡೆಸಿದೆ, ಏಕೀಕರಣವಾದಮೇಲೆ ಈ ಐವತ್ತು ವರ್ಷಗಳಲ್ಲಿ ಕರ್ನಾಟಕ ಹೊಳಪುಗೊಂಡಿದೆ ಎಂತಲೋ; ಅಥವಾ ಈ ವರ್ಷ ಅದಕ್ಕೆ ತಾನು ಹೊಳಪು ನೀಡುವೆನೆಂದೋ? ಸರ್ಕಾರದ ಮನಸ್ಸಿನಲ್ಲಿರುವುದು ಯಾವುದು?

ಈ ಆಚರಣೆಗೆ ಸರ್ಕಾರ ಅದೆಷ್ಟೋ ಕೋಟಿ ರೂಪಾಯಿ ಹಣ ವೆಚ್ಚ ಮಾಡಲು ಮೀಸಲಿರಿಸಿದೆ. ಒಂದಂತೂ ನಿಶ್ಚಿತ; ಅದೆಂದರೆ ನಿಗದಿಪಡಿಸಿದ ಹಣ ಖರ್ಚಾಗುವುದು. ಅಷ್ಟೇ ಯಾಕೆ, ಮುಂದಿನ ವರ್ಷದ ಹೊತ್ತಿಗೆ ಅಂದಾಜು ಬದಲಾಗಿ ಹೆಚ್ಚಾಗಲೂ ಬಹುದು. ಸರ್ಕಾರದ ಯೋಜನೆಯೆಂದರೆ ವೆಚ್ಚ ಮಾಡುವ ಯೋಜನೆ, ಇಂತಿಷ್ಟು ವೆಚ್ಚಮಾಡಬೇಕು ಎಂದು; ಇಷ್ಟು ಕೆಲಸ ಆಗಬೇಕು ಎಂದೇನೂ ಅಲ್ಲವಲ್ಲ! ಹಾಗಾಗಿ ಹಣ ಖರ್ಚಾಗುವುದು ಖಂಡಿತ.

ಕರ್ನಾಟಕಕ್ಕೆ ಹೊಳಪು ಕೊಡುವುದೆಂದರೆ ಏನರ್ಥ? ಕನ್ನಡಕ್ಕೆ ಎಂದು ತಾನೇ, ಈ ಮಣ್ಣಿಗಲ್ಲವಲ್ಲ? ಯಾಕೆಂದರೆ ಕರ್ನಾಟಕ ಎಂಬ ಹೆಸರು ಬಂದಿರುವುದೇ ಕನ್ನಡದಿಂದ. ಈ ವರ್ಷಾಚರಣೆಗೆ ಸರ್ಕಾರ ಕೆಲವು ಕನ್ನಡಪರ ಕೆಲಸಗಳನ್ನು ಮಾಡುವೆನೆಂದೂ ಹೇಳುತ್ತಿದೆ. ತೋರಿಕೆಗಾದರೂ ಹೇಳಬೇಕಲ್ಲ! ಒಂದು, ಬೆಂಗಳೂರಿನ ಮತ್ತು ಅಂತಹ ಕೆಲವು ನಗರಗಳ ಇಂಗ್ಲಿಷ್ ಸ್ಪೆಲ್ಲಿಂಗ್ ಅನ್ನು ಕನ್ನಡಕ್ಕನುಸಾರವಾಗಿ ಬದಲಿಸುವುದು. ಇನ್ನೊಂದು ೨೦೦೬ ರಲ್ಲಿ, ನವೆಂಬರ್ ಹೊತ್ತಿಗೆ, ಒಂದು ವಿಶ್ವ ಕನ್ನಡ ಸಮ್ಮೇಳನ ನಡೆಸುವುದು. ಒಂದೋ ಎರಡೋ ದಿನ ಅದರ ವರದಿಗಳು ಪತ್ರಿಕೆಗಳಲ್ಲಿ ಬಂದರೆ ಕರ್ನಾಟಕಕ್ಕೆ ಹೊಳಪು ಬಂದಂತೆಯೇ! ಯು. ಆರ್. ಅನಂತಮೂರ್ತಿಯವರ ಸಲಹೆಯಂತೆ ಕನ್ನಡದಲ್ಲಿ ಶಿಕ್ಷಣ ಕೊಡುವ ಒಂದೊಂದು ಇಂಜಿನಿಯರಿಂಗ್ ಮತ್ತು ವೈದ್ಯ ಕಾಲೇಜುಗಳನ್ನು ತೆರೆಯುವ

ಆಲೋಚನೆಯೂ ಸರ್ಕಾರಕ್ಕಿದೆಯಂತೆ. ಈಗಾಗಲೇ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವ ವಿದ್ಯಾಲಯ ಕನ್ನಡ ಮೀಡಿಯಂನ ಒಂದು ತಾಂತ್ರಿಕ ಕಾಲೇಜು ತೆರೆಯಲು ಒಪ್ಪಿಕೊಂಡಿದೆ, ಬೇರೆ.

ಆಯಿತಲ್ಲ, ಒಂದು ಕನ್ನಡ ಮಾಧ್ಯಮದ ವೃತ್ತಿ ಶಿಕ್ಷಣ ಕಾಲೇಜು ತೆರೆದರೆ ಕನ್ನಡ ಉದ್ಧಾರವಾದಂತೆಯೇ ಅಲ್ಲವೇ? ಯಾಕೆಂದರೆ ಆಚರಣೆಗಳೆಂದರೆ ಸಾಂಕೇತಿಕ ತಾನೇ? ಈ ಕಾಲೇಜುಗಳಿಗೆ ಕೆಲವೇ ಮಂದಿಯನ್ನು ಬಿಟ್ಟರೆ ವಿದ್ಯಾರ್ಥಿಗಳು ಸೇರುವುದಿಲ್ಲ. ಇದೇ ಕಾರಣ ಹೇಳಿ ಮುಚ್ಚಿಬಿಟ್ಟರೆ ತೀರಿತು. ಅಷ್ಟು ಹೊತ್ತಿಗೆ ಸುವರ್ಣ ಕರ್ನಾಟಕದ ಆಚರಣೆಯ ಅವಧಿ ಮುಗಿದಿರುತ್ತದೆ. ಹೇಳುವವರೂ ಸರಿ, ಕೇಳುವವರೂ ಸರಿಯೇ ಸರಿ. ಆಚರಣೆಯ ಹೆಸರಲ್ಲಿ ಒಂದು ಐವತ್ತೋ ಅರವತ್ತೋ ಕೊಟಿ ರೂಪಾಯಿ ವೆಚ್ಚವಾಗುವುದೊಂದೇ ಖಾತರಿ.

ಸರ್ಕಾರಕ್ಕೆ ನಿಜವಾದ ಅರ್ಥದಲ್ಲಿ ಕನ್ನಡಕ್ಕೆ ಹೊಳಪು ನೀಡುವ ಉದ್ದೇಶ ಮತ್ತು ಸಂಕಲ್ಪವಿದ್ದರೆ ಶಾಶ್ವತವಾದ ಕನ್ನಡಪರ ಕೆಲಸಗಳನ್ನು ಮಾಡುವ ಪ್ರಯತ್ನ ಮಾಡಬೇಕು. ಸರ್ಕಾರಕ್ಕೆ ತಾಕತ್ತು ಇದೆಯೇ? ಈ ವರ್ಷದಲ್ಲಿ ಅದು ಕೈಗೊಳ್ಳಬೇಕಾದ ಕನಿಷ್ಠ ಕಾರ್ಯಗಳಿವು:

(೧) ೧೯೯೪ರಲ್ಲಿಯೇ ಭಾರತದ ಸುಪ್ರೀಂ ಕೋರ್ಟ್ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆ ಅಥವಾ ರಾಜ್ಯಭಾಷೆಯಲ್ಲಿ ಕೊಡುವುದನ್ನು ಎತ್ತಿ ಹಿಡಿದು ತೀರ್ಪು ನೀಡಿದೆ. ಅದರ ವಿರುದ್ಧ ಕೆಲವರು ಮತ್ತೆ ಹೈಕೋರ್ಟ್‌ಗೆ ಅಪೀಲು ಹೋಗಿ ಅದಕ್ಕೆ ತಡೆಯಾಜ್ಞೆ ಇದೆ. ಅದನ್ನು ತಕ್ಷಣ ತೆರವುಗೊಳಿಸಿ, ಮುಂದಿನ ಶೈಕ್ಷಣಿಕ ವರ್ಷದಿಂದಲೇ ಜಾರಿಗೆ ಬರುವಂತೆ ನೋಡಿಕೊಳ್ಳುವುದಲ್ಲದೆ, ಈಗಿರುವ ಇಂಗ್ಲಿಷ್ ಮಾಧ್ಯಮ ಪ್ರಾಥಮಿಕ ಶಾಲೆಗಳು ಒಂದು ನಿರ್ದಿಷ್ಟ ಅವಧಿಯೊಳಗೆ ಮಾತೃಭಾಷಾ ಮಾಧ್ಯಮವನ್ನು ಅಳವಡಿಸಿಕೊಳ್ಳುವಂತೆ ಕ್ರಮ ಕೈಗೊಳ್ಳಬೇಕು. ಅಲ್ಲದೆ, ಈಗಿನ ನಾನಾ ಬಣ್ಣಗಳ ಪ್ರಾಥಮಿಕ ಶಾಲಾ ಮಾದರಿಗಳನ್ನು ರದ್ದುಪಡಿಸಿ, ಅಂದರೆ ಸರ್ಕಾರೀ ಅನುದಾನಿತ ಅನುದಾನರಹಿತ ನವೋದಯ ಮೊರಾರ್ಜಿ ನ್ಯಾಷನಲ್ ಇಂಟರ್ ನ್ಯಾಷನಲ್ ಇತ್ಯಾದಿ ಭೇದಗಳನ್ನು ತೊಡೆದು ಹಾಕಿ, ಏಕರೂಪದ ಪ್ರಾಥಮಿಕ ಶಾಲೆಗಳ ಸ್ಥಾಪನೆ ಮಾಡಬೇಕು. ಅದಕ್ಕಾಗಿ ಪ್ರಾಥಮಿಕ ಶಿಕ್ಷಣವನ್ನು ಸರ್ಕಾರೀಕರಣಗೊಳಿಸಬೇಕು.

(೨) ಪ್ರಾಥಮಿಕ ಶಿಕ್ಷಣವು ಸಂವಿಧಾನದ ಪ್ರಕಾರ ರಾಜ್ಯ ಸರ್ಕಾರದ ವ್ಯಾಪ್ತಿಯಲ್ಲಿ ಬರುವುದರಿಂದ ಈಗ ಕೇಂದ್ರ ಮಂಡಲಿಗಳ ಪಠ್ಯಕ್ರಮ ಅನುಸರಿಸುವ ಶಾಲೆಗಳೂ ಮಾತೃಭಾಷಾ ಮಾಧ್ಯಮಕ್ಕೆ

ಬದಲಿಸಿಕೊಳ್ಳುವಂತೆ ಕಾನೂನು ಮಾಡಬೇಕು. ಅಂಥ ಶಾಲೆಗಳು ತಲೆ ಎತ್ತಲು ಇನ್ನು ಮುಂದೆ ಅವಕಾಶ ನೀಡಬಾರದು.

(೩) ಸಮಾನತೆಯನ್ನು ನಮ್ಮ ಆದರ್ಶವೆಂದು ಹೇಳುವ ಸಂವಿಧಾನವೇ ಕುಬ್ಜ ಭಾಷೆಯಾದ ಹಿಂದಿಗೆ ಎಲ್ಲಿಲ್ಲದ ಮಾನ್ಯತೆಯಿತ್ತು, ಮಿಕ್ಕ ಅನೇಕ ಶ್ರೀಮಂತ ಭಾಷೆಗಳನ್ನು 'ಪ್ರಾದೇಶಿಕ ಭಾಷೆ'ಗಳೆಂದು ಕರೆದು ಅಸಮಾನತೆಗೆ ಮನ್ನಣೆ ನೀಡಿದೆ. ಅದನ್ನು ವಿರೋಧಿಸಿ, ಎಲ್ಲ ರಾಜ್ಯ ಭಾಷೆಗಳಿಗೂ ಸಮಾನತೆಯನ್ನು ಕೊಡಬೇಕೆಂಬ ನಿಲವು ತಳೆದು ಕೇಂದ್ರದ ಮೇಲೆ ಒತ್ತಡ ತರಬೇಕು. ಇದರೊಡನೆ, ಕರ್ನಾಟಕವು ದ್ವಿಭಾಷಾನೀತಿಯನ್ನು ಒಪ್ಪಿಕೊಂಡು, ಕುವೆಂಪು ಹೇಳುತ್ತಿದ್ದಂತೆ, ಶಿಕ್ಷಣದಲ್ಲಿ "ಕನ್ನಡ, ಜೊತೆಗೆ ಮತ್ತೊಂದು ಭಾಷೆ" ಎಂಬ ನೀತಿಯನ್ನು ಅನುಸರಿಸಬೇಕು.

(೪) ಶಿಕ್ಷಣವನ್ನು ಜಾಗತೀಕರಣದ ವ್ಯಾಪ್ತಿಯಿಂದ ಹೊರಗಿಟ್ಟು, ಹಿಂದಿನ ಅನೇಕ ಉನ್ನತ ಮಟ್ಟದ ಸಮಿತಿಗಳು ಶಿಫಾರಸು ಮಾಡಿದಂತೆ, ಉನ್ನತ ಶಿಕ್ಷಣವನ್ನೂ ರಾಜ್ಯಭಾಷೆಗಳಲ್ಲಿ ನೀಡುವ ಪ್ರಯತ್ನ ನಡೆಯಬೇಕು.

(೫) ಸರ್ಕಾರದ ಎಲ್ಲ ಹಂತಗಳಲ್ಲಿ ಕನ್ನಡ ಆಡಳಿತಭಾಷೆಯಾಗಿ ಜಾರಿಗೊಳ್ಳಬೇಕು. ಈ-ಗವರ್ನೆನ್ಸ್ ಹೆಸರಿನಲ್ಲಿ ಇಂಗ್ಲಿಷ್ ತುರುಕುವುದನ್ನು ಬಿಟ್ಟು ಕನ್ನಡವನ್ನು ಸಂಪೂರ್ಣವಾಗಿ ಜಾರಿಗೊಳಿಸಲು ಬೇಕಾದ ತಂತ್ರಾಂಶಗಳ ಅಭಿವೃದ್ಧಿಗೆ ಸರ್ಕಾರ ಪಣ ತೊಡಬೇಕು.

ಇಷ್ಟನ್ನೆಲ್ಲ ಮಾಡಲು ಸರ್ಕಾರಕ್ಕೆ ಧೈರ್ಯವಿದೆಯೇ, ಸಂಕಲ್ಪಶಕ್ತಿಯಿದೆಯೇ? ಇದಕ್ಕೆ ಎಂಟೆದೆ ಬೇಕು. ಬೇಂದ್ರೆಯವರು ಹೇಳಿದಂತೆ "ಗಂಡುಸಾದರೆ ನಿನ್ನ ಬಲಿ ಕೊಡುವೆಯೇನು?" ನನಗೆ, ನನ್ನಂತಹವರಿಗೆ ಖಂಡಿತ ನಚ್ಚಿಕೆ ಇಲ್ಲ. ಕೊನೆಗೆ ಆಗುವುದು ಒಂದೇ: ಹಲವಾರು ಕೋಟಿ ರೂಪಾಯಿಗಳ ವೆಚ್ಚ, ಅಂದರೆ ಕೆಲವರ ಮೇಲೆ ಸುವರ್ಣವೃಷ್ಟಿ!

☆ – ☆ – ☆

# ಮೇ(ಸೋ)ಲು ಸೇತುವೆಗಳು!

ಬೆಂಗಳೂರಿನಲ್ಲಿ ದಿನೇದಿನೇ ಹೆಚ್ಚುತ್ತಿರವ ವಾಹನ ದಟ್ಟಣೆಯನ್ನು ಕಡಿಮೆ ಮಾಡಲು ಮೇಲುಸೇತುವೆಗಳು ಆವಶ್ಯಕ ಎಂದು ನಾವೆಲ್ಲ ಭಾವಿಸಿದ್ದೆವು. ಟೌನ್ ಹಾಲಿನಿಂದ ಮೈಸೂರು ವೃತ್ತದವರೆಗಿನ ಮೇಲುಸೇತುವೆ ನಿರ್ಮಾಣಗೊಂಡದ್ದನ್ನು ಕಂಡು ಇನ್ನೇನು ಅಲ್ಲಿನ ಓಡಾಟ ಸಲೀಸು ಎಂದೇ ಎಲ್ಲ ಭಾವಿಸಿದ್ದರು. ಅಲ್ಲದೆ ಊಹೆಗೂ ಮೀರಿದ ವೇಗದಲ್ಲಿ ಮತ್ತು ದಕ್ಷತೆಯಿಂದ ಅದು ಸಿದ್ಧವಾದದ್ದು ನಾಗರಿಕರಲ್ಲಿ ಎಷ್ಟೋ ಸಮಾಧಾನ ತಂದಿತ್ತು. ಆದರೆ ಬಹು ಬೇಗ ನಿರಾಸೆ ಯುಂಟಾಯಿತು – ಅದರ ಮೇಲೆ ಓಡಾಡಲು ತೊಡಗಿದ ವಾಹನಗಳ ಸಂಖ್ಯೆ ನಿರೀಕ್ಷೆಗಿಂತ ಬಹಳ ಕಡಿಮೆ. ಇದರಿಂದ ಸಿಟಿ ಮಾರ್ಕೆಟ್ ಪ್ರದೇಶದ ಗೊಂದಲ ವೇನೂ ಕಡಿಮೆಯಾಗಲಿಲ್ಲ. ಅಲ್ಲದೆ, ಬ್ರಿಯಾಂಡ್ ವೃತ್ತದಂತಹ ಕಡೆಗಳಲ್ಲಿನ ಪರಿಸ್ಥಿತಿ ಮತ್ತಷ್ಟು ಕೆಟ್ಟಿತು. ಅಂದರೆ ಲೆಕ್ಕಾಚಾರ ತಪ್ಪಾಗಿತ್ತು. ಇಷ್ಟೇ ಆಗಿದ್ದರೆ ಒಂದು ರೀತಿ ಪರವಾ ಇರಲಿಲ್ಲ. ಆದರೆ ಕೆಟ್ಟಿದ್ದು ಅದಕ್ಕಿಂತ ಮಿಗಿಲಾದದ್ದು, ನಾಗರಿಕರ ನಸೀಬು.

ವಾಹನ ದಟ್ಟಣೆಯ ಹೆಸರಿನಲ್ಲಿ ನಮ್ಮ ರಾಜಕಾರಣಿಗಳ ಮೇಲುಸೇತುವೆಯ ನಿರ್ಮಾಣದಾಹ ಹೆಚ್ಚಾದಂತೆ ತೋರುತ್ತದೆ. ಅವುಗಳನ್ನು ಕಟ್ಟುವುದೇ ಪ್ರಗತಿ ಎಂಬ ಭಾವನೆ ಅವರಲ್ಲಿದೆ. ಅಥವಾ ಅಂಥ ನಂಬಿಕೆಯನ್ನು ಹುಟ್ಟಿಸಿ ಅವರು ಇನ್ನೇನನ್ನೋ ಸಾಧಿಸಿಕೊಳ್ಳುತ್ತಿರುವಂತಿದೆ. ಬೇಕಿಲ್ಲದ ಕಡೆಗಳಲ್ಲೆಲ್ಲ ಫ್ಲೈಓವರ್‌ಗಳ ನಿರ್ಮಾಣ ಆರಂಭಗೊಂಡಂತಿದೆ. ಕೆಲವು ಕಡೆಗಳಲ್ಲಿ ಇವುಗಳ ಆವಶ್ಯಕತೆಯಿರಬಹುದು; ಕೆಲವೆಡೆ ಇವುಗಳಿಂದ ಸ್ವಲ್ಪ ಅನುಕೂಲವೂ ಆಗಿರಬಹುದು. ಉದಾಹರಣೆಗೆ ಮೇಖ್ರಿ ವೃತ್ತದ ಗ್ರೇಡ್ ಸಪರೇಟರ್‌ನಿಂದ ಅನುಕೂಲ ಆಗಿರುವುದರಲ್ಲಿ ಸಂದೇಹವಿಲ್ಲ; ಡೈರಿ ವೃತ್ತದ ಬಳಿಯ ಮೂರು ಸ್ತರದ ಸೇತುವೆ ಅಲ್ಲಿನ ಸಮಸ್ಯೆಯನ್ನು ಗಣನೀಯವಾಗಿ ಕಡಿಮೆ ಗೊಳಿಸಿರಬಹುದು; ಹೆಬ್ಬಾಳದ ನಾನಾ ಬಾಹುಗಳ ಮೇಲುಸೇತುವೆ ಅನುಕೂಲಕರ ವಾಗಿರಬಹುದು; ಆದರೆ ಕೆಲವು ಕಡೆಗಳಲ್ಲಿನ ಫ್ಲೈಓವರ್‌ಗಳ ನಿರ್ಮಾಣ ಅನವಶ್ಯಕ ವಾದದ್ದಷ್ಟೇ ಅಲ್ಲ, ಅನನುಕೂಲವನ್ನು ಹೆಚ್ಚೇ ಮಾಡಿದೆ. ಕೆಂಗಲ್ ಹನುಮಂತಯ್ಯ ಜೋಡಿ ರಸ್ತೆಯ ಮೇಲುಸೇತುವೆಯ ನಿರ್ಮಾಣ ಗಜಗರ್ಭದ್ದು, ಆದರೆ ಫಲಿತಾಂಶ ಪರ್ವತಪ್ರಸವದ್ದು. ಮೇಲುಗಡೆಯೂ ಪೋಲೀಸ್ ಪೇದೆ ವಾಹನ ನಿಯಂತ್ರಣ ಮಾಡುತ್ತ ಸದಾ ನಿಂತಿರಬೇಕಾದ ಸ್ಥಿತಿ ಅಲ್ಲಿ ನಿರ್ಮಾಣವಾಗಿದೆ.

ನ್ಯಾಷನಲ್ ಕಾಲೇಜು ಬಳಿ ನಿರ್ಮಿಸಿರುವ ಮೇಲುಸೇತುವೆ ದೊಡ್ಡ ದುರಂತ, ಎಲ್ಲ ನಾಗರಿಕ ಸಂಹಿತೆಯನ್ನು ಉಲ್ಲಂಘಿಸಿ ಆಗಿರುವಂಥದ್ದು. ಆ ಪ್ರದೇಶದ ಅತ್ಯಂತ ಪ್ರಾಮಾಣಿಕ ಸಾರ್ವಜನಿಕ ಮುಖಂಡರು ಅದರ ನಿರ್ಮಾಣವನ್ನು ವಿರೋಧಿಸಿದರು; ಹೈಕೋರ್ಟಿಗೆ ಕೂಡ ವಿವಾದವನ್ನು ಕೊಂಡೊಯ್ದರು. ಆದರೆ ಮುಂದೊಂದು ಕಾಲಕ್ಕೆ ವಾಣೀವಿಲಾಸ ವೃತ್ತದಲ್ಲಿನ ವಾಹನ ದಟ್ಟಣೆ ಮಿತಿಮೀರುವುದೆಂದು ಗಿಳಿಶಾಸ್ತ್ರ ಉಸುರಿ ರಾತ್ರೋರಾತ್ರಿ ಅದರ ನಿರ್ಮಾಣ ಆರಂಭಗೊಂಡೇಬಿಟ್ಟಿತು. ಈಗ ಆ ಪ್ರದೇಶವನ್ನು ನೋಡಿದರೆ ಕೊಲೆಗೀಡಾದ ಮುಗ್ಧವ್ಯಕ್ತಿಯಂತೆ ಕಾಣುತ್ತಿದೆ. ರಾಮಕೃಷ್ಣಾಶ್ರಮದಿಂದ ಲಾಲ್‌ಬಾಗ್ ಪಶ್ಚಿಮ ಬಾಗಿಲವರೆಗಿನ ನೀಳ ದಾರಿಯ ಇಕ್ಕೆಲಗಳಲ್ಲಿರುತ್ತಿದ್ದ ಕೆಂಪು ಹೂಗಳ ಗೊಂಚಲುಗಳನ್ನು ವಸಂತದಲ್ಲಿ ನೋಡುವುದೇ ಒಂದು ಚಂದ. ವಿಸೀ "ಕೆಂಪುವೂ ಸಾಲ್ಮರನ ದಾರಿಯಲಿ ನಡೆನಡೆದು ಕೆಂಪು ತೋಟಕೆ ಬನ್ನಿ ವಿಶ್ರಾಂತಿಗೆ" ಎಂದು ಹಾಡಿಯೂ ಇದ್ದರು, ಅಷ್ಟು ದಿವ್ಯವಾದ ನೋಟ ಅದು. ಅದನ್ನು ಹಾಳುಗೆಡವಿ ಅಲ್ಲೀಗ ಮೇಲುಸೇತುವೆ ನಿರ್ಮಾಣ ಗೊಂಡಿದೆ. ಅದರ ಮೇಲೆ ಓಡಾಡುವ ವಾಹನಗಳನ್ನೆಣಿಸಲು ನಿಮ್ಮ ಎರಡು ಕೈಗಳೇ ಸಾಕು. ಜೊತೆಗೆ ಶಂಕರಮಠದ ರಸ್ತೆ ಮತ್ತು ವಾಣೀವಿಲಾಸ ರಸ್ತೆಗಳ ಕೂಟದಲ್ಲಿ ಗೊಂದಲವೋ ಗೊಂದಲ ಅನ್ನುವಂತಹ ಸ್ಥಿತಿ ನಿರ್ಮಾಣಗೊಂಡಿದೆ. ದಾರಿಯ ಉದ್ದಕ್ಕೂ ಇದ್ದ ಮರಗಳೆಲ್ಲ ಸಮಾಧಿಗೊಂಡಿವೆ. ಫ್ಲೈಓವರ್ ಹಾದುಹೋಗುವ ಇಕ್ಕೆಲಗಳಲ್ಲಿ, ಕಾಲುದಾರಿಗಳು ಮಾಯವಾಗಿವೆ. ರಾಮಕೃಷ್ಣಾಶ್ರಮದ ಕಡೆಯಿಂದ ಬಂದು ವಾಣೀವಿಲಾಸ ವೃತ್ತದಲ್ಲಿ ಬನಶಂಕರಿ ಕಡೆಗೆ ತಿರುಗಲು ವಾಹನಗಳು ನ್ಯಾಷನಲ್ ಕಾಲೇಜಿನ ಕಟ್ಟಡವನ್ನು ಭುಜಗಳಿಂದ ಉಜ್ಜಿಕೊಂಡೇ ಹೋಗಬೇಕು; ಹಾಗೆಯೇ ಸಜ್ಜನರಾವ್ ವೃತ್ತದ ಕಡೆಯಿಂದ ಬರುವ ವಾಹನಗಳು ಲಾಲ್‌ಬಾಗ್ ಕಡೆಗೆ ತಿರುಗುವಾಗ ವಾಸವಿ ಕಾಲೇಜಿನ ಕಟ್ಟಡವನ್ನು ನೇವರಿಸಬೇಕು. ರಸ್ತೆ ಕಡೆಗಿರುವ ಈ ಎರಡೂ ಕಾಲೇಜುಗಳ ತರಗತಿಗಳ ಸಾಲಿನಲ್ಲಿ ಪಾಠ ಮಾಡಲು ಸಾಧ್ಯವೇ ಇಲ್ಲ. ಅಷ್ಟೇಕೆ, ಕಿಟಕಿಗಳನ್ನೂ ತೆರೆಯಲಾಗದು; ಹೊರಗಿನ ಹೊಗೆ ಧೂಳುಗಳೆಲ್ಲ ರೂಮುಗಳನ್ನಾವರಿಸಿಬಿಡುತ್ತವೆ. ಇನ್ನು ಶಬ್ದದ ಭರಾಟೆಯಂತೂ ಹೇಳುವ ಹಾಗೆಯೇ ಇಲ್ಲ. "ಸುಭದ್ರ ಫುಟ್‌ಪಾತ್" ಎಂದು ಸ್ಥಳೀಯ ಎಂಎಲ್‌ಎ ಬೊಗಳೆ ಹೊಡೆದುಕೊಂಡರೂ ಮೇಲುಸೇತುವೆಯಗುಂಟ ಈ ಎರಡು ಕಾಲೇಜುಗಳ ಪಕ್ಕ ಪಾದಚಾರಿಗಳು ಒಂದೂವರೆ ಅಡಿ ಅಗಲದ ಮೋರಿ ಮೇಲಿನ ಕಲ್ಲು ಹಾಸಿನ ಮೇಲೆ ಎರಡೂ ಕೈಗಳಲ್ಲಿ ಜೀವ ಹಿಡಿದುಕೊಂಡು ಸಾಗಬೇಕು. ಅಲ್ಲಿ ರಸ್ತೆಯೇ ಹತ್ತು ಅಡಿ ಅಗಲ ಇರಬೇಕು. ಆ ಮೋರಿಯ ಮೇಲಿನ ಫುಟ್‌ಪಾತ್ ಮೇಲೆ ನಡೆಯುತ್ತ ಮಾತಿನ ಅಥವಾ ಯೋಚನೆಯ ಭರದಲ್ಲಿ ನಿಮ್ಮ ತೋಳನ್ನೇನಾದರೂ ಬೀಸಿದರೆ ಖಂಡಿತ ಪಕ್ಕದ ರಸ್ತೆಯ ಮೇಲೆ ಹೋಗುವ ಬಸ್ಸನ್ನೋ ಕಾರನ್ನೋ ನಿಮ್ಮೆಡೆಗೆ ಬಾಚಿಕೊಳ್ಳುವುದು ಖಂಡಿತ. ಈಗ ರಾಮಕೃಷ್ಣಾಶ್ರಮದ ಹತ್ತಿರವೂ ಐವತ್ತು ಕೋಟಿ

ರೂಪಾಯಿಗಳ ವೆಚ್ಚದಲ್ಲಿ ಮತ್ತೊಂದು ಮೇಲುಸೇತುವೆಯನ್ನು ನಿರ್ಮಿಸಲು, ಸಾರ್ವಜನಿಕರ ಪ್ರಬಲ ವಿರೋಧದ ನಡುವೆಯೂ, ಹುನ್ನಾರ ನಡೆಯುತ್ತದೆ. ಈ ಮೇಲುಸೇತುವೆಯನ್ನು ನೋಡಿದರೆ ನಗರದ ರಸ್ತೆಗಳನ್ನು ಸಂಪೂರ್ಣವಾಗಿ ಪಾದಚಾರಿಮುಕ್ತವನ್ನಾಗಿ ಮಾಡುವ ಉದ್ದೇಶ ನಮ್ಮ ಜನಸೇವಕರಿಗಿರುವಂತಿದೆ.

ಇನ್ನು, ಪಾದಚಾರಿಗಳು ರಸ್ತೆ ದಾಟಲೆಂದು ಹಾಕುತ್ತಿರುವ ಧಿಡೀರ್ ಮೇಲು ಸೇತುವೆಗಳ ವಿಷಯಕ್ಕೆ ಬರೋಣ. ಕೆಲವು ತಿಂಗಳ ಹಿಂದೆ ಜಯನಗರದ ಬಸ್ ನಿಲ್ದಾಣದ ಬಳಿ ಒಂದೆರಡು ವಾರಗಳಲ್ಲಿಯೇ ಇಂಥದೊಂದು ಮೇಲುಸೇತುವೆ ನಿರ್ಮಾಣಗೊಂಡಿತು. ಅದು ಕಬ್ಬಿಣದ ಪೂರ್ವನಿರ್ಮಿತ ತೊಲೆಗಳ ಸಹಾಯದಿಂದ ಆದದ್ದು. ನಿರ್ಮಾಣವೇನೋ ಬೇಗನೇ ಆಯಿತು. ಆದರೆ ಅದಕ್ಕೆ ಐವತ್ತು ಲಕ್ಷ ರೂಪಾಯಿ ವೆಚ್ಚವಂತೆ! ಅದನ್ನು ಅಮೆರಿಕದ ಮಾದರಿಯಲ್ಲಿ "ಸ್ಕೈವಾಕ್" ಎಂಬ ಹೆಸರಿನಿಂದ ಉದ್ಘಾಟಿಸಲಾಯಿತು. ಹತ್ತಲು ಮೂವತ್ತು ಮೆಟ್ಟಿಲುಗಳು, ಇಳಿಯಲು ಅಷ್ಟೇ ಸಂಖ್ಯೆಯ ಮೆಟ್ಟಿಲುಗಳನ್ನು ಬಳಸಿ ರಸ್ತೆ ದಾಟುವವರು ಇಲ್ಲವೇ ಇಲ್ಲ ಎನ್ನಬಹುದು. ಹುಡುಗರು ಸಲೀಸಾಗಿ ಓಡಾಡುವ ವಾಹನಸಾಲಿನ ನಡುವೆಯೇ ಅಡ್ಡತಿಡ್ಡ ರಸ್ತೆ ದಾಟುತ್ತಾರೆ; ಮುದುಕರು ನಿಂತು ಒಂದು ಕೈಯಲ್ಲಿ ಜೀವಹಿಡಿದು ಇನ್ನೊಂದರಲ್ಲಿ ವಾಹನಗಳತ್ತ "ನಿಧಾನಮಾಡಿ" ಎಂಬಂತೆ ಕೈ ತೋರಿಸುತ್ತ ದಾಟುತ್ತಾರೆ. ಅಥವಾ ಗಂಟೆಗೊಬ್ಬರು ಹಾಗೆ ದಾಟಿದರೆ ಅದು ವಾಹನಭೀತ ರಾದವರು. ಇಂಥವನ್ನು ಬೇರೆ ಬೇರೆ ಕಡೆಗಳಲ್ಲಿಯೂ ನಿರ್ಮಿಸುತ್ತೇವೆಂದು ನಗರ ಪಾಲಿಕೆಯವರು ಹೆದರಿಸುತ್ತಿದ್ದಾರೆ ಬೇರೆ!

ಈ ಮೇಲುಸೇತುವೆಗಳಿಂದ ಯಾರಿಗೆ ಪ್ರಯೋಜನ ಎಂದು ಕೆಲವೊಮ್ಮೆ ಅನ್ನಿಸುತ್ತದೆ. ಒಂದೆರಡು ವಾಹನಗಳು, ಒಂದಿಬ್ಬರು ಪಾದಚಾರಿಗಳು ಬಳಸಿದರೆ ಸಾಕೆ? ಅಥವಾ ಕಡಿಮೆ ಜನಕ್ಕೆ ಉಪಯುಕ್ತವಾದರೆ ಅಷ್ಟೇ ಸಾಕು ಎಂಬ ತೃಪ್ತಿಯೇ? ಅದೂ ನಿಜವೇ; ಕೆಲವೇ ಜನರ ಉಪಯೋಗಕ್ಕೆ ಕೋಟ್ಯಂತರ ರೂಪಾಯಿಗಳನ್ನು ವೆಚ್ಚಮಾಡಿದೆವೆಂಬ 'ಆತ್ಮ'ತೃಪ್ತಿ ಅವುಗಳ ನಿರ್ಮಾಪಕರಿಗೆ ಉಂಟಾಗಬಹುದು. ಖಂಡಿತ ಸತ್ಯ, ಈ ನಿರ್ಮಾಣಗಳಿಂದ ಇಬ್ಬರಿಗಂತೂ ಉಪಯೋಗ ಆಗಿಯೇ ಆಗುತ್ತದೆ; ಕಂಟ್ರಾಕ್ಟರರಿಗೆ ಮತ್ತು ಅದನ್ನು ಕೊಡಿಸುವ ರಾಜಕಾರಣಿಗಳಿಗೆ! ಸಾಕಲ್ಲವೇ?

☆ – ☆ – ☆

# ಮರಣೋತ್ತರ ಪ್ರಶಸ್ತಿಗಳು

ಜೀವನದ ಬಹುತೇಕ ಎಲ್ಲ ರಂಗಗಳಲ್ಲಿಯೂ ದೊಡ್ಡ ಸಾಧನೆ ಮಾಡಿದವರಿಗಾಗಿ ನೂರಾರು ಪ್ರಶಸ್ತಿಗಳನ್ನು ಸ್ಥಾಪಿಸಲಾಗಿದೆ. ಸರ್ಕಾರವೂ ಇಂತಹ ಅನೇಕವನ್ನು ವಿವಿಧ ರಂಗಗಳ ಗಣ್ಯರಿಗೆ ನೀಡುತ್ತದೆ; ಅನೇಕ ಖಾಸಗಿ ಸಾಂಸ್ಕೃತಿಕ ಸಂಸ್ಥೆಗಳು ಈ ಕೆಲಸ ಮಾಡುತ್ತಿವೆ. ಆದರೆ ಇವುಗಳ ವಿತರಣೆಯ ಬಗ್ಗೆ ಎಲ್ಲರಲ್ಲಿಯೂ ಏಕಗೌರವ ಭಾವನೆಯಿಲ್ಲ. ಸರ್ಕಾರ ಸಹಜವಾಗಿಯೇ ತನ್ನನ್ನು ಓಲೈಸುವವರಿಗಾಗಿ ಇವುಗಳನ್ನು ಮೀಸಲಿಡುತ್ತದೆ ಎಂಬುದು ಹೆಚ್ಚು ಕೇಳಿಬರುವ ಮಾತು. ಹಾಗೆಯೇ ಕೆಲವು ಖಾಸಗೀ ಸಂಸ್ಥೆಗಳ ವಿಷಯವೂ. ಇಂತಹ ಕೆಲವಂತೂ ಹಣಕಾಸು ತೆಗೆದುಕೊಂಡು ಪ್ರಶಸ್ತಿಗಳನ್ನು ನೀಡುತ್ತವೆ ಎಂಬ ಪುಕಾರೂ ಇದೆ. ಇದನ್ನು ಕುರಿತು ಬರೆಯಲು ನಾನು ಹೊರಟಿಲ್ಲ. ನನ್ನ ಈಗಿನ ಕಾಳಜಿ ಪ್ರಶಸ್ತಿಗಳನ್ನು ಕೊಡುವ ಉದ್ದೇಶದ ಕುರಿತು ಆಲೋಚಿಸಲು.

ಯಾವುದೋ ಒಂದು ಕ್ಷೇತ್ರದಲ್ಲಿ ಗಣನೀಯ ಕೊಡುಗೆಯನ್ನು ಸಲ್ಲಿಸಿರುವುದಕ್ಕಾಗಿ ಎಂದೇ ಈ ಪ್ರಶಸ್ತಿಗಳ ಸ್ಥಾಪನೆ. ಆ ಕೊಡುಗೆ ಸಾಕಷ್ಟು ಎಂದು ಕೆಲವರ ವಿಷಯದಲ್ಲಿ ನಿರ್ಧರಿಸುವಷ್ಟು ಸುಲಭವಾಗಿ ಪ್ರಶಸ್ತಿಗೆ ಪಾತ್ರರಾಗುವ ಮತ್ತೆ ಕೆಲವರ ವಿಷಯದಲ್ಲಿ ಹೇಳಲು ಬರುವುದಿಲ್ಲ. ಅಲ್ಲದೆ ಪ್ರಶಸ್ತಿಯನ್ನು ಯಾರಿಗೆ ಕೊಡಬೇಕೆಂದು ನಿರ್ಧರಿಸಲು ಕೆಲವೊಮ್ಮೆ ಸಮಿತಿಗಳಿರುತ್ತವೆ; ಕೆಲವೊಮ್ಮೆ ಸಮಿತಿಯ ಹೆಸರಲ್ಲಿ ಮುಖ್ಯಸ್ಥರೇ ತೀರ್ಮಾನಿಸುತ್ತಾರೆ – ಈ ಎಲ್ಲವೂ ಇದ್ದದ್ದೇ.

ಆದರೆ ಪ್ರಶಸ್ತಿ ಕೊಡುವುದರಿಂದ ಆಯಾ ಕ್ಷೇತ್ರಕ್ಕೆ ಆಗುವ ಲಾಭವೇನು? ಕೆಲವರನ್ನು ಗೌರವಿಸಿ ಸಂಸ್ಥೆ ತನ್ನ ಗೌರವವನ್ನೇ ಹೆಚ್ಚು ಮಾಡಿಕೊಳ್ಳುತ್ತದೆ ಎಂಬ ಮಾತೂ ಇದೆ. ಯಾಕೆಂದರೆ ನಿಜವಾದ ಪ್ರತಿಭಾವಂತರಿಗೆ ಈ ಪ್ರಶಸ್ತಿಗಳನ್ನು ಕೊಡದಿದ್ದರೆ ಅವುಗಳ ಬಗ್ಗೆ ಜನರಲ್ಲಿ ತಾತ್ಸಾರಮೂಡುತ್ತದೆ. ನಿಜವಾದ ದೊಡ್ಡವರಿಗೆ ಕೊಟ್ಟು ಅವರು ಅದನ್ನು ಸ್ವೀಕರಿಸಿದರೆ, ಆಗ ಅದು 'ಪ್ರತಿಷ್ಠಿತ' ಎನ್ನಿಸಿಕೊಳ್ಳುತ್ತದೆ. ಅದಕ್ಕೇ ಕೆಲವೊಮ್ಮೆ ಒಂದಿಬ್ಬರು ಅಂಥವರಿಗೆ ಕೊಟ್ಟು, ಆನಂತರ ಬೇಕಾದವರಿಗೆ ನೀಡುವ ಪರಿಪಾಟವೂ ಇದೆಯೆನ್ನುತ್ತಾರೆ, ಇರಬಹುದು. ಆದರೆ ಪ್ರಶಸ್ತಿ ತೆಗೆದುಕೊಂಡವರಿಗೆ ಇದರಿಂದ ಸಾರ್ಥಕ್ಯಭಾವನೆ ಬರುವುದರರ ಜೊತೆ, ಮುಂದೆ ಮತ್ತಷ್ಟು

ಸಾಧನೆ ಮಾಡಬೇಕೆಂಬ ಹಂಬಲ–ಜವಾಬ್ದಾರಿಗಳು ಮೂಡಬೇಕೆಂಬುದೂ ಇದರ ಹಿಂದಿನ ಉದ್ದೇಶಗಳೇ. ಆದರೆ ಮರಣೋತ್ತರವಾಗಿ ಪ್ರಶಸ್ತಿಗಳನ್ನು ಕೊಡುವುದರಿಂದ ಯಾರಿಗೆ ಲಾಭ? ಯಾರಿಗೆ ಪ್ರೋತ್ಸಾಹ ನೀಡಿದಂತಾಗುತ್ತದೆ?

ಸೈನ್ಯದಂತಹ ಕ್ಷೇತ್ರಗಳಲ್ಲಿ ಸಾವು ಬೇಗ ಬರುತ್ತದೆ; ಪ್ರಾಯಶಃ ಅಲ್ಲಿ ಮಾಡಿದ ಕೆಲಸಕ್ಕಾಗಿ ಪುರಸ್ಕಾರ, ಮಾಡಬೇಕಾದುದನ್ನು ಪ್ರೋತ್ಸಾಹಿಸಲಲ್ಲವೇನೋ. ಏಕೆಂದರೆ ಒಬ್ಬ ಯೋಧ ಸತ್ತ ಮೇಲೆ ಅವನಿಗೆ ಶೌರ್ಯ ಪ್ರಶಸ್ತಿಯಿತ್ತರೆ, ಸತ್ತ ಯೋಧನ ಮನೆಯವರಿಗೆ ಅದರಿಂದ ಹೆಚ್ಚಿ ಸವಲತ್ತುಗಳು ಬರಬಹುದೇನೋ; ಸೈನ್ಯದ ಪ್ರಶಸ್ತಿಗಳು ಇಂತದನ್ನು ಉತ್ತೇಜಿಸುವ ಉದ್ದೇಶವನ್ನೇ ಹೊಂದಿವೆಯೇನೋ, ಸಾಯಲು, ಸತ್ತನೆಂದು ಮನೆಯವರು ಗೋಳಾಡದಿರಲು!

ಆದರೆ ಸಾಹಿತ್ಯ ಸಂಗೀತದಂತಹ ಕ್ಷೇತ್ರಗಳಲ್ಲಿ ಮರಣೋತ್ತರವಾಗಿ ಪ್ರಶಸ್ತಿ ಕೊಡುವುದು ಯಾಕೆ? ಸೈನ್ಯದಲ್ಲಾದರೆ ಬೇಗ ಸತ್ತದ್ದಕ್ಕೇ ಪ್ರಾಯಶಃ ಪ್ರಶಸ್ತಿ, ಆದರೆ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ? ಈ ವಲಯಗಳ ಪ್ರಶಸ್ತಿಗೆ ಎರಡು ಉದ್ದೇಶಗಳಿರಬಹುದು: ಈಗಾಗಲೇ ಮಾಡಿರುವ ಸಾಧನೆಗೆ ತಕ್ಕ ಗೌರವ, ಮುಂದೆ ಮಾಡಲಿರುವ ಸಾಧನೆಗೆ ಪ್ರೋತ್ಸಾಹ. ಹೀಗಾಗಿ ಇಂಥ ಕ್ಷೇತ್ರಗಳಲ್ಲಿ ಪ್ರಶಸ್ತಿಗಳನ್ನು ನೀಡಬೇಕಾದದ್ದು ಸಾಕಷ್ಟು ಕೆಲಸ ಮಾಡಿದ, ಆದರೆ ಇನ್ನೂ ಕ್ರಿಯಾಶೀಲವಾಗಿದ್ದು ಮುಂದೆ ಮತ್ತಷ್ಟು ಕೊಡುಗೆ ನೀಡುವರೆಂಬ ಭರವಸೆಯುಳ್ಳವರಿಗೆ. ಅದೂ ಒಂದು ಗಣನೀಯ ಮೊತ್ತದೊಡನೆ ನೀಡುವ ಇಂಥ ಪ್ರಶಸ್ತಿಗಳಿಗೆ ಆಗಲೇ ಬೆಲೆ ಬರುವುದು. ಯಾಕೆಂದರೆ ಸಾಂಸ್ಕೃತಿಕ ಕ್ಷೇತ್ರದ ಎಷ್ಟೋ ಮಂದಿ ತಮ್ಮ ಸಾಧನೆಯ ನಡುವೆ ಐಹಿಕ ಸವಲತ್ತುಗಳ ಬಗ್ಗೆ ಯೋಚಿಸಿರುವುದಿಲ್ಲ. ಅವರಿಗೆ ಪ್ರಶಸ್ತಿಯ ಜೊತೆಗೆ ಒಂದಷ್ಟು ಹಣವನ್ನೂ ಕೊಟ್ಟರೆ ಕೆಲಸಕ್ಕೆ ಬಾರದ ಶಹಬ್ಬಾಸ್‌ಗಿರಿಯ ಜೊತೆ ಸ್ವಲ್ಪ ಸಹಾಯವೂ ಆಗುತ್ತದೆ. ಹೀಗಾಗಿ ಇವುಗಳನ್ನು ಮಧ್ಯಮ ವಯಸ್ಸಿನವರಿಗೆ, ಅಥವಾ ಕೈಕಾಲು ಗಟ್ಟಿಯಿರುವವರಿಗೆ, ನೀಡುವುದೇ ಸೂಕ್ತ. ಆದರೆ ಇನ್ನೇನು ಸಾಯುವ ಸ್ಥಿತಿಯಲ್ಲಿರುವವರಿಗೆ ಪ್ರಶಸ್ತಿ ಕೊಟ್ಟರೆ ಅವರಿಗೇನು ಲಾಭವಾಗುತ್ತದೆ? ತನ್ನ ಸೇವೆಯನ್ನು ಗುರುತಿಸಿದರು ಎಂದು ಅವರಿಗೆ ಕಿಂಚಿತ್ ಸಮಾಧಾನವಾಗಬಹುದು ಎಂದಿಟ್ಟುಕೊಳ್ಳೋಣ. ಆದರೆ ಸತ್ತ ಮೇಲೆ ಪ್ರಶಸ್ತಿ ಕೊಡುವುದರ ಸಾರ್ಥಕ್ಯವೇನು?

ಪಂಪ ಪ್ರಶಸ್ತಿಯ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಕೆಲವರಿಗೆ ಮರಣೋತ್ತರವಾಗಿ ಇದನ್ನು ನಿಡಲಾಗಿದೆ; ಅಪರೂಪವಾಗಿ ಎಂದರೂ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಕೆಲವೊಮ್ಮೆ ಹೀಗಾಗಿದೆ. ಆ ಪ್ರಶಸ್ತಿ ವಿಜೇತರಿಗೆ ಇದರಿಂದಾಗುವ ಸಮಾಧಾನವೇನು, ಸಹಾಯವೇನು? ಪಂಪ ಪ್ರಶಸ್ತಿಯನ್ನು ಮರಣೋತ್ತರವಾಗಿ ನೀಡಬಹುದು ಎಂದು ನಿಯಮಾವಳಿಯಲ್ಲಿ ಸೇರಿಸಿದಾಗ ನನಗನ್ನಿಸಿದ್ದೆಂದರೆ, ಮೊದಲ ಪ್ರಶಸ್ತಿಯನ್ನು ಪಂಪನಿಗೇ ಮರಣೋತ್ತರವಾಗಿ ನೀಡಬಹುದಲ್ಲ, ಅಂತೆಯೇ ಪ್ರತಿವರ್ಷ ಕನ್ನಡ ಸಾಹಿತ್ಯಕ್ಕೆ ಕಾಲಕ್ರಮದಲ್ಲಿ ಗಣನೀಯವಾಗಿ

ಸೇವೆ ಸಲ್ಲಿಸಿದ ರನ್ನ, ನಾಗಚಂದ್ರ, ಜನ್ನ, ಹರಿಹರ, ರಾಘವಾಂಕ, ಚಾಮರಸ, ಕುಮಾರವ್ಯಾಸ, ಲಕ್ಷ್ಮೀಶ – ಹೀಗೆ ನೀಡುತ್ತ ಬಂದರೆ ನಮ್ಮ ಸಾಹಿತ್ಯಕ್ಕೆ ಕೊಡುಗೆ ನೀಡಿದವರನ್ನೆಲ್ಲ ಸನ್ಮಾನಿಸಿದಂತಾಗುವುದಲ್ಲವೇ ಎಂದು! ಆದರೆ ದುರದೃಷ್ಟವಶಾತ್ ಹಾಗಾಗಲಿಲ್ಲ, ಒಂದೆರಡು ಸನ್ನಿವೇಶಗಳಲ್ಲಿ ಹಾಗಾಯಿತು. ಇದರಿಂದ ಸತ್ತ ಮೇಲೂ ವರ್ಚಸ್ಸು ಉಳಸಿಕೊಂಡವರು ಉಳಿದುಕೊಂಡರು. ಈ ಪ್ರಶಸ್ತಿಯ ಹಣ ಯಾರಿಗೆ ಹೋಗುತ್ತದೆ, ಹೆಂಡತಿಗೋ ಮಕ್ಕಳಿಗೋ ತಾನೇ? ಎಷ್ಟೋ ಸಲ ಸಾಹಿತ್ಯದ ಬೆಲೆ ಅರಿಯದ ಮಕ್ಕಳಿದ್ದರೆ ತಾಯಿಗೆ ಕೊಡದೆ ಅವರೇ ಈ ಹಣವನ್ನು ತಿಂದುಹಾಕ ಬಹುದು. ಅಥವಾ ಈ ಪ್ರಶಸ್ತಿಯ ನೆವದಿಂದ ಇತರ ಸವಲತ್ತುಗಳನ್ನೂ ಪಡೆಯ ಬಹುದು. ನನಗೆ ತಿಳಿದ ಒಂದು ದೃಷ್ಟಾಂತವನ್ನು ಹೇಳುತ್ತೇನೆ. ಕೆಲವು ವರ್ಷಗಳ ಹಿಂದೆ ಹೀಗೆ ಒಬ್ಬರ ಒಂದು ಕೃತಿಯನ್ನು ಹೆಸರಿಸಿ (ಹಿಂದೆ ಆ ಪದ್ಧತಿಯಿತ್ತು; ಈಚೆಗೆ ಅದನ್ನು ತಿದ್ದಿ 'ಒಟ್ಟು ಸಾಧನೆಗೆ' ಎಂದು ನೀಡುವ ಪರಿಪಾಟ ಬಂದಿದೆ. ಕೊಡಬೇಕಾದವರು ನಿಗದಿತ ಅವಧಿಯಲ್ಲಿ ಅಥವಾ ಈಚೆಗೆ ಏನೂ ಪ್ರಕಟಿಸದಿದ್ದರೂ ಪ್ರಶಸ್ತಿ ನೀಡಲು ನಿಯಮ ಬೇಕಲ್ಲ!) ಪಂಪ ಪ್ರಶಸ್ತಿಯನ್ನು ನೀಡಲಾಯಿತು. ಆ ಕೃತಿ ಮತ್ತು ಕೃತಿಕಾರರು ಅಂಥ ಎಲ್ಲ ಪ್ರಶಸ್ತಿಗಳಿಗೂ ಅರ್ಹತೆಯನ್ನು ಪಡೆದಿದ್ದವರು ಎಂಬುದರಲ್ಲಿ ಎರಡು ಮಾತಿಲ್ಲ. ಕೃತಿಕಾರರು ಬದುಕಿದ್ದರೆ ಇಂಥದಕ್ಕೆ ಅವರು ಒಪ್ಪುವಂಥವರಲ್ಲ; ಆದರೆ ಈಗ ಅವರಿಲ್ಲ, ಮಗ ಇದ್ದಾನೆ. ಆದ್ದರಿಂದ ಲಾಬಿ ನಡೆಯಿತು; ಪ್ರಶಸ್ತಿ ದೊರೆಯಿತು. ಪ್ರಶಸ್ತಿ ಪ್ರಕಟವಾಗಿ ಅದು ಪ್ರದಾನಗೊಳ್ಳುವ ಹೊತ್ತಿಗೆ ಮಗ ಪರದೇಶಕ್ಕೆ ಹೋಗಬೇಕಾಯಿತು. ಸಮಾರಂಭದ ಅಧ್ಯಕ್ಷರಿಗೆ ಒಂದು ಪತ್ರ ಬರೆದು, ತಾನು ಊರಿಗೆ ವಾಪಸಾದ ಮೇಲೆ ಪ್ರಶಸ್ತಿಯ ಮೊತ್ತವಾದ ಒಂದು ಲಕ್ಷ ರೂಪಾಯಿಗಳನ್ನು 'ಸೂಕ್ತ ರೀತಿ'ಯಲ್ಲಿ ವಿನಿಯೋಗಿಸುವುದಾಗಿ ಆಶ್ವಾಸನೆಯಿತ್ತ. ಎಲ್ಲ ಆಯಿತು. ಅದು ಎಲ್ಲಿ ಸೇರಬೇಕೋ ಅಲ್ಲಿ ಸೇರಿತು; ಜೊತೆಗೆ ಬದುಕಿದ್ದ ತಾಯಿಯಿಂದ ಅರ್ಜಿ ಕೊಡಿಸಿ, ಇಂಥ ಪ್ರಶಸ್ತಿ ಪಡೆದವರಿಗೆ ಸರ್ಕಾರ ಕೊಡ ಮಾಡುವ ಒಂದು ಸ್ಟ್ರೇ ಸೈಟ್ ಅನ್ನೂ ಬೆಂಗಳೂರಿನಲ್ಲಿ ಮಂಜೂರುಮಾಡಿಸಿ ಕೊಂಡದ್ದಾಯಿತು. ಜೊತೆಗೆ ಒಂದು ಟ್ರಸ್ಟ್ ಮಾಡಿಕೊಂಡು ತನ್ನ ತಂದೆಯ ಪುಸ್ತಕಗಳ ರಾಯಲ್ಟಿ ಹಣಕ್ಕೆ ತೆರಿಗೆ ಬೀಳದಂತೆಯೂ ನೋಡಿಕೊಂಡದ್ದಾಯಿತು. ತಂದೆ ಸಾಹಿತ್ಯದಲ್ಲಿ ಗಳಿಸಿದ್ದಕ್ಕಿಂತ ಮಗ ತಂದೆಯ ಹೆಸರಿನ ಬಲದಿಂದ ಗಳಿಸಿದ್ದು ಜಾಸ್ತಿ! ಅದಕ್ಕೇ ಮುಂದಿನ ಪೀಳಿಗೆಯವರ ಹಿತದೃಷ್ಟಿಯಿಂದ ಮರಣೋತ್ತರ ಪ್ರಶಸ್ತಿಗಳು ಹೆಚ್ಚಬೇಕಾದ್ದೂ, ದೊಡ್ಡ ಮೊತ್ತದ ಹಣ ಅವುಗಳಿಗೆ ಲಗತ್ತಿಸಬೇಕಾದ್ದೂ ಆವಶ್ಯಕ!

☆ – ☆ – ☆

# ಸುಳ್ಳು ಎಂಬ ಪುಣ್ಯಕಾರ್ಯ!

ನನಗೆ ಪವಿತ್ರ ಕ್ಷೇತ್ರಗಳೆಂದರೆ ಆಗದು. ಯಾಕೆಂದರೆ ಅಲ್ಲಿ ಯಾವ ಪಾವಿತ್ರ್ಯವೂ ಉಳಿದಿರುವುದಿಲ್ಲ; ಅಲ್ಲಿ ತುಂಬಿರುವುದು ಬರೀ ಕೊಳಕು ಗದ್ದಲ. ಈ ಕ್ಷೇತ್ರಗಳು ಹೆಚ್ಚು ಜನಪ್ರಿಯವಾದಷ್ಟೂ ಅಲ್ಲಿ ಅಪಾವಿತ್ರ್ಯ ಹೆಚ್ಚು. ಬರುವ ಭಕ್ತರ ಸಂಖ್ಯೆ ಹೆಚ್ಚಿದಷ್ಟೂ ಕೊಳಕು ಜಾಸ್ತಿ; ಪುಷ್ಕರಿಣಿಯಲ್ಲಿ ಮಿಂದರೆ ಪುಣ್ಯ ಬರುತ್ತದೆ ಎಂಬ ಕಡೆಗಳಲ್ಲಿ ನೀರೆಲ್ಲ ಗಬ್ಬೆದ್ದುಹೋಗಿರುತ್ತದೆ. ಎಷ್ಟೇ ದೊಡ್ಡವನಾಗಿರಲಿ, ಎಷ್ಟೇ ಭಕ್ತಿಯನ್ನು ಹೊಂದಿರಲಿ ಧ್ಯಾನ–ಪ್ರಾರ್ಥನೆಗಳಿಂದ ಪ್ರಕೃತಿಯನ್ನು ನಿಯಂತ್ರಿಸುವ ಶಕ್ತಿ ಅಸಾಧ್ಯವೆಂಬುದು ನನ್ನ ನಂಬಿಕೆ. ಆದ್ದರಿಂದ ನಾನು ಯಾವುದೇ ದೇವರನ್ನೂ ಪೂಜಿಸುವುದಿಲ್ಲ; ಯಾವುದೇ ಗುಡಿಗೆ ಹೋಗುವುದಿಲ್ಲ. ದೇವರ ಬಗ್ಗೆ ತಲೆ ಕೆಡಿಸಿಕೊಳ್ಳುವ ಸ್ವಭಾವ ನನ್ನದಲ್ಲ. ಇದು ನಲವತ್ತಕ್ಕೂ ಹೆಚ್ಚಿನ ವರ್ಷಗಳಿಂದ ನಾನು ಅನುಸರಿಸಿಕೊಂಡು ಬಂದಿರುವ ರೀತಿ.

ಆದರೆ ಇಪ್ಪತ್ತೈದು ವರ್ಷಗಳ ಹಿಂದೆ ತಿರುಪತಿಗೆ ಹೋಗಿದ್ದೆ, ಮನೆಯವರೆಲ್ಲ ಬಲವಂತ ಮಾಡಿದ್ದರಿಂದ. "ಈ ಬೇಸಗೆಯಲ್ಲಿ ತಿರುಪತಿ ತಿಮ್ಮಪ್ಪನೇ ಆ ಊರು ಬಿಟ್ಟು ಊಟಿಯಂತಹ ತಂಪು ಜಾಗಕ್ಕೆ ಹೋಗಿರುತ್ತಾನೆ. ನಾವೇಕೆ ತಿರುಪತಿಗೆ ಹೋಗಬೇಕು?" ಎಂದು ನಾನು ತಮಾಷೆ ಮಾಡುತ್ತಿದ್ದೆ. ಆದರೆ ಉಳಿದವರ ಭಕ್ತಿ ಯೆದುರು ನಾನು ತಲೆಬಾಗಲೇ ಬೇಕಲ್ಲ. 'ಎಲ್ಲ ಒಟ್ಟಿಗೆ ಹೋಗುವುದೇ ಅಪರೂಪ, ಪ್ರವಾಸದ ಥರ ಅಂತ ಬಾ' ಎಂದು ಎಲ್ಲ ಹೇಳಿದ್ದರಿಂದ ಜೊತೆ ಸೇರಿದೆ. ಆಗಿನ್ನೂ ನನ್ನ ತಾಯಿ–ತಂದೆ ಬದುಕಿದ್ದರು. ಅವರೂ ಬಂದಿದ್ದರು. ಹದಿನೈದು ಜನ ಇರಬೇಕು, ಹೊರಟಿದ್ದೆವು. ತಿರುಪತಿ ಮತ್ತು ಸುತ್ತಮುತ್ತಲ ಕ್ಷೇತ್ರದರ್ಶನಕ್ಕೆ. ಜನರ ಬಾಯಲ್ಲಿ ಹೆಚ್ಚು ಬರುವುದೇ ತಾನೇ ಪವಿತ್ರ ಸ್ಥಳ? ಆ ಪ್ರಚಾರದಿಂದ ಅಂತಹ ಸ್ಥಳಗಳಿಗೆ ಬರುವವರ ಸಂಖ್ಯೆ ಮತ್ತಷ್ಟು ಹೆಚ್ಚು. ಜನ ಹೆಚ್ಚಿದಷ್ಟೂ ಬರಿ ನೂಕುನುಗ್ಗಲಲ್ಲ, ಬೇಗ ದರ್ಶನ ಪಡೆಯಲು ಕ್ಯೂ ಮುರಿಯುವ ಪ್ರಯತ್ನಗಳೂ ಹೆಚ್ಚು. ಅದಕ್ಕೆ ಎಷ್ಟೋ ವೇಳೆ ಕಾವಲುಗಾರರ 'ಕೈಬೆಚ್ಚಗೆ' ಮಾಡುವ ಸಂದರ್ಭಗಳೂ ಇಲ್ಲದಿಲ್ಲ. ಅಂದರೆ ಎಲ್ಲಿ ಮನಸ್ಸು ನಿಷ್ಕಲ್ಮಶವಾಗಿರಬೇಕೋ ಅಲ್ಲಿ ಅಪಮಾರ್ಗದ ಅನುಸರಣೆ, ಎಲ್ಲಿ ನೈರ್ಮಲ್ಯವಿರಬೇಕೋ ಅಲ್ಲಿ ಕೊಳಕು ತುಂಬಿರುವುದು ವಿಪರ್ಯಾಸ.

ಸರಿ, ಹದಿನೈದು ಮಂದಿ ಹೊರಟೆವು. ತಿರುಪತಿ ಸುತ್ತಮುತ್ತೆಲ್ಲ ವರ್ಷದಲ್ಲಿ ಇರುವುದು ಎರಡೇ ಕಾಲ, ಬೇಸಗೆ ಮತ್ತು ಉರಿಬೇಸಗೆ ಎಂಬುದು ಜನಜನಿತ ಗಾದೆ. ಹಾಗಾಗಿ ಎಲ್ಲ ಕಡೆಯೂ ಶಕೆ, ಬೆವರಿನ ವಾಸನೆ. ಪ್ರಯಾಣ ಮಾಡುವಾಗ ಮಾತ್ರ ತೀಡುವ ಗಾಳಿಯಿಂದ ಆಹ್ಲಾದ ಉಂಟಾಗುವುದೇ ವಿನಾ ನಿಂತಿರುವಾಗಲಲ್ಲ. ಜೊತೆಗೆ ಯಾವ ದೇವಸ್ಥಾನಕ್ಕೆ ಹೋದರೂ ಉದ್ದದ ಕ್ಯೂ. ಗಂಟೆಗಟ್ಟಲೆ ಕಾಯ ಬೇಕು, ದೇವರ ದರ್ಶನಕ್ಕಾಗಿ. ನಮ್ಮ ತಂದೆ ಬಲಿಷ್ಠವಾಗಿರಲಿಲ್ಲ, ಏನಾಗಿದೆ ಯೆಂಬುದು ನಮಗೆ ತಿಳಿಯದು. ಆದರೆ ಬಹು ಬೇಗ ಬಳಲುತ್ತಿದ್ದರು. ಹೋದ ಕಡೆಯಲ್ಲೆಲ್ಲ ದೀರ್ಘ ಕ್ಯೂಗಳಲ್ಲಿ ಗಂಟೆಗಟ್ಟಲೆ ನಿಲ್ಲುವುದೆಂದರೆ ಅವರಿಗೆ ಕಷ್ಟವಾಗು ತ್ತಿತ್ತು. ಅವರಂತೆಯೇ ಇತರ ಅನೇಕರೂ ಅಲ್ಲಿದ್ದರು. ಬದುಕಿನಲ್ಲಿ ಏನೇನು ಕಷ್ಟ ಕಾರ್ಪಣ್ಯಗಳೋ. ಇರುವ ಕಷ್ಟದ ಮೇಲೆ ಮತ್ತಷ್ಟು ಮೈಮೇಲೆ ತಂದುಕೊಂಡು ದರ್ಶನಕ್ಕೆ ಬಂದಿದ್ದವರ ಸಮೂಹವೇ ಅಲ್ಲಿತ್ತು. ಮುಗ್ಧ ಭಕ್ತಿ ಕಟಕಟೆಯಲ್ಲಿ ನಿಂತು ಕೂತು ಬವಣೆಪಡುತ್ತಿತ್ತು. ಅವರ ಪಾಡನ್ನು ನೋಡಿದಾಗ ನನಗೆ ಅವರ ಬಗ್ಗೆ ಮರುಕ, ಇಂಥ ಯಾತ್ರೆ ಬೇಕೆ ಎಂಬ ಪ್ರಶ್ನೆ, ಇಷ್ಟು ಕಷ್ಟ ಕೊಟ್ಟಾದರೂ ಅಂಥವ ರನ್ನು ಯಾತ್ರೆಗೆ ಕರೆಯಬೇಕೆ ಎಂಬ ಕೋಪ – ಎಲ್ಲ ಒಟ್ಟಿಗೆ ಉಂಟಾಗುತ್ತಿತ್ತು. ಆದರೆ ನನ್ನ ಮಾತನ್ನು ಕೇಳುವವರಾರು?

ತಿರುಮಲ ಬೆಟ್ಟದ ಮೇಲೆ ಹೋದದ್ದಾಯಿತು. ದೇವರ ದರ್ಶನ ಆಗಬೇಕಲ್ಲ. ಹೆಚ್ಚು ಹಣ ತೆತ್ತರೆ ದರ್ಶನ ಬಹು ಬೇಗ ಆಗುವ ವ್ಯವಸ್ಥೆ ಲಾಗಾಯ್ತಿನಿಂದ ಇದೆ. ಆದರೆ ನಮ್ಮ ಬಳಿ ಅಷ್ಟು ಹಣವೆಲ್ಲಿ ಬರಬೇಕು; ಅಲ್ಲದೆ ಇದ್ದವರು ಹದಿನೈದು ಮಂದಿ. ಹಾಗಾಗಿ 'ಧರ್ಮದರ್ಶನ'ಕ್ಕೆ ಹೊರಟೆವು. ಬೆಳಗ್ಗೆಯೇ ಹೋಗಿದ್ದೆವಾದರೂ, ಅಷ್ಟು ಹೊತ್ತಿಗಾಗಲೇ ಮೈಲಿಗಟ್ಟಲೆ ಕ್ಯೂ ಬೆಳೆದಿತ್ತು. ಈಗೇನೋ ಕ್ಯೂ ಪದ್ಧತಿಯಲ್ಲಿ ಸುಧಾರಣೆ ತಂದಿರುವರಂತೆ, ಮೊದಲೇ ಗುರುತಿನ ಚೀಟಿ ಕೊಟ್ಟು ಸುಮಾರು ಇಷ್ಟು ಹೊತ್ತಿಗೆ ಬನ್ನಿ ಎಂದು ಹೇಳುವರಂತೆ. ಹಾಗಾಗಿ ಕ್ಯೂನಲ್ಲಿ ಕಳೆಯಬೇಕಾದ ಕಾಲದಲ್ಲಿ ಸಾಕಷ್ಟು ಕಡಿತವಾಗುತ್ತದೆ ಎಂದು ಹೇಳುತ್ತಾರೆ. ಆದರೆ ಆಗ ಇನ್ನೂ ಸುಧಾರಣೆ ಗಳಾಗಿರಲಿಲ್ಲ. ಕಟಕಟೆಗಳ ನಡುವೆ ಬಸವನಹುಳುವಿನಂತೆ, ಗಡಿಯಾರದಲ್ಲಿನ ಗಂಟೆಯ ಮುಳ್ಳಿನ ಹಾಗೆ ಕಂಡೂ ಕಾಣದಂತೆ ಮುಂದೆ ಸರಿಯುವ ಸಾಲು. ದರ್ಶನವಾದರೆ ನಿಜವಾಗಿ ಮೋಕ್ಷ ಸಿಕ್ಕಂತೆ. ಸಾಲಲ್ಲಿ ನಿಂತೇ ಜನ ಕಾಲಕಳೆಯಲೋ, ಸಹಜ ಪ್ರಕ್ರಿಯೆಗಳ ಕಾರಣದಿಂದಲೋ ನಾನಾ ಉಪಾಯಗಳನ್ನು ಹುಡುಕುತ್ತಿದ್ದರು. ಇದ್ದೆಡೆಯೇ ಎಲ್ಲ ನಡೆಯಬೇಕಿತ್ತು.

ಬೆಳಿಗ್ಗಿನಿಂದ ಕ್ಯೂನಲ್ಲಿ ತೆವಳುತ್ತ ನಾಲ್ಕೈದು ಗಂಟೆಗಳು ಕಳೆದದ್ದಾಯಿತು. ನಮ್ಮ ತಂದೆಯವರ ಪಾಡು ಹೇಳತೀರದು (ಮುಂದೆ ಅವರಿಗೆ ಅನ್ನನಾಳದ ಕ್ಯಾನ್ಸರ್ ಇದೆ ಎಂಬುದು ತಿಳಿಯಿತು; ಚಿಕಿತ್ಸೆ ಮಾಡಿಸಿದರೂ ಹೆಚ್ಚುಕಾಲ ಉಳಿಯಲಿಲ್ಲ). ನಿಲ್ಲಲಾರರು, ಕುಳಿತಿರಲಾರರು, ತಮಗೇನು ಕಷ್ಟವೋ ಹೇಳಿಕೊಳ್ಳಲಾರರು. ಕಾದೂ

ಕಾದೂ ಮಧ್ಯಾಹ್ನ ಸುಮಾರು ಹನ್ನೆರಡೂವರೆಯೋ ಒಂದು ಗಂಟೆಯೋ ಆಯಿತು. ಧ್ವನಿವರ್ಧಕದಿಂದ ಒಂದು ಪ್ರಕಟನೆ ಹೊರಬಿತ್ತು, 'ಸ್ವಾಮಿಯವರ ಆರೋಗಣೆಯ ಸಮಯ; ಇನ್ನು ಒಂದು ಗಂಟೆ ದರ್ಶನ ನಿಲ್ಲಿಸಲಾಗಿದೆ' ಅಂತ. ಅಂದರೆ, ಈಗಿನಂತೆ ಕ್ಯೂ ಮುಂದುವರಿದಿದ್ದರೆ ಎಷ್ಟು ಹೊತ್ತಿಗೆ ಗರ್ಭಗುಡಿ ಪ್ರವೇಶಿಸುತ್ತಿದ್ದೆವೋ ಅದಕ್ಕಿಂತ ಇನ್ನೂ ಒಂದು ಗಂಟೆ ಹೆಚ್ಚು. "ಇಲ್ಲಿರಲಾರೆ, ಅಲ್ಲಿಗೆ ಹೋಗಲಾರೆ" ಎಂಬ ಪಾಡು ನಿಜಕ್ಕೂ. ಅವರನ್ನು ಕರೆದುಕೊಂಡು ನಾನು ವಾಪಸು ಉಳಿದುಕೊಂಡಿರುವ ಜಾಗಕ್ಕೆ ಹೋಗುವೆನೆಂದು ಹೇಳಿದ ನೆನಪು. ಆದರೆ ತಿಮ್ಮಪ್ಪನ ದರ್ಶನಕ್ಕಾಗಿಯೇ ಈ ಭೂವೈಕುಂಠಕ್ಕೆ ಅಷ್ಟುದೂರ ಬಂದು ಹಾಗೆಯೇ ವಾಪಸು ಹೋದವರುಂಟೆ? ಕಷ್ಟಪಡುತ್ತಿದ್ದರೂ ತಂದೆಯವರಿಗೂ ಅದು ಇಷ್ಟವಿರಲಿಲ್ಲ. ನಾನೇನು ಮಾಡಲಿ?

ನನಗೊಂದು ಯೋಚನೆ ಬಂತು. ನನ್ನ ನಾದಿನಿ ಯಾರದೋ ಬಳಿ ಶೀಘ್ರದರ್ಶನದ ಪಾಸ್‌ಗಾಗಿ ಒಂದು ಪತ್ರ ತಂದಿದ್ದಳು, ಡೋನರ್ ಪಾಸ್‌ಗೆ; ಆರು ಮಂದಿಗೆ ಅವಕಾಶ. ಆದರೆ ನಾವು ಇದ್ದದ್ದು ಹದಿನೈದು ಜನರಾದ್ದರಿಂದ ಅದು ಉಪಯೋಗಕ್ಕೆ ಬರುತ್ತಿರಲಿಲ್ಲ. ಆರು ಮಂದಿ ಮಾತ್ರ ಬೇಗ ದರ್ಶನ ಮಾಡಿಕೊಂಡು, ಉಳಿದವರು ಕಾಯಬೇಕು. ಗುಂಪು ಎರಡಾಗುವ ಜೊತೆಗೆ, ಬೇಗ ದರ್ಶನ ಮುಗಿಸಿದವರು ಏನು ಮಾಡಬೇಕು ಎಂಬ ಪ್ರಶ್ನೆ. ತಂದೆಯವರ ಕಷ್ಟ ನೋಡಿ, ದೇವರ ಆರೋಗಣೆಯ ಕಾಲದಲ್ಲಿ ಒಂದು ಕುತಂತ್ರ ನನ್ನ ಮನಸ್ಸಿನಲ್ಲಿ ಹೊಳೆಯಿತು. ಬೇಕಾದರೆ ಅದನ್ನೂ ದೇವರ ಪ್ರೇರಣೆ ಅಂದುಕೊಳ್ಳಿ. ನಾದಿನಿಯ ಹತ್ತಿರವಿದ್ದ ಅ ಪಾಸನ್ನು ತೆಗೆದುಕೊಂಡೆ. ಒಂದೈದು ನಿಮಿಷ ಬರುತ್ತೇನೆ ಎಂದು ಅಲ್ಲಿಂದ ಹೊರಟೆ. ಅವರಿವರನ್ನು ವಿಚಾರಿಸಿಕೊಂಡು ಸೀದ ಪಾಸ್ ವಿತರಣೆಯ ಕೌಂಟರ್ ಕಡೆ ಧಾವಿಸಿದೆ. ಮಧ್ಯದಲ್ಲಿ ಆ ಪತ್ರ ಬಿಡಿಸಿ, ನನ್ನ ಬಳಿ ಯಾವಾಗಲೂ ಇರುವ ಪೆನ್ ತೆರೆದು ತಾಳೆ ನೋಡಿದೆ. ಪೆನ್‌ನಲ್ಲಿದ್ದುದು ಆ ಪತ್ರದ ಅಕ್ಷರಗಳಿದ್ದ ಬಣ್ಣದ್ದೇ. ಬಹಳ ನವಿರಾಗಿ ೬ ಎಂದಿದ್ದ ಸಂಖ್ಯೆಯ ಹಿಂದೆ ೧ ಎಂದು ಗೀರು ಎಳೆದೆ. ಸರಸರ ಹೋಗಿ ಪಾಸ್ ನೀಡುವವನ ಮುಂದೆ ಪತ್ರ ಒಡ್ಡಿದೆ. ಅವನು ಓದಿಕೊಂಡು 'ಹದಿನಾರು ಜನಕ್ಕೆ ಪಾಸಾ?' ಎಂದು ಹುಬ್ಬೇರಿಸಿದ, 'ಇಷ್ಟು ಜನಕ್ಕೆ ಒಂದೇ ಪಾಸ್ ಸಾಧ್ಯವಿಲ್ಲ' ಎಂದ. 'ಸರಿ, ಕೊಡಿ ನಾನು ಹೋಗಿ ಡೋನರ್ ಬಳಿ ದೂರು ಕೊಡುತ್ತೇನೆ' ಎಂದು ರೇಗಿದೆ. ಮೆತ್ತಗಾದ ಅವನು ಗೊಣಗಿಕೊಳ್ಳುತ್ತ ಹದಿನಾರು ಮಂದಿಗೆ ಪಾಸ್ ಬರೆದುಕೊಟ್ಟ. ಗೆಲವಿನಿಂದ ಬೀಗುತ್ತ ನಮ್ಮವರು ಕ್ಯೂನಲ್ಲಿ ಇರುವತ್ತ ಬಂದು ಎಲ್ಲರನ್ನೂ ಎಬ್ಬಿಸಿಕೊಂಡು ಹೋದೆ. ಇದು ಸರಿಯಲ್ಲವೆಂದು ಯಾರೂ ದೂರಲಿಲ್ಲ. ಅಷ್ಟು ಹೊತ್ತಿಗೆ ಸ್ವಾಮಿಯವರ ಆರೋಗಣೆ ಮುಗಿದಿತ್ತು. ಮುಂದೆ ಅರ್ಧ ಗಂಟೆಯಲ್ಲೇ ದರ್ಶನ ಆಯಿತು. ನಾನು ಸುಳ್ಳು ಹೇಳಿ ಒಂದು ಪುಣ್ಯಕಾರ್ಯ ಮಾಡಿದ್ದೆ!

☆ - ☆ - ☆

# ‘ಕೋಪವೆಂಬುದನರ್ಥಸಾಧನ’ ಹೌದೇ?

ನಮ್ಮ ಹಿರಿಯ ಶತಾಯುಷಿ ಪ್ರೊ. ಎ. ಎನ್. ಮೂರ್ತಿರಾಯರು, ಒಮ್ಮೆ ತಮ್ಮ ದೀರ್ಘಾಯುಷ್ಯದ ಬಗ್ಗೆ ಮಾತನಾಡುತ್ತ, ತಾವು ಕಳೆದ ಐವತ್ತು ವರ್ಷಗಳಿಂದ ಕೋಪವನ್ನೇ ಮಾಡಿಕೊಂಡಿಲ್ಲ ಎಂಬ ಅಂಶವನ್ನೂ ಹೇಳಿದ ನೆನಪು. ಅವರ ನಿಡುಬಾಳಿಗೆ ಅದೂ ಒಂದು ಕಾರಣ ಎಂದು ಎಲ್ಲರಿಗೂ ಅನ್ನಿಸಿರಲು ಸಾಕು. ಪ್ರಾಯಶಃ ಅದನ್ನು ಕೇಳಿದ ಕೆಲವರಾದರೂ ಮುಂದೆ, ಕೋಪದ ತಮ್ಮ ಬಗ್ಗೆ ಹತೋಟಿ ಹೊಂದಲು ನಿರ್ಧರಿಸಿರಬಹುದು.

ಕೋಪಗೊಂಡಾಗ ಮನಸ್ಸು ತೀರ ಉದ್ವೇಗಕ್ಕೊಳಗಾಗುತ್ತದೆ, ನರಗಳು ಬಿಗಿಗೊಳ್ಳುತ್ತವೆ, ಮಾನಸಿಕ ಸಂದಿಗ್ಧ ಉಂಟಾಗುತ್ತದೆ, ಹಾಗಾಗಿ ಮನಸ್ಸಿನ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ ಎಂದು ಮನೋವಿಜ್ಞಾನಿಗಳೂ ಹೇಳುತ್ತಾರೆ. ಹಾಗಾಗಿ ಕೋಪ ಕೆಟ್ಟುದು ಎಂಬುದು ತೀರ್ಮಾನ. ಅದರ ಬಗ್ಗೆ ಕುಮಾರವ್ಯಾಸ ಕವಿಯ ಒಂದು ಪ್ರಸಿದ್ಧವಾದ ಪದ್ಯವಿದೆ; ವಿದುರ ಧೃತರಾಷ್ಟ್ರನಿಗೆ ಬೋಧಿಸುವ ‘ವಿದುರನೀತಿ’ ಎಂಬ ಭಾಗದಲ್ಲಿ ಇದು ಬರುತ್ತದೆ:

**ಕೋಪವೆಂಬುದನರ್ಥಸಾಧನ**
**ಕೋಪವೇ ಸಂಸಾರಬಂಧನ**
**ಕೋಪದಿಂದಿಹಪರದ ಸುಕೃತವು ಲಯವನೈದುವುದು**
**ಕೋಪವನು ವರ್ಜಿಸಲುಬೇಹುದು**
**ಕೋಪವುಳ್ಳವನಾವನಾಗಲಿ**
**ಕಾಪುರುಷನಿಹಪರಕೆ ಚಿತ್ತೈಸೆಂದನಾ ವಿದುರ**

ಈ ಪದ್ಯ ಕೋಪವುಂಟುಮಾಡುವ ಪರಿಣಾಮಗಳನ್ನು ಹೇಳುತ್ತದೆ.

ಪ್ರೊ. ಮೂರ್ತಿರಾಯರ ಮಾತನ್ನು ಹೇಳಿದೆನಲ್ಲ; ಆದರೆ ನನಗಂತೂ ಕೋಪ ನಿಯಂತ್ರಣ ಸಾಧ್ಯವಾಗಿಲ್ಲ. ನನಗೆ ಹೆಚ್ಚು ಕಾಲ ಬಾಳುವ ಆಸೆ ಇಲ್ಲವೆಂದಲ್ಲ. ಆದರೆ ಕೋಪ ಬೇಡ ಎಂಬುದು ಸರಿಯೇ ಎಂಬ ಪ್ರಶ್ನೆ ನನ್ನನ್ನು ಕಾಡುವುದರಿಂದಾಗಿ ಅದಕ್ಕೆ ಪ್ರಯತ್ನಿಸಿಲ್ಲ. ಐವತ್ತು ವರ್ಷಗಳ ಕಾಲ ಅವರು ಕೋಪವನ್ನೇ ಮಾಡಿಕೊಂಡಿಲ್ಲ ಎಂದರೆ ಕೋಪಗೊಳ್ಳುವ ಸಂದರ್ಭವೇ ಬಂದಿಲ್ಲ ಎಂದು

ಅರ್ಥವೇ; ಅಥವಾ ಯಾವ ಸಂದರ್ಭ ಬಂದರೂ ಕೋಪಗೊಂಡಿಲ್ಲ ಎಂಬುದು ವಿದಿತವೇ? ಅಂದರೆ ಅದು ಸಹಜವಾದ ಪ್ರತಿಕ್ರಿಯೆಯಾಗುವ ಸಂದರ್ಭದಲ್ಲಿಯೂ ಕೋಪಗೊಳ್ಳದಂತೆ ತಮ್ಮ ಮನಸ್ಸನ್ನು ಅವರು ಟ್ಯೂನ್ ಮಾಡಿಕೊಂಡಿದ್ದರು ಎಂದೇ ಅದರರ್ಥ? ಆ ಮಾತಿನ ನಿಜವಾದ ಇಂಗಿತ ಎನಿತ್ತೋ ತಿಳಿಯದು.

ನನ್ನಲ್ಲಿ ಇದರಿಂದ ಕೆಲವು ಪ್ರಶ್ನೆಗಳು ಉಂಟಾದವು; ಎಂತಹ ಸಂದರ್ಭದಲ್ಲೂ ಕೋಪಗೊಳ್ಳದೆ ಇರುವುದು ಸರಿಯೇ? ಕೋಪ ಒಂದು ಪ್ರಕೃತಿಸಹಜವಾದ ಮನೋವ್ಯಾಪಾರ. ಅದನ್ನು ತೊಡೆದುಹಾಕುವುದು ಸಮಂಜಸವೇ? ಹೀಗೆ. ಅನ್ಯಾಯ ಕಂಡರೆ ಸುಮ್ಮನಿರಬೇಕೇ? ತಪ್ಪು ಎನ್ನಿಸುವ ಸನ್ನಿವೇಶಗಳನ್ನು ಕಂಡೂ ಕೋಪಗೊಳ್ಳದಿರುವುದು ಸರಿಯೇ? "ಅನ್ಯಾಯ" "ತಪ್ಪು" ಇತ್ಯಾದಿಗಳ ಬಗ್ಗೆ ಸರ್ವಸಮ್ಮತ ವ್ಯಾಖ್ಯೆ ಸಾಧ್ಯವಿಲ್ಲವಾದರೂ, ಮಾನವೀಯತೆಯ ದೃಷ್ಟಿಯಿಂದ, ಒಪ್ಪಿತವಾಗಿರುವ ಸಾರ್ವಕಾಲಿಕ ಮೌಲ್ಯವಿವೇಚನೆಯ ಹಿನ್ನೆಲೆಯಲ್ಲಿ ಅವುಗಳ ವಿರುದ್ಧದ ಮನೋಭಾವ ತಾಳುವುದು ಅಪೇಕ್ಷಣೀಯವಲ್ಲವೇ? ಎಲ್ಲವನ್ನೂ ನೋಡಿ ಸುಮ್ಮನಿದ್ದುಬಿಡುವುದು ಪ್ರಜ್ಞಾವಂತನಿಗೆ ಸರಿಯಾದ ವರ್ತನೆಯೇ?

ಅತಿ ಕೋಪ, ಮುಂಗೋಪ, ಅಸಾಧ್ಯ ಕೋಪ – ಇಂತಹವು ಸರಿಯಲ್ಲ ನಿಜ. ಸ್ವಾರ್ಥದ ಕಾರಣದಿಂದ ಕೋಪಗೊಳ್ಳುವುದು, ಪ್ರತಿಭಟಿಸುವುದು ಸರಿಯಲ್ಲ ಎಂಬುದು ಸರಿಯೇ; ಆದರೆ ಬಹುಜನಹಿತಕ್ಕೆ ಧಕ್ಕೆ ಬಂದಾಗ, ಒಪ್ಪಿತ ಮೌಲ್ಯದ ಹಿನ್ನೆಲೆಯಲ್ಲಿ ಅನ್ಯಾಯ ನಡೆದಾಗ ಅದನ್ನು ಪ್ರತಿಭಟಿಸುವುದು ಸರಿ ಎಂದೇ ಸಾತ್ವಿಕರೂ ಪ್ರತಿಪಾದಿಸುವುದು. 'ಅದನ್ನೇ ಸಾತ್ವಿಕ ಕೋಪ' ಎನ್ನುವುದು. ನಮ್ಮ ಮುಖ್ಯ ಕಾವ್ಯಗಳೆಲ್ಲ ಅನ್ಯಾಯದ ವಿರುದ್ಧ ಪ್ರತಿಭಟಿಸುವ ಮೌಲ್ಯವನ್ನೇ ಎತ್ತಿಹಿಡಿಯುವಂತಹವು. ನಿದರ್ಶನಕ್ಕೆ 'ಪಂಪಭಾರತ'ದಲ್ಲಿನ ಒಂದು ಪ್ರಸಂಗ. ಕರ್ಣನನ್ನು ಅವನ ಜಾತಿಯ ಹೆಸರಿನಿಂದ ಮೂದಲಿಸಿದಾಗ ಅವನು ಕೆರಳುತ್ತಾನೆ. ಈ ಪ್ರಸಂಗಚಿತ್ರಣದ ಮೂಲಕ ಕವಿಪ್ರತಿಭೆಯು ಜಾತಿ ಎಂಬ ಸಾಮಾಜಿಕ ಅನ್ಯಾಯದ ವಿರುದ್ಧ ಧ್ವನಿ ಎತ್ತಿದೆ ಎಂದೇ ಸಾಹಿತ್ಯದ ವಿದ್ಯಾರ್ಥಿಗಳು ವ್ಯಾಖ್ಯಾನಿಸುವುದು. ಅಂದರೆ ಪ್ರತಿಭಾ ದೃಷ್ಟಿಯಿಂದಲೂ ಕೋಪ, ಪ್ರತಿಭಟನೆ ಸರಿ. ನಿಜ, ಯಾವ ಸನ್ನಿವೇಶದಲ್ಲಿ, ಯಾವುದರ ವಿರುದ್ಧ ಕೋಪಿಸಿಕೊಳ್ಳಬೇಕು ಎಂಬುದು ವಿವೇಚನೆಯ ವಿಚಾರ. ಅಂದರೆ ಕೋಪವೇ ತಪ್ಪು ಎಂದಾಗುವುದಿಲ್ಲ; ಅದರ ಬಳಕೆ ಸರಿಯಾಗಿರಬೇಕು ಎಂದಷ್ಟೇ ಅರ್ಥ. ಹಾಗಾಗಿ ಕೋಪವನ್ನೇ ನಮ್ಮ ವ್ಯಕ್ತಿತ್ವದಿಂದ ತೊಡೆದು ಹಾಕಬೇಕು ಎನ್ನುವುದು ಸಮಂಜಸ ನಿಲವಲ್ಲ. ಅದೊಂದು ಅಸ್ತ್ರ; ಅದರ ಬಳಕೆಯಲ್ಲಿ ವಿವೇಚನೆ ಮುಖ್ಯ. ತನ್ನ ಮೂಗಿನ ನೇರದ ವಿಷಯಗಳಲ್ಲದೆ, ಸಾರ್ವತ್ರಿಕ ಹಿತದ ಮನೋಭಾವ ಹಿನ್ನೆಲೆಗಿದ್ದಾಗ, ಅದರ ಪ್ರತಿಪಾದನೆಗಾಗಿ ಮಾಡಿಕೊಳ್ಳುವ ಕೋಪ ಸಮರ್ಥನೀಯ.

ಕೆಲವು ವೇಳೆ, ಸ್ವಯಂರಕ್ಷಣೆಗೂ ಕೋಪ ಬೇಕಾಗಬಹುದು. 'ಮೆತ್ತಗಿದ್ದವನಿಗೆ

ಮತ್ತೆರಡು ಗುದ್ದು' ಎಂಬ ಗಾದೆಯೇ ಇದೆಯಲ್ಲ? ನಮ್ಮ ತಾತ ಒಂದು ಕತೆ ಹೇಳು ತ್ತಿದ್ದರು: ಒಂದು ಹಾವು ಕಾಡಿನಲ್ಲಿನ ತನ್ನ ಹುತ್ತದಲ್ಲಿ ವಾಸಮಾಡುತ್ತಿತ್ತು. ಅದರ ಸನಿಹ ಸುಳಿದವರನ್ನೆಲ್ಲ ಕಚ್ಚಿಬಿಡುತ್ತಿತ್ತು; ಇದರಿಂದ ಅಪಾರ ಜೀವಹಾನಿಯಾಗುತ್ತಿತ್ತು. ಈ ವಿಷಯ ನಾರದನಿಗೆ ತಿಳಿದು, ಅವನು ಬಂದು ಆ ಹಾವಿಗೆ ತಿಳಿವಳಿಕೆ ಹೇಳಿದ, 'ಅಹಿಂಸೆ'ಯ ಬಗ್ಗೆ ಬೋಧಿಸಿದ. ಅಂಥ ಮಹಾಜ್ಞಾನಿ ಹೇಳಿದ ಮೇಲೆ ಪರಿಣಾಮ ಆಗದಿರುತ್ತದೆಯೇ? ಹಾವಿನ ಮನಸ್ಸೂ ಪರಿವರ್ತನೆಗೊಂಡಿತು; ಇನ್ನು ಮೇಲೆ ತಾನು ಶಾಂತಿಯನ್ನು ಅನುಸರಿಸುವುದಾಗಿ ನಿರ್ಧರಿಸಿತು. ಅದರ ಸ್ವಭಾವ ಪರಿಚಯ ಹಾದಿಹೋಕರಿಗೆ ಆದಂತೆಲ್ಲ, ಜನ ನಿರಾಳವಾಗಿ ಓಡಾಡತೊಡಗಿದರು. ಮಾತ್ರವಲ್ಲ, ಕೆಲವರು ಕಿಡಿಗೇಡಿಗಳು ಚೇಷ್ಟೆಗಾಗಿ ಅದನ್ನು ಕೋಲಿನಿಂದ ತಿವಿಯುವುದು, ಅದರ ಮೇಲೆ ಕಲ್ಲಿನ್ನೆಸೆಯುವುದು ಹೀಗೆ ಅನೇಕ ರೀತಿಯಲ್ಲಿ ಕೀಟಲೆ ಮಾಡತೊಡಗಿದರು. ಕೆಲದಿನಗಳಾದ ಮೇಲೆ ನಾರದ ಮತ್ತೆ ಅದರ ಬಳಿ ಬಂದು "ಹೇಗಿದ್ದೀ?" ಎಂದು ವಿಚಾರಿಸಿದ. ಅಷ್ಟು ಹೊತ್ತಿಗೆ ಹಾವು ಹಣ್ಣಗಾಯಿ ನೀರುಗಾಯಿಯಾಗಿತ್ತು. ತನ್ನ ಬವಣೆಯನ್ನು ಕಣ್ಣೀರಿಟ್ಟು ಹೇಳಿಕೊಂಡಿತು; ಕೆಲವರು ತನ್ನ ಮೇಲೆ ಮಾಡುತ್ತಿದ್ದ ದೌರ್ಜನ್ಯವನ್ನು ವಿವರಿಸಿ ತನ್ನಳಲನ್ನು ತೋಡಿಕೊಂಡಿತು. ಆಗ ನಾರದ ಹೇಳಿದನಂತೆ: "ಬೇರೆಯವರಿಗೆ ತೊಂದರೆ ಕೊಡಬೇಡ ಎಂದರೆ ಬೇರೆಯವರು ನಿನಗೆ ಕೊಡುವ ತೊಂದರೆಯನ್ನು ಸಹಿಸಿಕೊ ಎಂದರ್ಥವಲ್ಲ. ಸ್ವರಕ್ಷಣೆ ಪ್ರತಿ ಜೀವಿಯ ಹಕ್ಕು. ಅದಕ್ಕೆ ಧಕ್ಕೆ ಬಂದಾಗ ಪ್ರತಿಭಟಿಸಬೇಕು. ಜನರು ಕೀಟಲೆ ಮಾಡಿದರೆ ನೀನು 'ಭುಸ್' ಎಂದು ಹೆಡೆ ಬಿಚ್ಚಿ ಅಡಿಸಿದ್ದರೆ ಜನ ಹೆದರಿ ಓಡಿ ಹೋಗುತ್ತಿದ್ದರು, ನಿನ್ನ ಮೇಲೆ ದಾಳಿ ಮಾಡುತ್ತಿರಲಿಲ್ಲ. ಅವರನ್ನು ಕಚ್ಚಿ ಹಿಂಸಿಸ ಬೇಡ; ಆದರೆ ಹೆಡೆಯಾಡಿಸುವುದರಿಂದ ನಿನ್ನ ರಕ್ಷಣೆಯೂ ಆಗುತ್ತದೆ, ಹಿಂಸೆ ಮಾಡಿದಂತೆಯೂ ಆಗುವುದಿಲ್ಲ" ಎಂದು ವಿವರಿಸಿದನಂತೆ. ಅಂದಿನಿಂದ ಆ ಹಾವು ಹಾಗೆಯೇ ಮಾಡುತ್ತ ದೀರ್ಘಕಾಲ ಬದುಕಿತಂತೆ.

ಹಾಗಾಗಿ, ಕೋಪವನ್ನು ಪೂರ್ತಿ ವರ್ಜಿಸುವುದು ಹಿತಕರವಲ್ಲ. ವಿವೇಚನೆ ಯಿಂದ ಬಳಸಿಕೊಳ್ಳುವ ಕೋಪದ ಪರಿಣಾಮವೂ ಒಳ್ಳೆಯದೇ ಆಗುತ್ತದೆ. ಸರ್ವಹಿತ ಮನೋಭಾವ ಹಿನ್ನೆಲೆಗಿದ್ದು, ಸ್ವಾರ್ಥರಹಿತವಾಗಿ ಮಾಡಿಕೊಳ್ಳುವ ಕೋಪ ಒಂದು ಮೌಲ್ಯವೇ ತಾನೇ? "ಅತಿಸರ್ವತ್ರ ವರ್ಜಯೇತ್" ಎಂಬಂತೆ ಅತಿಯಾದ ಎಲ್ಲವೂ ತಪ್ಪು. ಆದರೆ ಸದ್ಬಳಕೆಯ ಎಲ್ಲವೂ ಸರಿಯೇ. ಕುಮಾರವ್ಯಾಸನ ಅಭಿಪ್ರಾಯವೂ ಇದೇ ಎಂದು ತಿಳಿಯಬೇಕು. ಬರಿ ಕೋಪವಲ್ಲ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ, 'ಅರಿಷಡ್ವರ್ಗ' ಎನ್ನುತ್ತಾರಲ್ಲ, ಅದರಲ್ಲಿ ಪ್ರತಿ ಯೊಂದೂ ವಿವೇಚನೆಯಿಂದ ಬಳಸಿಕೊಂಡಾಗ ಮೌಲ್ಯವಾಗುತ್ತದೆ. ಅವುಗಳನ್ನೆಲ್ಲ ಪೂರ್ತಿ ಬಿಟ್ಟೇ ಬಿಟ್ಟರೆ ಮನುಷ್ಯನಿಗೂ ಒಣಕೊರಡಿಗೂ ವ್ಯತ್ಯಾಸವೇನು?

☆ – ☆ – ☆

# ಆಧ್ಯಾತ್ಮಿಕತೆ

ಮನುಷ್ಯನ ವ್ಯಕ್ತಿತ್ವದಲ್ಲಿ ಎರಡು ಮುಖ್ಯ ವಲಯಗಳಿವೆ: ಪಂಚೇಂದ್ರಿಯಗಳ ಮೂಲಕ ಗಮ್ಯವಾಗುವ, ಮತ್ತು ಆ ಮೂಲಕ ಮನಸ್ಸಿನಲ್ಲಿ ಒಂದು ನಿಲವನ್ನು ತಳೆಯುವುದು ಮೊದಲನೆಯದಾದರೆ; ಎರಡನೆಯದು, ತರ್ಕಕ್ಕೆ ಸಿಕ್ಕದ, ಕೇವಲ ಅನುಭವಗಮ್ಯವಾದ ವಲಯ. ಒಂದನ್ನು ಆಧಿಭೌತಿಕ ಮತ್ತೊಂದನ್ನು ಆಧ್ಯಾತ್ಮಿಕ ಎಂದು ಬೇಕಾದರೆ ಕರೆಯಬಹುದು. ಇಂದ್ರಯಾನುಭವಗಳನ್ನೂ ಮನುಷ್ಯ ಬುದ್ಧಿಯ ನೆರವಿನಿಂದ ನಿಶ್ಚಿತಜ್ಞಾನವನ್ನಾಗಿ ಮಾಡಿಕೊಂಡು ತನ್ನ ಅರಿವನ್ನು ಹೆಚ್ಚಿಸಿಕೊಳ್ಳುತ್ತಿರುವುದರಿಂದಲೇ ವಿಜ್ಞಾನ–ತಂತ್ರಜ್ಞಾನಗಳು ತಮ್ಮ ಪರಿಧಿಯನ್ನು ನಿರಂತರವಾಗಿ ವಿಸ್ತರಿಸಿಕೊಳ್ಳುತ್ತಿವೆ. ಆದರೆ ಆಧ್ಯಾತ್ಮಿಕತೆ ಎಂಬುದರ ಸ್ವರೂಪವೇನು ಎಂಬುದನ್ನು ಖಚಿತವಾಗಿ ನಿರ್ವಚಿಸಲು ಸಾಧ್ಯವಿಲ್ಲ.

ವಿಜ್ಞಾನಗಳು ತಾರ್ಕಿಕತೆಯನ್ನು ಅವಲಂಬಿಸಿ ಪ್ರತಿಪಾದಿಸುವ ದಾರಿಯನ್ನು ಅನುಸರಿಸುವ ಕಾರಣದಿಂದ ಅಂತಿಮವಾಗಿ ತಲುಪುವ ನಿಲವು ಆ ದಾರಿಯನ್ನು ಹಿಡಿಯುವ ಯಾರಿಗಾದರೂ ಸಾಧ್ಯ. ಹೀಗಾಗಿಯೇ ಅದು ಸಾರ್ವತ್ರಿಕವಾಗುವುದು. ಹೊರಡುವ ಬಿಂದುವಿನ ಕಾರಣದಿಂದಲೋ, ಅನುಸರಿಸುವ ಮಾರ್ಗದ ಅಲ್ಪಭಿನ್ನತೆಯಿಂದಲೋ ಅದರ ನಿಲವುಗಳು ಬದಲಾವಣೆಗೊಳ್ಳುವುದು ಸಹಜ; ಆದರೆ ಸಮರ್ಪಕ ಪ್ರತಿಪಾದನೆಯಿಂದ ಅದು ಒಪ್ಪಿತಗೊಳ್ಳುತ್ತದೆ, ಆದ್ದರಿಂದಲೇ ವಿಜ್ಞಾನದ ಸಿದ್ಧಾಂತಗಳು ಬದಲಾವಣೆಗೊಳ್ಳುತ್ತವೆ. ಈ ಮುಕ್ತತೆ, ಅಂದರೆ ಒಂದು ನಿಲವು ಅದಕ್ಕಿಂತ ಮತ್ತಷ್ಟು ಸಪರ್ಮಕವಾದ ಇನ್ನೊಂದು ನಿಲವು ಪ್ರತಿಪಾದಿತವಾಗುವವರೆಗೆ ಮಾತ್ರ ಸತ್ಯ ಎಂದು ಒಪ್ಪಿಕೊಳ್ಳುವ ಮುಕ್ತತೆ ವಿಜ್ಞಾನದ ಅತ್ಯಂತ ಮುಖ್ಯವಾದ ಗುಣ. ಇದರಿಂದಾಗಿ ಅಲ್ಲಿ ಒಪ್ಪುವ ಮತ್ತು ಒಪ್ಪಿಸುವ ಸಾಧ್ಯತೆ ಇದೆ.

ಆದರೆ ಆಧ್ಯಾತ್ಮಿಕತೆಯ ಪರಿ ಬೇರೆ. ಅದು ಕೇವಲ ಅನುಭವಜನ್ಯ ಸಂಗತಿಗಳನ್ನು ಕುರಿತು ಮಾತ್ರ ತನ್ನ ವಲಯದಲ್ಲಿ ಹೊಂದಿರುವಂಥದು. ಅಲ್ಲಿಯೂ ತರ್ಕ ಇದೆಯೆಂಬ ಭ್ರಮೆ ಕೆಲವು ವೇಳೆ ಉಂಟಾಗಬಹುದಾದರೂ, ಅದು ಹೊರಡುವುದು ನಂಬಿಕೆಯನ್ನೇ ಆಧರಿಸಿದ ಒಂದು ಬಿಂದುವಿನಿಂದ. ಹೀಗಾಗಿ ಅಲ್ಲಿ ನಂಬುವುದೇ ಮುಖ್ಯ. ಆ ನಂಬಿಕೆ ಜರುಗಿದರೆ ಇಡೀ ಸೌಧ ಕುಸಿಯುತ್ತದೆ.

ವಿಜ್ಞಾನಕ್ಕೂ ನಿಲುಕದ ಅನೇಕ ಅನುಭವಗಳು ಇರುವುದರಿಂದ ಆಧ್ಯಾತ್ಮಿಕತೆ ಎಂಬುದು ಗುಮ್ಮವನ್ನು ಸೃಷ್ಟಿಸುತ್ತದೆ. ತಾವೇ ಒಂದು ನಿಲವಿಗೆ ಬರಲಾರದ ಜನರು ಬೇರಾವನೋ ಗೌರವಾರ್ಹನೆಂದು ಭಾವಿಸಲಾದವನನ್ನು ಅನುಸರಿಸುತ್ತಾರೆ. ಬದುಕಿನ ನಿಗೂಢಗಳು ಉಂಟುಮಾಡುವ ಭಯದ ಕಾರಣದಿಂದ ನಂಬಿಕೆ ಬಲವಾಗುತ್ತದೆ. ನಂಬಿಕೆಯ ಹುಲ್ಲುಕಡ್ಡಿಯನ್ನಾಧರಿಸಿ ಭಯವನ್ನು ಸಾಂತ್ವನಗೊಳಿಸಿಕೊಳ್ಳುವ ಪರಿಪಾಟ ಬೆಳೆಯುತ್ತದೆ. ಇದರಿಂದಾಗಿ ಸಾಮಾನ್ಯರಲ್ಲಿ ಬದುಕಿನ ನಿಗೂಢಗಳ ಬಗ್ಗೆ ಆಸಕ್ತಿ ತಾಳುವಂತೆ ಮಾಡಿ ಚಿಂತಿಸುವಂತೆ ಮಾಡುವ ಬದಲು ಭಯ ಸೃಷ್ಟಿಸಿ ಅಥವಾ ಭಯದ ವಾತಾವರಣವನ್ನುಂಟುಮಾಡಿ, ಅದರ ನಿವಾರಣೆಗೆ ತಾವು ಹೇಳುವ ಮಾರ್ಗಗಳ ಬಗ್ಗೆ ನಂಬಿಕೆಯುಂಟುಮಾಡುವ ದಂಧೆ ನಿರಂತರವಾಗಿ ನಡೆಯುತ್ತಲೇ ಬಂದಿದೆ.

ವಿಜ್ಞಾನದಿಂದ ಸಕಲವನ್ನೂ ವಿವರಿಸಲು ಸಾಧ್ಯವಿಲ್ಲ ಎಂಬ ಕಾರಣಕ್ಕಾಗಿಯೇ ವೈಜ್ಞಾನಿಕತೆಯನ್ನು ನಿರಾಕರಿಸುವಂತೆ ಮಾಡಿ, ಜನ ಮೌಢ್ಯಮೂಲವಾದ ನಂಬಿಕೆಯನ್ನಾಧರಿಸುವಂತೆ ಮಾಡುವ ಕಾರ್ಯ ಕ್ರೂರವಾದದ್ದು. ತರ್ಕಾತೀತವಾದುದರ ಬಗ್ಗೆ ಚಿಂತಿಸಿ, ಆ ಹಿನ್ನೆಲೆಯಲ್ಲಿ ಅವುಗಳ ಬಗ್ಗೆ ಒಂದು ವೈಯಕ್ತಿಕ ನಿಲವನ್ನು ತಲುಪುವುದು ಸಮಂಜಸವಾದ ಆಧ್ಯಾತ್ಮಿಕ ಮಾರ್ಗ ಎಂಬುದು ನನ್ನ ಅನಿಸಿಕೆ. ಅದು ಇನ್ನೊಬ್ಬರ ಅನುಕರಣೆಯಿಂದಲೋ ಅನುಸರಣೆಯಿಂದಲೋ ಅಸಾಧ್ಯ. ಆದರೆ ವಾಸ್ತವತೆ ಅದಕ್ಕೆ ತದ್ವಿರುದ್ಧವಾಗಿದೆ. ಅಧ್ಯಾತ್ಮಿಕತೆಯ ಹೆಸರಿನಲ್ಲಿ ಚಿಂತನೆಯ ಪ್ರವೃತ್ತಿಯನ್ನು ಹಾಳುಮಾಡಿ ಜನ ತಮ್ಮನ್ನು ಹಿಂಬಾಲಿಸುವಂತೆ ಮಾಡುವ ಮೋಸಗಾರಿಕೆಯೇ 'ಆಧ್ಯಾತ್ಮಿಕ ಗುರು'ಗಳೆನ್ನಿಸಿಕೊಂಡ ಹಲವರು ಮಾಡಿಕೊಂಡು ಬಂದಿರುವ ಕಾರ್ಯ. ಹೀಗಾಗಿಯೇ ಈ ಕ್ಷೇತ್ರದಲ್ಲಿ ನಡೆಯುವಷ್ಟು ಮೊಸಕಾರ್ಯಗಳು ವ್ಯಾಪಾರದ ಕ್ಷೇತ್ರದಲ್ಲಿಯೂ ನಡೆಯಲಾರವು. ಆಧ್ಯಾತ್ಮಿಕತೆಯನ್ನು ಪುಣ್ಯಪಾಪಗಳ ಜಿಜ್ಞಾಸೆಯನ್ನಾಗಿ ಮಾಡಿ, ಹೀಗೆ ಮಾಡುವುದು ಪುಣ್ಯ, ಹಾಗೆ ಮಾಡುವುದು ಪಾಪ ಎಂದು ಬೋಧನೆ ಮಾಡುತ್ತ, ಈ ಗುರುಗಳು ಜನರಲ್ಲಿ ಬದುಕಿನಿಂದ ವಿಮುಖಗೊಳ್ಳುವ ಪ್ರವೃತ್ತಿಯನ್ನು ಹೆಚ್ಚಿಸುತ್ತ, ಅಥವಾ ಇಲ್ಲಿನ ಬದುಕಿನ ಋಜುತ್ವಕ್ಕಿಂತ ಇನ್ನೊಂದು ಲೋಕದ ಸುಖದ ಬಗ್ಗೆ ಇಲ್ಲಸಲ್ಲದ್ದನ್ನು ಬಿತ್ತುತ್ತ, ಅದರ ಲಾಭವನ್ನು ತಾವು ಪಡೆಯುತ್ತಾರೆ. ಬರಿ ಇಷ್ಟೇ ಅದರೆ ಅದೊಂದು ಬಗೆ. ಇದರೊಡನೆ, ಪುಣ್ಯಪಾಪಗಳ ನಿರ್ವಚನದ ಹಿನ್ನೆಲೆಯಲ್ಲಿ, ಪಾಪಗಳನ್ನು ಪುಣ್ಯಗಳನ್ನಾಗಿಸಿಕೊಳ್ಳುವ ಅಪಮಾರ್ಗಗಳನ್ನು ಅನುಸರಿಸಲೂ ಬೋಧನೆ ಮಾಡುತ್ತಾರೆ. ತನ್ನ ಅಪಕಾರ್ಯದ ಫಲವನ್ನು ನಿವಾರಿಸಿಕೊಳ್ಳಲು ಪುಣ್ಯಕಾರ್ಯವೆಂಬ ಮತ್ತೊಂದು ಘೋರ ಅಪಕಾರ್ಯ ನಡೆಸಲು ಉತ್ತೇಜಿಸಿ ಈ ಪರಂಪರೆ ಮುಂದುವರೆಯಲು ಈ ಗುರುಗಳು ಕಾರಣರಾಗುತ್ತಾರೆ.

ಮನುಷ್ಯನ ಎಲ್ಲ ಅನುಭವಿಕ ಆವಶ್ಯಕತೆಗಳಿಗೂ ವಿಜ್ಞಾನದಲ್ಲಿ ಉತ್ತರವಿಲ್ಲ

ಎಂಬುದು ನಿಜ. ಆದರೆ ಅದಕ್ಕೆ ಉತ್ತರ ವೈಯಕ್ತಿಕತೆಯಲ್ಲಿದೆಯೇ ವಿನಾ ಸಾಂಘಿಕತೆಯಲ್ಲಿಲ್ಲ. ತನ್ನ ನಿಲವನ್ನು ತಾನೇ ತಲುಪಬೇಕು. ಇದಕ್ಕೆ ಚಿಂತನೆ ಮುಖ್ಯ. ಹಾಗಾಗಿ ನೇರ ಅರಿವಿಗೆ ನಿಲುಕದ ವಿಷಯಗಳ ಬಗ್ಗೆ ಹೆಚ್ಚು ಹೆಚ್ಚು ಗಾಢವಾಗಿ ಚಿಂತಿಸುವುದೇ ನಿಜವಾದ ಆಧ್ಯಾತ್ಮಿಕತೆ. ಅದು ಸಂಪೂರ್ಣವಾಗಿ ಅಂತರ್ಮುಖಿಯಾದದ್ದು. ಕೆಲವು ಆಧ್ಯಾತ್ಮಿಕ ಗುರುಗಳೂ ಇದನ್ನು ಹೇಳುತ್ತಾರೆ. ಆದರೆ ವಿಚಿತ್ರವೆಂದರೆ, ಪ್ರತಿಯೊಬ್ಬನೂ ತನ್ನದೇ ದಾರಿಯನ್ನು ಕಂಡುಕೊಳ್ಳಬೇಕೇ ವಿನಾ ಇನ್ನೊಬ್ಬನನ್ನು ಅನುಸರಿಸುವುದಲ್ಲ ಎಂದು ಬೋಧಿಸುವವನಿಗೂ ಅಪಾರ ಶಿಷ್ಯಸ್ತೋಮವಿರುತ್ತದೆ! ಆ ಸ್ತೋಮ ತನ್ನ ಗುರುವಿನ ಬೋಧನೆಗಳನ್ನು ಪ್ರಚಾರ ಮಾಡುತ್ತ ತಮ್ಮ ಪಂಥಾನುಯಾಯಿಗಳನ್ನು ಹೆಚ್ಚುಮಾಡುವ ಕಾರ್ಯದಲ್ಲಿ ತೊಡಗಿರುತ್ತದೆ. ಬೇರೆಯವರು ಹೇಳುವುದನ್ನು ಕೇಳಿಯೂ, ತನ್ನದೇ ನಿಲವನ್ನು ಹೊಂದುವುದು ಗಟ್ಟಿಯಾದ ಆಧ್ಯಾತ್ಮಿಕತೆ.

ತಾರ್ಕಿಕತೆ–ಮುಕ್ತತೆಗಳ ಆಧಾರದ ಮೇಲೆ ಸಾಗುವ ವೈಜ್ಞಾನಿಕತೆ ಜನರಿಗೆ ಉಪಯುಕ್ತವಾದುದನ್ನು ನಿರಂತರವಾಗಿ ಮಾಡಿಕೊಂಡು ಬರುತ್ತಿದೆ. ಆದರೆ ಪರಹಿತವನ್ನೇ ತನ್ನ ಧ್ಯೇಯವೆಂದು ಸಾರಿಕೊಳ್ಳುವ ಆಧ್ಯಾತ್ಮಿಕತೆ, ಮತ್ತದರ ಒರಟು ಬಾಹ್ಯ ರೂಪವಾದ ಧಾರ್ಮಿಕತೆಗಳು ಜನರಲ್ಲಿ ಮೌಢ್ಯವನ್ನು, ಅನುಕರಣಶೀಲತೆಯನ್ನು, ಜೀವಪರಾಙ್ಮುಖತೆಯನ್ನು, ಭಯವನ್ನು ಬಿತ್ತುವುದು ವಿಪರ್ಯಾಸವೇ ಸರಿ. ವಿಜ್ಞಾನ ತನ್ನ ಪರಿಧಿಯನ್ನು ಹೆಚ್ಚು ಹೆಚ್ಚು ವಿಸ್ತರಿಸಿಕೊಳ್ಳುತ್ತ ಸಾಗಿರುವ ಇಂದಿನ ದಿನಮಾನಗಳಲ್ಲಿಯೇ ಆಧ್ಯಾತ್ಮಿಕ ಗುರುಗಳ ಸಂಖ್ಯೆಯೂ, ಅವರ ಶಿಷ್ಯಸ್ತೋಮದ ಗಾತ್ರವೂ ಹೆಚ್ಚಾಗುತ್ತಿರುವುದು ಮತ್ತಷ್ಟು ವಿಪರ್ಯಾಸಕರವಾದ ವಿಷಯ.

ಹಿಂದೆಯೇ ಹೇಳಿದಂತೆ ಮನುಷ್ಯನ ಆಧಿಭೌತಿಕ ಮತ್ತು ಆಧ್ಯಾತ್ಮಿಕ ಹಸಿವುಗಳನ್ನು, ಆವಶ್ಯಕತೆಯನ್ನು ಪೂರೈಸಿಕೊಳ್ಳಲು ನನಗೆ ಕಾಣುವ ಮಾರ್ಗಗಳು ಎರಡು; ಅವರೆಡೂ ಭಿನ್ನ. ಒಂದು ಸಾರ್ವತ್ರಿಕವಾದದ್ದು, ಮತ್ತೊಂದು ಕೇವಲ ವೈಯಕ್ತಿಕವಾದದ್ದು. ಆಧಿಭೌತಿಕ, ಅಂದರೆ ಭೌತಜಗತ್ತಿನ ಬಗೆಗಿನ ಸತ್ಯಗಳನ್ನು ಅಥವಾ ತಾರ್ಕಿಕತೆಯ ಮೂಲಕ ತಲುಪಬಹುದಾದ ನಿಲವುಗಳನ್ನು ಅರಿಯಲು ಅತ್ಯುತ್ತಮ ಮಾರ್ಗವೆಂದರೆ ವೈಜ್ಞಾನಿಕ ಮನೋಭಾವವನ್ನು ಅನುಸರಿಸುವುದು. ಅದನ್ನು ಮೀರಿದ ವಲಯದ ಬಗ್ಗೆ ಸ್ವತಂತ್ರವಾಗಿ ಚಿಂತಿಸಿ ತನ್ನದೇ ಆದ ನಿಲವನ್ನು ತಾಳುವುದು ಆಧ್ಯಾತ್ಮಿಕತೆ. ವೈಜ್ಞಾನಿಕತೆಯಲ್ಲಿ ನಿಶ್ಚಿತ ಲಕ್ಷಣಗಳಿರುವುದರಿಂದ ತಲುಪುವ ನಿಲವುಗಳಲ್ಲಿ ಸಾಮ್ಯವಿರುತ್ತದೆ. ಆದರೆ ಅನುಭವಿಕತೆಯ ಬಗ್ಗೆ ಪ್ರತಿಯೊಬ್ಬನದೂ ಒಂದು ಭಿನ್ನ ಮಾರ್ಗ. ಯಾವ ಗುರುವನ್ನೂ ಅನುಸರಿಸದೆ ತನ್ನ ಚಿಂತನೆಯನ್ನೇ ನಂಬುವುದು ನಿಜವಾದ ಆಧ್ಯಾತ್ಮಿಕತೆ. ಎರಡು ಕಡೆಯೂ ವ್ಯಕ್ತಿ ಹೆಜ್ಜೆಹೆಜ್ಜೆಗೂ ಭಯಭಕ್ತಿಗಳಿಂದ ಅನುಸರಿಸಬೇಕಾದ ಗುರುವಿನ ಆವಶ್ಯಕತೆ ನನಗೆ ಕಾಣಿಸುವುದಿಲ್ಲ.

☆ – ☆ – ☆

# ಓಡಿ ಬಂದ ಆನೆ!

೧೯೮೦ರ ಸುಮಾರು ಇರಬಹುದು, ಚುನಾವಣೆಗಳ ಸಮಯ. ಅದೂ ಲೋಕಸಭ ಚುನಾವಣೆಗಳು. ಶಿವರಾಮ ಕಾರಂತರು ಕಣಕ್ಕಿಳಿದಿದ್ದರು; ಅಥವಾ ಜನ ಅವರನ್ನು ಬಲವಂತ ಮಾಡಿ ಸ್ಪರ್ಧಿಸಲು ಒಪ್ಪಿಸಿದ್ದರು. ಕಾರಂತರಿಗೆ ಚುನಾವಣೆ ಏನೂ ಹೊಸದಲ್ಲ, ಸೋಲೂ ಹೊಸದಲ್ಲ. ಹಿಂದೆಯೂ ಒಮ್ಮೆ ಲೋಕಸಭೆಗೆ ತಾವೇ ಸ್ಪರ್ಧಿಸಿ ಸೋತಿದ್ದರು. ಅವರಿಗೂ ಗೆಲ್ಲುವ ಭರವಸೆ ಇರಲಿಲ್ಲ. ತಾನು ಜಯಶಾಲಿ ಯಾಗುವೆನೆಂಬ ಭ್ರಮೆಗೆ ಒಳಗಾಗುವಷ್ಟು ಮುಗ್ಧರಾಗಿರಲಿಲ್ಲ ಅವರು.

ಕಾರಂತರು ತಮ್ಮ ನಿಡು ಬಾಳಿನ ಉದ್ದಕ್ಕೂ ತಾತ್ವಿಕ ನಿಲವುಗಳಿಗೆ ಬದ್ಧವಾಗಿ ದ್ದವರು. ತಾವು ನಂಬಿಕೊಂಡು ಬಂದ ಸಿದ್ಧಾಂತಗಳ ಬಗ್ಗೆ ಅವರೆಂದೂ ರಾಜಿ ಮಾಡಿಕೊಂಡವರಲ್ಲ. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಪ್ರಯತ್ನವಾಗಿದ್ದ ಶ್ರೀಮತಿ ಇಂದಿರಾ ಗಾಂಧಿಯವರು ದೇಶದ ಮೇಲೆ ಹೇರಿದ್ದ ತುರ್ತುಪರಿಸ್ಥಿತಿಯ ಕಾಲದಲ್ಲಿ ಕೇಂದ್ರ ಸರ್ಕಾರ ತಮಗೆ ನೀಡಿದ್ದ ಪದ್ಮಭೂಷಣ ಪ್ರಶಸ್ತಿಯನ್ನವರು ವಾಪಸು ಮಾಡಿದ್ದರು, ಸರ್ಕಾರದ ಕ್ರಮಕ್ಕೆ ಪ್ರತಿಭಟನೆಯಾಗಿ. ತಾವು ಸರಿ ಎಂದು ನಂಬಿದ್ದ ತತ್ವಗಳಿಗಾಗಿ ಹಾಗೂ ತಾವು ಸರಿಯಲ್ಲವೆಂದು ತಿಳಿದಿದ್ದ ಸಿದ್ಧಾಂತಗಳ ವಿರುದ್ಧವಾಗಿ ಜನಾದೇಶ ಪಡೆಯಲು ಅವರು ಆ ಹಿಂದೆಯೂ ಚುನಾವಣೆಗೆ ನಿಂತಿದ್ದರು.

೧೯೮೦ ರಲ್ಲಿ ಸ್ವಯಂಪ್ರೇರಿತರಾಗಿ ಕಾರಂತರು ಲೋಕಸಭೆಗೆ ಸ್ಪರ್ಧಿಸಿರಲಿಲ್ಲ. ಕೆನರಾ ಕ್ಷೇತ್ರದ, ಅಂದರೆ ಉತ್ತರ ಕನ್ನಡ ಜಿಲ್ಲೆಯ, ಪರಿಸರವಾದಿಗಳು ಅವರನ್ನು ಬಲವಂತಪಡಿಸಿದ್ದರು. ಪ್ರಚಾರಕ್ಕೂ ಅವರು ಬರದಿದ್ದರೂ ಪರವಾಗಿಲ್ಲ, ತಾವೇ ಆ ಕೆಲಸ ಮಾಡುವುದಾಗಿ ಮಾತು ಕೊಟ್ಟಿದ್ದರು. ಬೇರೆಯವರ ಮಾತಿಗೆ ಕಾರಂತರು ಬಡಪೆಟ್ಟಿಗೆ ಬಗ್ಗುವವರಲ್ಲ, ಮೊದಲು ತುಂಬ ಬಲವಾಗಿಯೇ ನಿರಾಕರಿಸಿದ್ದರು. ಆದರೆ ಒತ್ತಡ ಮತ್ತಷ್ಟು ತೀವ್ರವಾದ್ದರಿಂದ ಅರ್ಜಿಗೆ ತಮ್ಮ ರುಜು ಹಾಕಿದ್ದರು. ಅವರೆಂದೂ ಆ ಚುನಾವಣೆಯಲ್ಲಿ ಪ್ರಚಾರ ಭಾಷಣ ಮಾಡಲೇ ಇಲ್ಲ. ಏಕೆಂದರೆ ಅಭ್ಯರ್ಥಿಪತ್ರ ಸಲ್ಲಿಸಿದ ಒಂದೆರಡು ದಿನಗಳಲ್ಲಿಯೇ ಅವರು ವಿದೇಶಕ್ಕೆ ಹೋಗಿದ್ದರು; ವಾಪಸು ಬಂದದ್ದು ಚುನಾವಣೆ ನಡೆದು, ಫಲಿತಾಂಶ ಪ್ರಟವಾದ ಎಷ್ಟೋ ದಿನಗಳ ಮೇಲೆಯೇ.

ಪರಿಸರವಾದಿಗಳು ಒತ್ತಡ ತಂದುದಕ್ಕೆ ಕಾರಣ ಕಾರಂತರು ಮೊದಲಿನಿಂದಲೂ ಪರಿಸರದ ಪರ ವಾದಿಸಿದವರು, ತನ್ನ ಸ್ವಾರ್ಥಕ್ಕಾಗಿ ಮನುಷ್ಯ ನಿಸರ್ಗವನ್ನು ಹಾಳುಮಾಡುವುದರ ವಿರುದ್ಧ ಪ್ರಬಲ ದನಿ ಎತ್ತಿದವರು ಎಂಬುದು. ಕೈಗಾ ಅಣುವಿದ್ಯುತ್ ಯೋಜನೆಯ ವಿರುದ್ಧ ದೀರ್ಘಕಾಲ ಸಮರ ಸಾರಿದ್ದರು; ಪಾಜಕ ಕ್ಷೇತ್ರದಲ್ಲಿನ ಕಲ್ಲು ಗಣಿಗಾರಿಕೆಯ ವಿರುದ್ಧ ಹೋರಾಡಿದವರು. ಸಂದರ್ಭ ಸಿಕ್ಕಾಗಲೆಲ್ಲ ಪ್ರಕೃತಿಯ ಮೇಲಿನ ಹಲ್ಲೆಯನ್ನು ಖಂಡಿಸಿದವರು. ತಮ್ಮ ಬರಹಗಳಲ್ಲಿಯಂತೂ ಅವರು ಮಾನವನನ್ನು ಪ್ರಕೃತಿಯ ಒಂದು ಭಾಗವಾಗಿ ಮಾತ್ರ ಕಂಡವರು.; ಅದರೊಡನೆ ಸಮರಸದಿಂದ ಮಾತ್ರ ಮನುಷ್ಯನಿಗೆ ಸುಖ ಎಂದು ಪ್ರತಿಪಾದಿಸಿದವರು. ಅಂತಹವರು ಲೋಕಸಭೆಯಲ್ಲಿದ್ದರೆ ಪರಿಸರದ ಬಗ್ಗೆ ಸರ್ಕಾರಕ್ಕೆ ನೇರವಾಗಿ ತಿಳಿ ಹೇಳುವವರು ಇದ್ದಂತಾಗುವುದೆಂಬುದು ನಿಸರ್ಗಪ್ರಿಯರ ಆಸೆಯಾಗಿತ್ತು. ಕರ್ನಾಟಕದಲ್ಲಿ ಉತ್ತರ ಕನ್ನಡ ಜಿಲ್ಲೆಯೊಂದೇ ಪೂರ್ತಿ ಮಲೆನಾಡಿನ ಜಿಲ್ಲೆ ಎಂದು ಪರಿಗಣಿತವಾಗಿರುವುದು. ಹಾಗಾಗಿ ಆ ಕ್ಷೇತ್ರದಲ್ಲಿ ಕಾರಂತರು ಸ್ಪರ್ಧಿಸುವುದು ಅರ್ಥಪೂರ್ಣವಾಗಿತ್ತು.

ಅವರ ಅನುಪಸ್ಥಿತಿಯಲ್ಲಿ ಕಾರಂತರ ಪ್ರಚಾರ ಮಾಡುವವರು ಪರಿಸರವಾದಿಗಳಷ್ಟೇ. ಚೂರುಪಾರು ಹಣ ಸಂಗ್ರಹಿಸಿ ತಮ್ಮ ಮಾತಿನ ಮೂಲಕ ಮಾತ್ರ ಅವರು ಮೆಲುದನಿಯ ಪ್ರಚಾರ ಮಾಡಲು ಸಾಧ್ಯ. ಆಗ ಕನ್ನಡ ಶಕ್ತಿ ಕೇಂದ್ರದ ಕಾರ್ಯದರ್ಶಿಗಳಾಗಿದ್ದ ಚಲನಚಿತ್ರ ನಟ ಅಶೋಕ್ ಮತ್ತು ನಾನೂ ಅವರ ಪ್ರಚಾರಕ್ಕೆಂದು ಹೊರಟೆವು. ಉತ್ತರ ಕನ್ನಡದ ಕಾರಂತಪರ ಕಾರ್ಯಕರ್ತರು ಕ್ಷೇತ್ರದ ಹಲವಾರು ಕಡೆಗಳಲ್ಲಿ ನಮ್ಮ ಭಾಷಣಕ್ಕೆ ಏರ್ಪಾಟು ಮಾಡಿದ್ದರು. ಅವರು ಕರೆದೊಯ್ದು ಕಡೆ ಹೋಗಿ ಮಾತನಾಡುವುದಷ್ಟೇ ನಮ್ಮ ಕೆಲಸ. ಹಿಂದೆಯೂ ನಾನೊಮ್ಮೆ ಚುನಾವಣಾ ಪ್ರಚಾರದಲ್ಲಿ ಭಾಗವಹಿಸಿದ್ದೆ. ಅದು ಜನಸಂಘದ ಅಭ್ಯರ್ಥಿಯಾಗಿ ಗೋಪಾಲಕೃಷ್ಣ ಅಡಿಗರು ಬೆಂಗಳೂರು ದಕ್ಷಿಣಕ್ಷೇತ್ರದಿಂದ ಸ್ಪರ್ಧಿಸಿದ್ದಾಗ. ಆಗಿನ್ನೂ ನಾನು ಚಿಕ್ಕ ವಯಸ್ಸಿನವನು. ಅಡಿಗರಂತಹ ದೊಡ್ಡ ಲೇಖಕರು ರಾಜಕೀಯದಲ್ಲಿದ್ದರೆ ಸ್ವಲ್ಪವಾದರೂ ಉತ್ತಮವಾದೀತೆಂಬ ಭಾವನೆ ಇದಕ್ಕೆ ಕಾರಣ. ಕಾರಂತರ ಪರ ಪ್ರಚಾರಕ್ಕೆ ಹೋಗಲೂ ಅದೇ ಕಾರಣ.

ಸರಿ, ನಾವಿಬ್ಬರೂ ನೇರವಾಗಿ ಶಿರಸಿಗೆ ಹೊದೆವು; ಅಲ್ಲಿ ಹೊಟಲೊಂದರಲ್ಲಿ ಉಳಿದುಕೊಂಡೆವು. ಮಾರನೆಯ ದಿನದಿಂದ ಕರೆದೊಯ್ದ ಕಡೆ ಇಬ್ಬರೂ ಕಾರಂತರ ಪರ, ಪರಿಸರ ಸಂರಕ್ಷಣೆಯ ಪ್ರಾಮುಖ್ಯದ ವಿಷಯವಾಗಿ ಮಾತನಾಡಿದೆವು. ಕುಮಟಾ, ಹೊನ್ನಾವರ, ಭಟ್ಕಳದಂತಹ ದೊಡ್ಡ ಊರುಗಳಲ್ಲದೆ, ಅತ್ಯಂತ ಚಿಕ್ಕ ಹಳ್ಳಿಗಳಲ್ಲಿಯೂ ನಮ್ಮ ಕರ್ಯಕ್ರಮ ನಡೆಯಿತು. ಉತ್ತರ ಕನ್ನಡದ ಹಳ್ಳಿಗಳೆಂದರೆ ಒಂದೆರಡೇ ಮನೆಗಳು. ಅಲ್ಲಿ ಸೇರುತ್ತಿದ್ದ ಜನರು ಕೆಲವೇ ಮಂದಿ. ಅಷ್ಟಾದರೂ ಜನ ಎಲ್ಲಿಂದ ಬರುವರೆಂಬುದೂ ಕೆಲವೊಮ್ಮೆ ಸೋಜಿಗದ ವಿಷಯವಾಗುತ್ತಿತ್ತು. ಏಕೆಂದರೆ ನಮ್ಮ

ಕಣ್ಣಿಗೆ ಕಾಣುತ್ತಿದ್ದುದು ಒಂದೆರಡೇ ಮನೆಗಳು. ಕೆಲವು ಹಳ್ಳಿಗಳಲ್ಲಿ ಸುಮಾರು ಸಂಖ್ಯೆಯಲ್ಲಿ ಜನ ಜಮಾಯಿಸುತ್ತಿದ್ದರು. ಜನ ಎಷ್ಟೇ ಇರಲಿ, ನಾವಂತೂ ಒಂದೇ ಮಟ್ಟದ ಹುರುಪಿನಿಂದ ಮಾತನಾಡಿದೆವು. ಜನ ಗಮನವಿಟ್ಟು ಕೇಳುತ್ತಿದ್ದರು. ಹೀಗೆ ಜನ ಸೇರುವುದೇ ಅಲ್ಲಿ ಅಪರೂಪ; ಹಾಗಾಗಿ ಅವರಿಗೂ ಜಮಾಯಿಸಲು ಒಂದು ಅವಕಾಶ.

ಅನೇಕ ಕಡೆಗಳಲ್ಲಿ ಮಾತನಾಡಿದ ಮೇಲೆ ನಾವು ಹೊನ್ನಾವರಕ್ಕೆ ಬಂದೆವು. ಸಂಜೆ ಅಲ್ಲಿ ನಮ್ಮ ಭಾಷಣ ಕಾರ್ಯಕ್ರಮ. ಒಂದು ಕಡೆ ವೇದಿಕೆ ಸಿದ್ಧಪಡಿಸಿದ್ದರು. ಎಷ್ಟು ಬೇಗ ಎಂದರೂ ರಾತ್ರಿ ಎಂಟು ಗಂಟೆಯಾಯಿತು. ನಮ್ಮ ಜೊತೆಗೆ ಉಳಿದವರದೂ ಉಪನ್ಯಾಸಗಳು. ತಕ್ಕಮಟ್ಟಿಗೆ ಜನ ಸೇರಿದ್ದರು. ಒಂದಿಬ್ಬರು ಸ್ಥಳೀಯರು ಮಾತನಾಡಿದ ಮೇಲೆ ನನ್ನ ಸರದಿ ಬಂತು. ನನ್ನದು ಸ್ವಲ್ಪ ಆವೇಶಭರಿತ ಭಾಷಣ. ಶಿವರಾಮ ಕಾರಂತರ ಬಗೆಗಿನ ಗೌರವ, ವ್ಯವಸ್ಥೆಯ ವಿರುದ್ಧದ ಸಿಟ್ಟು ಇವುಗಳಿಂದಾಗಿ ನನ್ನ ಮಾತಿಗೆ ಮೊನಚು ಬರುತ್ತಿತ್ತು. ಈ ಅನುಭವವೆಲ್ಲ ನನಗೆ ಹೊಸದು. ಆದ್ದರಿಂದ ಉತ್ಸಾಹ ಬೇರೆ. ಕಾರಂತರ ಚುನಾವಣಾ ಚಿಹ್ನೆ ಆನೆ. ಕೆಲವು ನಿಮಿಷ ಕಾರಂತರ ಬಗ್ಗೆ, ಅವರ ಕಾಳಜಿಗಳ ಬಗ್ಗೆ, ಲೇಖನ ಸಾಮರ್ಥ್ಯದ ಬಗ್ಗೆ ವಿವರಿಸಿದ ಮೇಲೆ, ನಾನು ಅವರ ಚುನಾವಣಾ ಚಿಹ್ನೆಯ ಜೊತೆಗೇ ಅವರನ್ನು ಹೋಲಿಸಿದೆ. "ಕಾರಂತರ ಚಿಹ್ನೆ ಮಾತ್ರ ಆನೆಯಲ್ಲ, ಅವರೇ ಒಂದು ಆನೆ, ಅಂಥ ವ್ಯಕ್ತಿತ್ವ ಅವರದು. 'ಆನೆ ತುಳಿದದ್ದೇ ಹಾದಿ' ಎಂಬ ಗಾದೆಗೆ ಅನುಗುಣವಾಗಿರುವವರು ಕಾರಂತರು. ಸಂಸ್ಕೃತದಲ್ಲಿಯೂ 'ಮಹಾಜನೋ ಏನ ಗತಃ ಸ ಪಂಥಃ' ಎನ್ನುತ್ತಾರೆ. ಅಂಥ ಮಹಾವ್ಯಕ್ತಿ ಅವರು. ಯಾವ ಸಿದ್ಧಾಂತದ ಬಗ್ಗೆಯೂ ರಾಜಿ ಮಾಡಿಕೊಳ್ಳದ ಅವರು ತಮ್ಮದೇ ಹಾದಿಯನ್ನು ನಿರ್ಮಿಸಿದವರು...." ಹೀಗೆ ಕಾರಂತರ ವಿಶಿಷ್ಟತೆಯ ಬಗ್ಗೆ ನನ್ನದೇ ಆದ ಶೈಲಿಯಲ್ಲಿ ವ್ಯಾಖ್ಯಾನ ಮಾಡುತ್ತಿದ್ದೆ. ನನ್ನ ನಿರರ್ಗಳ ಮಾತುಗಾರಿಕೆಯ ಮಧ್ಯೆ ಜನರ ಮಧ್ಯದಿಂದ ಒಂದು ಪ್ರಶ್ನೆ ಹಾರಿ ಬಂತು: "ದಕ್ಷಿಣ ಕನ್ನಡದ ಈ ಆನೆ ನಮ್ಮ ಉತ್ತರ ಕನ್ನಡಕ್ಕೆ ಯಾಕೆ ಓಡಿ ಬಂತು?" ನಾನು ದಿಗ್ಭ್ರಾಂತನಾದೆ. ಆದರೆ ಸಾವರಿಸಿಕೊಂಡು, ಪ್ರಾಯಶಃ ಆ ಪ್ರಶ್ನೆಯನ್ನು ಅವಗಣಿಸಿ, ಮಾತನ್ನು ಮುಂದುವರೆಸಿದೆ.

ಎಲ್ಲ ಆದಮೇಲೆ ಯೋಚಿಸಿದೆ. ಉತ್ತರ ಕನ್ನಡ ಜಿಲ್ಲೆಗೆ ಕಾರಂತರು 'ಹೊರಗಿನವರು.' ತಮ್ಮ ಜಿಲ್ಲೆಯಲ್ಲೇ ಚುನಾವಣೆಗೆ ನಿಲ್ಲದೆ, ಬೇರೊಂದು ಕಡೆ ಯಾಕೆ ಬರಬೇಕು ಎಂದು ಕೆಲವರಾದರೂ ಆಲೋಚಿಸುವ ವಿಷಯ ನನ್ನ ಕಣ್ಣು ತೆರೆಸಿತ್ತು. ಹೊರಗಿನವರೇಕೆ ನಮ್ಮ ಪ್ರತಿನಿಧಿಯಾಗಬೇಕೆ? ಎಂಬುದು ಸಹಜ ಭಾವನೆ. ಅಲ್ಲದೆ, ಚುನಾವಣೆ ಸರಳವಲ್ಲ, ಅಲ್ಲಿಯ ಸಮೀಕರಣಗಳು ನೇರವಲ್ಲ, ನನ್ನಂತಹವರ ಉತ್ಸಾಹ ಗೆಲವು ತರಲು ಸಮರ್ಥವಾಗದು ಎಂಬುದು ಆಗ ನನಗೆ ಮತ್ತಷ್ಟು ವಿದಿತವಾಯ್ತು.

☆ – ☆ – ☆

# ಹೊಸ ಸರ್ಕಾರ : ಕನ್ನಡಪರ ಕರ್ತವ್ಯಗಳು

ಹೊಸ ಸಮ್ಮಿಶ್ರ ಸರ್ಕಾರ ಅಸ್ತಿತ್ವಕ್ಕೆ ಬಂದಿದೆ. ಜನ ಸಂಭ್ರಮ ಪಡದಿದ್ದರೂ ಕುತೂಹಲ ತಳೆದಿದ್ದಾರೆ. ಎರಡು ಕಾರಣಗಳಿಂದ: ಅಸ್ಥಿರತೆಯ ನಡುವೆ ಅದನ್ನೊಂದು ಸವಾಲಾಗಿ ಸ್ವೀಕರಿಸಿ ಈ ಸರ್ಕಾರ ಏನಾದರೂ ಸಾಧನೆ ಮಾಡೀತೇ ಎನ್ನುವುದು ಒಂದಾದರೆ, ಈ ಇಜ್ಜೋಡು ಎಷ್ಟು ದಿನ ಬೆಸೆದುಕೊಂಡಿರಬಲ್ಲುದು ಎಂಬುದು ಇನ್ನೊಂದು. ಏನಾದರಾಗಲೀ ಕನ್ನಡಪರ ಮನಸ್ಸು ಪ್ರತಿ ಹೊಸ ಸರ್ಕಾರ ಬಂದಾಗಲೂ ನಿರೀಕ್ಷಿಸುವಂತೆ ಇದರಿಂದಲೂ ಕೆಲವು ಕನ್ನಡಪರ ಕೆಲಸಗಳನ್ನು ನಿರೀಕ್ಷಿಸುತ್ತಿದೆ.

ಇಂಗ್ಲಿಷ್-ಹಿಂದಿಗಳ ಸೋಂಕು ಅಷ್ಟಾಗಿ ಇಲ್ಲದಿರುವುದರಿಂದಲೂ, ಕನ್ನಡ ದಲ್ಲಿಯೇ ಉತ್ತರ ಕೊಡಿ ಎಂಬ 'ವಾಚಕರವಾಣಿ' ಪತ್ರ ಓದಿಯೇ ಹಾಗೆ ಮಾಡುತ್ತೇ ನೆಂದು ಹೇಳಿದ ಮುಖ್ಯಮಂತ್ರಿ ಕುಮಾರಸ್ವಾಮಿಯವರ ಬಗ್ಗೆ ಸಹಜವಾಗಿ ಸ್ವಲ್ಪ ಭರವಸೆ ಮೂಡಿದೆ. ಅಲ್ಲದೆ, ನಮ್ಮ ಎಲ್ಲ ರಾಜಕೀಯ ಪಕ್ಷಗಳಿಗಿರುವ ಒಂದು ರೋಗ ಪ್ರತಿಯೊಂದಕ್ಕೂ ಹೈಕಮಾಂಡನ್ನು ಕೇಳುವುದು. ಮುಖ್ಯಮಂತ್ರಿಗಳ ಬಣಕ್ಕೆ ಯಾವ ಹೈಕಮಾಂಡೂ ಇಲ್ಲ; ಇರುವ ಅಪ್ಪನ ಹೈಕಮಾಂಡು ಅವರ ಗುಂಪನ್ನು ಅಮಾನತ್ತು ಮಾಡಿರುವುದು ಆ ಹಂಗು ಹರಿದುಕೊಳ್ಳಲು ಮತ್ತಷ್ಟು ಅನುಕೂಲ. ಹೀಗಾಗಿ ತಮಗೆ ಸರಿ ಅನ್ನಿಸಿದ್ದನ್ನು ಅವರು ಮಾಡಲು ಕಷ್ಟವಿಲ್ಲ.

ಈ ಸರ್ಕಾರ ಆದಷ್ಟು ತೀವ್ರವಾಗಿ ಮಾಡಬೇಕಾದ ಕೆಲಸವೆಂದರೆ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಣ ಮಾಧ್ಯಮ ವಿಚಾರದ ವಿವಾದಕ್ಕೆ ಅಂತಿಮ ತೆರೆ ಎಳೆಯುವುದು. ಆಂಗ್ಲೋ-ಇಂಡಿಯನ್ನರನ್ನು ಬಿಟ್ಟರೆ ಭಾರತದ ಬೇರಾರಿಗೂ ಇಂಗ್ಲಿಷ್ ಮಾತೃಭಾಷೆ ಅಲ್ಲದಿರುವುದರಿಂದ, ಬೇರಾರೂ ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ಶಿಕ್ಷಣ ಕೇಳುವ ಹಕ್ಕಿಲ್ಲ ಎಂದು ೧೯೯೪ ರಲ್ಲಿಯೇ ಸುಪ್ರೀಂ ಕೋರ್ಟ್ ತೀರ್ಪು ನೀಡಿರುವುದರ ವಿರುದ್ಧ ಕೆಲವರು ತಾಂತ್ರಿಕ ನೆಪವೊಡ್ಡಿ ಹೈಕೋರ್ಟ್ ಮೊರೆ ಹೊಕ್ಕಿದ್ದಾರೆ. ಅದು ನೀಡಿರುವ ಸೀಮಿತ ತಡೆಯಾಜ್ಞೆಯ ನೆಪದಿಂದ ಹಿಂದಿನ ಸರ್ಕಾರಗಳು ಕಾರ್ಯ ಪ್ರವೃತ್ತವಾಗಲಿಲ್ಲ. ಕೋರ್ಟ್‌ನಲ್ಲಿ ಅದು ಮೇ ತಿಂಗಳಲ್ಲಿ ವಿಚಾರಣೆಗೆ ಬರುವುದು, ಈ ವರ್ಷಕ್ಕೆ ತಡವಾಯಿತು ಎಂದು ಸರ್ಕಾರ ಹೇಳುತ್ತ ಸರ್ಕಾರ ಕ್ರಮ

ಕೈಕೊಳ್ಳದಿರುವುದು ನಡೆದೇ ಇದೆ. ಈಗ ಕ್ರಮ ಕೈಗೊಂಡು ಆ ಪ್ರಶ್ನೆ ಅಂತಿಮವಾಗಿ ನ್ಯಾಯಾಲಯದಲ್ಲಿ ಇತ್ಯರ್ಥವಾಗುವ ಹಾಗೆ ಈ ಸರ್ಕಾರ ಕಾರ್ಯಪ್ರವೃತ್ತವಾಗ ಬೇಕು. ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ಎಂಬ ನೀತಿ ಅಂತಿಮವಾಗಿ ಜಾರಿಗೆ ಬಂದರೆ, ಇಂಗ್ಲಿಷನ್ನು ಯಾವ ತರಗತಿಯಿಂದ ಕಲಿಸಬೇಕು ಎಂಬುದನ್ನು ಕುರಿತು ನಿರ್ಣಯಕ್ಕೆ ಬರಬಹುದು. ಈ ಕೆಲಸ ಈ ಸರ್ಕಾರ ಕೈಗೆತ್ತಿಕೊಳ್ಳಬೇಕಾದ ಮೊದಲ ಆದ್ಯತೆಯದು.

ಎರಡನೆಯದು, ಪ್ರೌಢ ಶಿಕ್ಷಣದಲ್ಲಿ ವಿದ್ಯಾರ್ಥಿಗಳು ಕಲಿಯಬೇಕಾದ ಭಾಷೆ ಗಳ ಸಂಖ್ಯೆಯ ಬಗೆಗಿನದು. ಗೋಕಾಕ್ ಚಳುವಳಿಯ ಫಲವಾಗಿ ಒಂದು ಭಾಷಾ ಸೂತ್ರ ಒಪ್ಪಿತವಾಗಿ ಜಾರಿಗೆ ಬಂತು. ಅದರ ಪ್ರಕಾರ ವಿದ್ಯಾರ್ಥಿಗಳು ಪ್ರೌಢಶಾಲೆಯ ತರಗತಿಗಳಲ್ಲಿ ಕಲಿಯುವ ಮೂರು ಭಾಷೆಗಳಲ್ಲಿ ಕನ್ನಡ ಕಡ್ಡಾಯವಾಯಿತು. ಕಲಿಯುವ ಮೂರು ಭಾಷೆಗಳಲ್ಲಿ ಕನ್ನಡವನ್ನು ಒಳಗೊಂಡಂತೆ ಎರಡು ಭಾಷೆಗಳಲ್ಲಿ ಮಾತ್ರ ವಿದ್ಯಾರ್ಥಿ ಉತ್ತೀರ್ಣನಾದರೆ ಸಾಕು ಎಂಬ ನಿಯಮ ಭಾಷಾಸೂತ್ರ ಜಾರಿಯಾದ ಮೊದಲ ಕೆಲವು ವರ್ಷಗಳು ಜಾರಿಯಲ್ಲಿತ್ತು. ಆಮೇಲೆ ಕಾಣದ ಕೈಗಳ ಪ್ರಭಾವದಿಂದ ಮೂರೂ ಭಾಷೆಗಳಲ್ಲಿ ಉತ್ತೀರ್ಣನಾಗಬೇಕೆಂಬ ನಿಯಮ ಕಡ್ಡಾಯವಾಗಿದೆ. ಇದರಿಂದಾಗಿ ಮೂರನೆಯ ಭಾಷೆಗೆ ಹೆಚ್ಚು ಪ್ರಾಶಸ್ತ್ಯ ಬಂದು ವಿದ್ಯಾರ್ಥಿಗಳಿಗೆ ಅತೀವ ಹೊರೆಯಾಗಿದೆ. ಗೋಕಾಕ್ ಚಳವಳಿಯ ಫಲ ಕನ್ನಡಕ್ಕೆ ದಕ್ಕುವುದರ ಬದಲು ಮೂರನೆಯ ಭಾಷೆಗೆ ಸಿಕ್ಕಿದೆ ಎಂಬ ಕೊರಗು ಚಳವಳಿ ಗಾರರಲ್ಲಿದೆ. ಅದನ್ನು ತಪ್ಪಿಸಿ ಈ ಮೊದಲು ಇದ್ದಂತೆ ಕನ್ನಡವನ್ನೊಳಗೊಂಡಂತೆ ಎರಡು ಭಾಷೆಗಳಲ್ಲಿ ಉತ್ತೀರ್ಣತೆ ನಿಯಮವಾಗಬೇಕು.

ಇದು ದ್ವಿಭಾಷಾ ಸೂತ್ರದ ಅಳವಡಿಕೆಯ ಮೊದಲ ಹಂತವಾಗಬೇಕು ಎಂಬುದು ನಮ್ಮ ಅಪೇಕ್ಷೆ. ತ್ರಿಭಾಷಾಸೂತ್ರ ಎಂಬುದು ಕರ್ನಾಟಕದಂತಹ ದುರ್ಬಲ ಆಡಳಿತವಿರುವ ರಾಜ್ಯಗಳಲ್ಲಿ ಜಾರಿಯಲ್ಲಿರುವ ಪದ್ಧತಿ. ಉತ್ತರದ ರಾಜ್ಯಗಳಾಗಲೀ, ತಮಿಳುನಾಡಾಗಲೀ ಇದನ್ನು ಪಾಲಿಸುತ್ತಿಲ್ಲ. ಹಿಂದಿಯನ್ನು ರಾಷ್ಟ್ರಭಾಷೆಯೆಂದು ಬಿಂಬಿಸುತ್ತ ನಮ್ಮ ಮಕ್ಕಳ ಮೇಲೆ ಅದನ್ನು ಹೇರುವ ಕ್ರೌರ್ಯ ಹೋಗಿ "ಕನ್ನಡ ಮತ್ತೊಂದು ಭಾಷೆ" ಕಲಿಕೆಗೆ ಕಡ್ಡಾಯವಾಗಬೇಕು. ಆವಶ್ಯಕತೆಗೆ ತಕ್ಕಂತೆ ವಿದ್ಯಾರ್ಥಿ ಎಷ್ಟು ಭಾಷೆಯನ್ನಾದರೂ ಸ್ವಇಚ್ಛೆಯಿಂದ ಕಲಿಯಲಿ, ಬೇಡವೆಂದವರಾರು?

ಕನ್ನಡಪರವಾಗಿ ಆಗಬೇಕಾದ ಮತ್ತೊಂದು ಕೆಲಸವೆಂದರೆ, ತಾಂತ್ರಿಕ-ವೈದ್ಯಕೀಯ ಶಿಕ್ಷಣದಲ್ಲಿನ ಕನ್ನಡ ಕಲಿಕೆಯ ಬಗೆಗಿನದು. ಕನ್ನಡ ಚಳವಳಿಗಾರರ ಒತ್ತಾಯದಿಂದ ಅಲ್ಲಿನ ಮೊದಲನೆಯ ವರ್ಷದಲ್ಲಿ ಕನ್ನಡ ಕಲಿಸುವ ವ್ಯವಸ್ಥೆ ಜಾರಿಗೆ ಬಂತು; ಅದು ಈಗಲೂ ಅನುಷ್ಠಾನದಲ್ಲಿದೆ. ಆದರೆ ಕನ್ನಡವನ್ನು ಪರೀಕ್ಷೆಯಲ್ಲಿ ಪಾಸು ಮಾಡುವುದು ಕಡ್ಡಾಯವಲ್ಲ. ಹೀಗಾಗಿ ವಿದ್ಯಾರ್ಥಿಗಳು ಕನ್ನಡ ತರಗತಿಗಳಿಗೇ ಹೋಗುವುದಿಲ್ಲ. ಸಂಸ್ಥೆಗಳಲ್ಲಿ ಕೆಲಸಮಾಡುವ ಕನ್ನಡ ಅಧ್ಯಾಪಕರು ಗೇಲಿಯ

ವಸ್ತುಗಳಾಗಿದ್ದಾರೆಯೇ ವಿನಾ ಅವರ ಪಾಠವನ್ನು ಯಾರೂ ಕೇಳುವುದಿಲ್ಲ. ಒಂದಷ್ಟು ಸಂಬಳ ಬಂದರೂ ಅವರು ನಗೆಪಾಟಲಿಗೆ ಒಳಗಾಗಿ ದುಮ್ಮಾನ ಅನುಭವಿಸುವಂತಾಗಿದೆ. ಹೊಸ ಸರ್ಕಾರ ಈ ಕಡೆ ಗಮನ ಹರಿಸಿ ತಾಂತ್ರಿಕ ಹಾಗೂ ವೈದ್ಯವಿಜ್ಞಾನಗಳ ವಿಶ್ವವಿದ್ಯಾಲಯಗಳಿಗೆ ತಾಕೀತು ಮಾಡಿ ಕನ್ನಡದಲ್ಲಿ ಪಾಸಾಗುವುದು ಅನಿವಾರ್ಯವೆಂಬ ನಿಯಮ ರೂಪಿಸಲು ಮುಂದಾಗಬೇಕು. ಇದರಿಂದ ನಮ್ಮ ನೂರಾರು ತಾಂತ್ರಿಕ ಶಿಕ್ಷಣ ಸಂಸ್ಥೆಗಳಲ್ಲಿ ಓದುವ ಸಾವಿರಾರು ಅನ್ಯಪ್ರಾಂತಗಳ ವಿದ್ಯಾರ್ಥಿಗಳು ಸ್ವಲ್ಪ ಮಟ್ಟಿಗಾದರೂ ಕನ್ನಡವನ್ನು ಕಲಿಯುವ ಅವಕಾಶ ಉಂಟಾಗುತ್ತದೆ, ಅವರಲ್ಲಿಯೂ ಕನ್ನಡದ ಬಗ್ಗೆ ಆಸಕ್ತಿ ಮೂಡಲು ಸಹಾಯಕವಾಗುತ್ತದೆ.

ಇನ್ನೊಂದು ಮುಖ್ಯವಾದ ವಿಷಯವೆಂದರೆ ಕೆಪಿಎಸ್‌ಸಿ ಪರೀಕ್ಷೆಗಳಲ್ಲಿ ಕನ್ನಡ ಭಾಷೆಯ ಸ್ಥಾನದ ಬಗೆಗಿನದು. ದೀರ್ಘ ಹೋರಾಟದ ಫಲವಾಗಿ ಕೆಪಿಎಸ್‌ಸಿ ಪರೀಕ್ಷೆಗಳಲ್ಲಿ ಇಂಗ್ಲಿಷ್ ಭಾಷಾಪತ್ರಿಕೆ ಮಾತ್ರ ಇರುವುದರ ಬದಲು, ಕನ್ನಡ ಭಾಷೆಯ ಪತ್ರಿಕೆಯೂ ಸೇರ್ಪಡೆಯಾಗಿದೆ. ಆದರೆ ಅದು ಎಲ್ಲರಿಗೂ ಕಡ್ಡಾಯವಲ್ಲ; ಇಂಗ್ಲಿಷ್ ಅಥವಾ ಕನ್ನಡ ಪತ್ರಿಕೆಗಳಲ್ಲಿ ಆಯ್ಕೆಯ ಅವಕಾಶವಿದೆ. ಇದರಿಂದ ಅನೇಕರು ಇಂಗ್ಲಿಷನ್ನು ಆಯ್ದುಕೊಂಡು ಕನ್ನಡವನ್ನು ಕೈಬಿಡುತ್ತಾರೆ. ಹೇಗೂ ನೇಮಕಗೊಂಡರೆ ಅವರು ಕನ್ನಡವನ್ನು ಕಲಿಯಲೇಬೇಕು. ಆದ್ದರಿಂದ ಎಲ್ಲರಿಗೂ ಕನ್ನಡ ಪತ್ರಿಕೆಯನ್ನು ಕಡ್ಡಾಯ ಮಾಡಬೇಕು. ಸರ್ಕಾರ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಒಪ್ಪಿರುವುದರಿಂದ ಅದನ್ನು ಮಾತ್ರ ಉಳಿಸಿಕೊಂಡು ಇಂಗ್ಲಿಷ್ ಅನ್ನು ರದ್ದುಗೊಳಿಸಬೇಕು.

ಮುಖ್ಯಮಂತ್ರಿಗಳಾದಿಯಾಗಿ ಎಲ್ಲರೂ ಕನ್ನಡದಲ್ಲಿರುವ ಕಡತಗಳನ್ನು ಮಾತ್ರ ಪರಿಶೀಲಿಸುವ ನಿಯಮ ಅನುಸರಿಸಬೇಕು. ಕನ್ನಡದಲ್ಲಿ ಬಂದ ಅರ್ಜಿಗಳನ್ನು ಮಾತ್ರ ಪರಿಗಣಿಸುವ ಪರಿಪಾಟ ಬೆಳೆಯಬೇಕು. ಕರ್ನಾಟಕದಲ್ಲಿ ಕನ್ನಡ ತಿಳಿಯದಿದ್ದರೆ ಏಗುವುದು ಕಷ್ಟವೆಂಬ ಭಾವನೆ ಹೊರಗಿನವರಿಗೆ ಉಂಟಾಗಬೇಕು. ಸರ್ಕಾರ ಇದಕ್ಕೆ ಕುಮ್ಮಕ್ಕು ನೀಡಬೇಕು. ಇಲ್ಲದಿದ್ದರೆ ಕರ್ನಾಟಕವೆಂಬ ಗೋಮಾಳದಲ್ಲಿ "ಕನ್ನಡ ಗೋವಿನ ಮುದ್ದಿನ ಕರುಗಳಿಗಿಂತ" ಅನ್ಯಭಾಷಾ ಕರುಗಳು ತೊಂಡು ಮೇಯುವುದು ಇನ್ನಷ್ಟು ಹೆಚ್ಚಾಗುತ್ತದೆ.

☆ - ☆ - ☆

# ಸಾಂಕೇತಿಕತೆ – ವಾಚ್ಯತೆ

ಮಾನವನ ಸಂವೇದನೆಗಳು ಅತ್ಯಂತ ಸೂಕ್ಷ್ಮವಾದದ್ದರಿಂದ ಅವೆಲ್ಲವನ್ನೂ ನೇರವಾಗಿ ಹೇಳಿಕೊಳ್ಳುವುದು ಅಸಾಧ್ಯ. ಅದಕ್ಕೆಂದೇ ಅವನು ಬೇರೆ ಮಾರ್ಗಗಳನ್ನು ಹಿಡಿಯುತ್ತಾನೆ. ಇದರ ಕಾರಣದಿಂದಲೇ ಸಾಹಿತ್ಯ, ಚಿತ್ರ, ಸಂಗೀತ ಮುಂತಾದ ಲಲಿತಕಲೆಗಳು ಆವಿರ್ಭವಿಸಿರುವುದು. ಅವುಗಳ ಮೂಲಕ ತನ್ನ ಸೂಕ್ಷ್ಮಾತಿಸೂಕ್ಷ್ಮ ಅನುಭವ-ವಿಚಾರಗಳನ್ನು ಅವನು ವ್ಯಕ್ತಪಡಿಸಲು ಪ್ರಯತ್ನಿಸುವುದು. ಅಂದರೆ ಈ ಕಲೆಗಳ ರೂಪವು ತನ್ನ ಗರ್ಭದಲ್ಲಿ ವಿಶೇಷವಾದದ್ದನ್ನು ಹುದುಗಿಸಿಕೊಂಡಿರುತ್ತದೆ. ಇದನ್ನೇ ಸಾಂಕೇತಿಕತೆ ಎನ್ನುವುದು. ಇದು ನಿರ್ದಿಷ್ಟತೆಯನ್ನು, ಪರಿಮಿತಿಯನ್ನು ಮೀರಿದುದು. ಸಾಂಕೇತಿಕತೆಗೆ ವಿರುದ್ಧವಾದುದು ವಾಚ್ಯತೆ; ಹೇಳಿದಷ್ಟನ್ನು ಮಾತ್ರ ಸೂಚಿಸುವಂಥದು.

ಕಲೆಗಳು ಪುರಾಣಗಳು ಸಾಂಕೇತಿಕ ಅಭಿವ್ಯಕ್ತಿಯ ಮಾದರಿಗಳು; ಒಂದು, ವ್ಯಕ್ತಿಯ ಅಭಿವ್ಯಕ್ತಿಯಾದರೆ ಮತ್ತೊಂದು ಸಾಮೂಹಿಕವಾದದ್ದು. ಇವುಗಳ ಅಭಿವ್ಯಕ್ತಿ ಕ್ರಮವೇ ಅವುಗಳನ್ನು ನೇರ ರೀತಿಯಲ್ಲಿ ಅರ್ಥೈಸಲು ಸಾಧ್ಯವಿಲ್ಲ ಮತ್ತು ಅರ್ಥೈಸಬಾರದು ಎಂಬುದನ್ನು ತೋರಿಸುತ್ತದೆ. ಇವು ಅನುಸರಿಸುವುದು ನೇರವಲ್ಲದ ಮಾತುಗಾರಿಕೆಯನ್ನು; ಇಲ್ಲಿನ ಅರ್ಥ ದಿನಬಳಕೆಯ ಮಾತುಗಳು ಸೂಚಿಸುವುದಕ್ಕಿಂತ ಭಿನ್ನವಾದುದು. ಈ ಭಿನ್ನತೆಯೂ ಕಾಲಕಾಲಕ್ಕೆ ಆದರೆ ನಿರಂತರವಾಗಿ ಬೆಳದು ಬಂದದ್ದು. ಅಂದರೆ ಸಾಹಿತ್ಯದ ಅಭಿವ್ಯಕ್ತಿರೀತಿಯು ಯಾವುದೋ ಮಾರ್ಗದಲ್ಲಿ ಬೆಳೆದು ಬಂದಿರುತ್ತದೆ; ಇದನ್ನೇ ಸಂಪ್ರದಾಯ ಎನ್ನುವುದು. ಅದರಲ್ಲಿ ಸಾತತ್ಯ ವಿರುತ್ತದೆ. ಇದ್ದಕ್ಕಿದ್ದಂತೆ ಸಾಹಿತ್ಯ ಅಥವಾ ಇತರ ಕಲೆಗಳನ್ನು ನೋಡ ಹೊರಟರೆ ಅರ್ಥವಂತಿಕೆ ಹೇಗೆ ಎಂಬುದು ತಿಳಿಯಲಾರದು.

ಆದರೆ ಎಷ್ಟೋ ಬಾರಿ ಇವುಗಳಿಗೆ ಜನಸಾಮಾನ್ಯರು ನೇರವಾದ ರೀತಿ ಯಲ್ಲಿಯೇ ಅಂದರೆ ವಾಚ್ಯದ ನೆಲೆಯಲ್ಲಿಯೇ ಅರ್ಥೈಸಹೊರಡುತ್ತಾರೆ; ಆಗ ಆಭಾಸ ವಾಗುತ್ತದೆ. ನಿದರ್ಶನಕ್ಕೆ 'ವರ ಕೊಡುವುದು' ಎಂಬುದನ್ನು ತೆಗೆದುಕೊಳ್ಳೋಣ. ಶಾಪಾನುಗ್ರಹ ಶಕ್ತಿಯ ಕೆಲವರಿರುತ್ತಾರೆ, ಋಷಿಗಳಂತೆ. ಅವರು ತಮ್ಮ ತಪಃಶಕ್ತಿ ಯಿಂದ ಒಳ್ಳೆಯದನ್ನೂ ಮಾಡಬಲ್ಲರು, ಕೆಟ್ಟುದನ್ನೂ ತರಬಲ್ಲರು ಎಂಬುದು.

ಋಷಿಯೊಬ್ಬ ಕಮಂಡಲಿನ ನೀರನ್ನು ಮಂತ್ರಿಸಿ ಒಬ್ಬನ ಮೇಲೆ ಎರಚಿ ಶಾಪ ಕೊಟ್ಟರೆ ಅದರಂತೆ ಆ ವ್ಯಕ್ತಿ ಆಗಿಬಿಡುತ್ತಾನೆ ಎಂದು ಪುರಾಣಗಳಲ್ಲಿ, ಪ್ರಾಚೀನ ಕಾವ್ಯಗಳಲ್ಲಿ ಎಷ್ಟೋ ಸನ್ನಿವೇಶಗಳಲ್ಲಿ ಚಿತ್ರಿತವಾಗಿದೆ. ಇದು ಸಾಂಕೇತಿಕವಾದುದು; ಋಷಿ ಎಂದರೆ ಅಪರಿಮಿತ ಬುದ್ಧಿಶಕ್ತಿ, ಆಲೋಚನಾಶಕ್ತಿ, ಸಂಕಲ್ಪಶಕ್ತಿಗಳಿರುವ ವ್ಯಕ್ತಿಯ ಸಂಕೇತ. ಅವನು ತನ್ನ ಈ ಶಕ್ತಿಯಿಂದ ಸಾಮಾನ್ಯನೊಬ್ಬ ಸಾಧಿಸಲಾರದ್ದನ್ನು ಸಾಧಿಸಬಲ್ಲ ಎಂಬುದು ಅದರರ್ಥ. ಆದರೆ ಜನರು ಇಂತಹ ವ್ಯಕ್ತಿಗಳು ಹಿಂದೆ ಮಾತ್ರ ಇದ್ದರು (ಏಕೆಂದರೆ ಪುರಾಣಗಳು ಹಿಂದಿನವು ತಾನೇ) ಎಂದು ನಂಬುತ್ತಾರೆ. ಶಾಪಾನುಗ್ರಹಶಕ್ತಿ ಎಂದರೆ ಅಂದಂತೆ ನಡೆಯುವ ಶಕ್ತಿ ಎಂದೇ ಅರ್ಥೈಸುತ್ತಾರೆ. ಹಿಂದೆ ವಿವರಿಸಿದ ಶಕ್ತಿ ಇರುವವರು ಈಗಲೂ ಇರಬಲ್ಲರು; ಅವರು ಕಾವ್ಯಗಳಲ್ಲಿ ವರ್ಣಿಸಿರುವಂತೆ ಉದ್ದವಾದ ಗಡ್ಡವನ್ನೇನೂ ಬಿಟ್ಟಿರಲೇಬೇಕಾದ್ದಿಲ್ಲ; ಕಾಡಿನಲ್ಲೇ ವಾಸಮಾಡಬೇಕಾದ್ದಿಲ್ಲ. ಅತಿಮಾನುಷತೆ ಎಂದರೆ ಸಾಧಾರಣ ಜನರು ಏರಲಾರದ ಎತ್ತರಕ್ಕೆ ಅವರು ಏರಬಲ್ಲರು ಎಂದಷ್ಟೇ ಅದರ ಅರ್ಥ. ಅವರು ಅಂದಂತೆ ಆಗುತ್ತದೆ ಎಂದರೆ, ತಾವಂದುಕೊಂಡದ್ದನ್ನು ತಮ್ಮ ಶಕ್ತಿಯಿಂದ ಅವರು ಸಾಧಿಸಬಲ್ಲರು ಎಂದೇ ಹೊರತು ಅವರು ಹೇಳಿದ ಪ್ರತಿ ಮಾತೂ ವಾಚ್ಯದ ನೆಲೆಯಲ್ಲಿ ನೆರವೇರುತ್ತದೆ ಎಂದೇನಲ್ಲ.

ಸಾಂಕೇತಿಕತೆಯನ್ನು ನಿಜವೆಂದೇ ನಂಬುವುದನ್ನು ಮೂಢನಂಬಿಕೆ ಎಂದು ಕರೆಯಬಹುದೇನೋ. ದೇವತೆಗಳೂ ರಾಕ್ಷಸರೂ ಸೇರಿ ಮಂದರಪರ್ವತವನ್ನೇ ಕಡೆಗೋಲಾಗಿಸಿಕೊಂಡು ಹಾಲುಗಡಲನ್ನು ಕಡೆದಾಗ ಮೊದಲು ವಿಷ ಬಂತು, ಆನಂತರ ಅಮೃತ ಹುಟ್ಟಿತು ಎಂಬ ಪುರಾಣ ಕತೆಯಿದೆಯಲ್ಲ; ಇದನ್ನು ಮುಗ್ಧ ಜನ ನಿಜವೆಂದೇ ನಂಬಬಹುದು. ಹಾಲಿನ ಸಮುದ್ರ ಎಲ್ಲೋ ಇದೆ, ಈ ಸಮುದ್ರ ಮಥನ ಹಿಂದೆ ಹೀಗೇ ನಡೆಯಿತು ಎಂದು ಅವರು ನಂಬಿಬಿಡಬಹುದು. ನಮ್ಮ ಮನಸ್ಸೇ ಒಂದು ಸಮುದ್ರವಿದ್ದಂತೆ, ಅಗಾಧವಾದದ್ದು; ಅದನ್ನು ಕಡೆದಾಗ ಅಂದರೆ ಆಲೋಚನೆ ಮಾಡಿದಾಗ ಮೊದಲು ಅಸಮರ್ಪಕ ರೀತಿಯಿಂದಾಗಿಯೋ, ಮತ್ತಾವುದೋ ಕಾರಣಕ್ಕೋ ತಪ್ಪು ತೀರ್ಮಾನಗಳೇ ಬರಬಹುದು, ಆದರೆ ಕೊನೆಯಲ್ಲಿ ಸಮರ್ಪಕ ಎನ್ನಬಹುದಾದ ತೀರ್ಮಾನ ಮೂಡುತ್ತದೆ ಎಂಬುದು ಇದರ ಅರ್ಥವಿರಬಹುದು. ಅಥವಾ ಇದನ್ನು ಬೇರೆ ರೀತಿಯಲ್ಲಿಯೂ ಅರ್ಥೈಸಬಹುದು; ಸಾಂಕೇತಿಕತೆಗೆ ಒಂದೇ ಅರ್ಥವಲ್ಲ, ಅನೇಕ. ಅರ್ಥದ ಅನಿರ್ದಿಷ್ಟತೆಯೇ ಸಾಂಕೇತಿಕತೆಯ ಶಕ್ತಿ.

ಜನರ ಈ ಮುಗ್ಧತೆಯಿಂದಾಗಿಯೇ ಜಾಣರು ಅವರನ್ನು ಮೋಸಗೊಳಿಸಬಲ್ಲರು. ಈಗಲೂ ತಾವು ಅತಿಮಾನುಷ ವ್ಯಕ್ತಿಗಳೆಂದು ಹೇಳಿಕೊಳ್ಳುವವರು ನೀಳ ಗಡ್ಡವನ್ನು ಬಿಡುತ್ತಾರೆ; ಕಾವಿ ಧರಿಸಬಹುದು ಮಣಮಣ ಮಂತ್ರ ಹೇಳಬಹುದು. ಇಂತಹವುಗಳ ಚಿತ್ರಣವನ್ನು ಪುರಾಣ-ಕಾವ್ಯ ಇತ್ಯಾದಿಗಳಲ್ಲಿ ಕೇಳಿ ಅದು ವಾಸ್ತವಸತ್ಯ

ಎಂದು ನಂಬಿದವರು, ಆ ಬಣ್ಣನೆಯ ವ್ಯಕ್ತಿಗಳನ್ನು ಕಂಡು ಅವರೂ ಪೌರಾಣಿಕ ವ್ಯಕ್ತಿಗಳು, ಅತಿಮಾನುಷ ಶಕ್ತಿಯುಳ್ಳವರು ಎಂದು ಮೋಸಹೋಗುತ್ತಾರೆ. ಜನ ಏನನ್ನು ನಂಬುತ್ತಾರೋ ಅದಕ್ಕನುಗುಣವಾದ ವೇಷವನ್ನೇ ಮೋಸಗಾರರು ಹಾಕುವುದು. ಆದ್ದರಿಂದ ಜನ ಯಾವುದು ಸಾಂಕೇತಿಕ, ಯಾವುದು ವಾಚ್ಯ ಎಂಬ ವಿವೇಚನೆಯನ್ನು ಬೆಳೆಸಿಕೊಳ್ಳಬೇಕು. ಇದು ಆಲೋಚನಾಪರತೆಯಿಂದ ಮಾತ್ರ ಸಾಧ್ಯವಾಗುವಂಥದು. ಆದರೆ ಜನಸಾಮಾನ್ಯರು ತಾವೇ ಆಲೋಚಿಸುವುದರ ಬದಲು ಇತರರ ಆಲೋಚನೆಯನ್ನು ಅವಲಂಬಿಸಿಬಿಡುತ್ತಾರೆ. ಗುರು ಹೇಳಿದ ಮಾರ್ಗ ಎಂದು ತಾವು ದೊಡ್ಡವರೆಂದು ನಂಬಿದ ವ್ಯಕ್ತಿಯನ್ನು ಚಾಚೂ ತಪ್ಪದೆ ಅನುಸರಿಸಿ ಬಿಡುತ್ತಾರೆ; ಹಲವೊಮ್ಮೆ ಮೋಸಹೋಗುತ್ತಾರೆ.

ಇದು ಎಲ್ಲ ಕಾಲದಲ್ಲೂ ನಡೆದಂತಹುದೇ. ಮಧ್ಯಯುಗದ ಕರ್ನಾಟಕದಲ್ಲಿ ಘುಟಿಕಾಸಿದ್ಧರೆಂಬುವವರು ಇದ್ದ ಬಗ್ಗೆ ನಮ್ಮ ಕಾವ್ಯಗಳಲ್ಲಿ ಉಲ್ಲೇಖಗಳಿವೆ. ಅವರು ಪಾದರಸ-ಅಭ್ರಕಗಳ ಮಿಶ್ರಣವನ್ನು ಬಳಸಿ ಗುಳಿಗೆಯನ್ನು ತಯಾರಿಸಿ ಜನರಿಗೆ ಕೊಡುತ್ತಿದ್ದರು, ಅವುಗಳನ್ನು ಸೇವಿಸಿದರೆ ವಜ್ರದೇಹವುಂಟಾಗುತ್ತದೆ ಎಂದು ಜನರನ್ನು ನಂಬಿಸುತ್ತಿದ್ದರು. ಜನ ಶಾಶ್ವತವಾದ ದೇಹವನ್ನು ಹೊಂದಲು ಆಸೆಪಟ್ಟು ಅಪಾರ ಹಣ ಕೊಟ್ಟು ಈ ಗುಳಿಗೆಗಳನ್ನು ಪಡೆದು ಸೇವಿಸುತ್ತಿದ್ದರು ಎಂಬೆಲ್ಲ ವಿವರಣೆಗಳು ದೊರೆಯುತ್ತವೆ. ಕೆಲವರು ಈ ಮೋಸದ ಬಗ್ಗೆ ಎಚ್ಚರಿಕೆಯ ಮಾತನ್ನೂ ಆಡಿದ್ದಾರೆ, ಲೇವಡಿ ಮಾಡಿದ್ದಾರೆ. ಆದರೆ ಜನಸಾಮಾನ್ಯರ ಆಸೆ ವಿಚಾರಪರತೆಯನ್ನು ಮೀರಿ ಇದ್ದುದನ್ನು ಕಳೆದುಕೊಳ್ಳುವ ಹಾಗೆ ಮಾಡುತ್ತಿತ್ತು. ಈಗಲೂ ಹಾಗೆಯೇ ವಾಸ್ತವವಾಗಿ ಸಾಧ್ಯವಲ್ಲ ಎಂಬುದನ್ನು ನಿಜವೆಂದು ನಂಬಿ ತಂತ್ರಗಳಿಗೆ ಬಲಿಯಾಗಿ ಇರುವುದನ್ನು ಕಳೆದುಕೊಳ್ಳುವುದರ ಸ್ಥಿತಿಯನ್ನು ಜನ ತಂದುಕೊಳ್ಳುತ್ತಾರೆ. ಇಂತಹ ಮೋಸದ ಪ್ರಕರಣಗಳು ಭಾರಿ ದೊಡ್ಡವಾದರೆ ಪೇಪರುಗಳಲ್ಲಿ ಬರುತ್ತವೆ; ಆದರೆ ಸಣ್ಣ ಪ್ರಮಾಣದ ಮೋಸಗಳಿಗೆ ಜನ ದಿನವೂ ಬಲಿಯಾಗುತ್ತಲೇ ಇರುತ್ತಾರೆ. ಇದರಿಂದ ಪಾರಾಗುವ ಮಾರ್ಗವೆಂದರೆ, ಯಾರಾದರೂ ಏನಾದರೂ ಹೇಳಿದರೆ ಅದು ಸರಿಯೇ, ಸಾಧ್ಯವೇ ಎಂದು ಆಲೋಚನೆಮಾಡುವುದು ಮಾತ್ರ. ನಂಬಿಕೆಯ ನೆಲಗಟ್ಟೂ ವೈಚಾರಿಕತೆಯಾದರೆ ಮೋಸವು ನಡೆಯದು; ಸಾಂಕೇತಿಕತೆ-ವಾಚ್ಯತೆಗಳ ವ್ಯತ್ಯಾಸವನ್ನು ಗುರುತಿಸುವುದು ವೈಚಾರಿಕತೆಯ ಒಂದು ಮಜಲು.

★ - ★ - ★

# ‘ನಿಮ್ಮ ಊರು ಯಾವುದು?’

‘ನಿಮ್ಮೂರು ಯಾವುದು?’ ‘ನಿಮ್ಮದು ಯಾವೂರಾಯ್ತು?’ ‘ನೀವು ಯಾವ ಕಡೆಯವರು?’ ಇಂತಹ ಪ್ರಶ್ನೆಗಳನ್ನು ನಾವು ಎದುರಿಸುತ್ತಲೇ ಇರುತ್ತೇವೆ. ‘ನಮ್ಮೂರಿನಲ್ಲಿ ಮಳೆ ಇಲ್ಲ’ ಎಂತಲೋ ‘ನಮ್ಮೂರಿನಲ್ಲಿ ಇಂತಹ ಅನನುಕೂಲತೆಗಳಿವೆ’ ಎಂತಲೋ ಜನರು ಹೇಳುವುದನ್ನು ಕೇಳುತ್ತಿರುತ್ತೇವೆ; ಪತ್ರಿಕೆಗಳಲ್ಲಿ ಬರೆಯುವುದನ್ನು ಕಾಣುತ್ತಿರುತ್ತೇವೆ. ನಿಜವಾಗಿ ನಮ್ಮ ಊರು ಅನ್ನುವುದರ ಹಿಂದೆ ಅನೇಕ ಸಂಗತಿಗಳು ಅಡಗಿವೆ. ನಾವು ವಾಸಮಾಡುವ ಊರನ್ನೇ ನಮ್ಮ ಊರು ಎಂದು ತಿಳಿಯಲು ಆಗುವುದಿಲ್ಲ. ಹಾಗಿದ್ದರೆ ಈ ಪ್ರಶ್ನೆ ಅಪ್ರಸ್ತುತವಾಗುತ್ತದೆ. ನಾವು ಯಾವುದೋ ಊರಿನಲ್ಲಿ ವಾಸಿಸುತ್ತಿರಬಹುದು; ಆದರೆ ನಮ್ಮ ಊರು ಬೇರೆಯೇ ಆಗಿರಬಹುದು. ನಮ್ಮ ಊರು ಎಂದರೆ ನಾವು ಹುಟ್ಟಿದ ಊರು ಎಂದೇ, ಬಹಳ ದಿನಗಳನ್ನು ಕಳೆದ ಊರು ಎಂದೇ, ನಾವು ವಾಸಿಸಿರಬಹುದಾದ ಅನೇಕ ಊರುಗಳಲ್ಲಿ ನಮಗೆ ಇಷ್ಟವಾಗಿರುವುದು ಎಂದೇ ಅಥವಾ ನಾವು ಇಷ್ಟಪಟ್ಟು ವಾಸಿಸಿಬೇಕೆಂದುಕೊಂಡಿರುವ ಊರು ಎಂದೇ?

ನಮ್ಮ ದೇಶದ ಬಹಳ ಜನರಿಗೆ ತಾವು ಹುಟ್ಟಿದ ಊರೇ ಬೆಳೆದ ಊರೂ ಆಗಿರುತ್ತದೆ, ವಾಸಿಸುವ ಊರೂ ಆಗಿರುತ್ತದೆ. ಅಲೆಮಾರಿಗಳೋ, ಅರೆ ಅಲೆಮಾರಿಗಳೋ ಆದವರಿಗೆ ಶಾಶ್ವತ ಊರೇ ಇರುವುದಿಲ್ಲ ಎಂಬುದು ನಿಜವಾದರೂ ಅಂಥವರ ಸಂಖ್ಯೆ ಕಡಿಮೆ. ಬಹಳ ಜನ ತಮ್ಮನ್ನು ಒಂದು ಊರಿನೊಡನೆ ಸಮೀಕರಿಸಿಕೊಂಡಿರುತ್ತಾರೆ. ಸಾಮಾನ್ಯವಾಗಿ ಸ್ಥಿರ ನೆಲೆಯಿರುವ ಕುಟುಂಬಗಳಲ್ಲಿ ಮೊದಲ ಮಗು ಹುಟ್ಟುವುದು ತಾಯಿಯ ತವರಿನಲ್ಲಿ; ಮಿಕ್ಕವರೂ ಅಲ್ಲಿ ಹುಟ್ಟಬಹುದು. ಆದರೆ ಅವರು ತಮ್ಮ ಊರು ಎಂದು ಹೇಳಿಕೊಳ್ಳುವುದು ತಂದೆಯ ಮನೆಯಿರುವ ಊರನ್ನೇ. ಇದಕ್ಕೆ ಕಾರಣ ನಾವು ವಂಶವನ್ನು ಗುರುತಿಸುವುದು ತಂದೆಯ ಕಡೆಯಿಂದ; ನಮ್ಮದು ಪಿತೃಸಂತತಿಯ ಕುಟುಂಬಗಳು ಆದ್ದರಿಂದ.

ವರ್ಗಾವಣೆಯ ಕಾರಣದಿಂದ ಬೇರೆ ಬೇರೆ ಕಡೆ ಇರಬೇಕಾಗಿ ಬರುವ ನೌಕರಿಯಲ್ಲಿರುವವರು ‘ನಮ್ಮ ಊರು’ ಎಂಬ ಕೇಂದ್ರವನ್ನು ಹೊಂದಿರುತ್ತಾರೆ; ತಾವು ಬೇರಾವುದೇ ಊರಿನಲ್ಲಿದ್ದರೂ ಆಗಾಗ ಅಲ್ಲಿಗೆ ಹೋಗುತ್ತಾರೆ. ಅವರ

ತಾಯ್ತಂದೆಯರು ಆ ಊರಿನಲ್ಲಿರುತ್ತಾರೆ; ಅಣ್ಣತಮ್ಮಂದಿರಲ್ಲಿ ಒಬ್ಬಿಬ್ಬರೂ ಅಲ್ಲಿರಬಹುದು. ಕೆಲವರು ನೌಕರಿಯಿಂದ ನಿವೃತ್ತರಾದ ಮೇಲೆ ತಮ್ಮ ಊರಿಗೇ ಹೋಗಿ ನೆಲೆಸಬಹುದು. ಕೆಲವರು ತುಂಬ ದೂರದ ಊರಿಗೆ ಹೋಗಿ ಹಣಮಾಡಿ ತಮ್ಮ ಊರಿನ ಏಳಿಗೆಗೆ ಸಹಾಯಮಾಡುವುದನ್ನು ಪತ್ರಿಕಗಳಲ್ಲಿ ಓದುತ್ತೇವೆ. ನಮ್ಮ ಊರು ಎಂದರೆ ಯಾವುದೋ ಒಂದು ಮಧುರ ಭಾವನೆ ನಮ್ಮ ಮನಸ್ಸನಲ್ಲಿ ಮೂಡುತ್ತದೆ. 'ನಮ್ಮ' ಎಂಬ ಪದದಲ್ಲಿ ಆತ್ಮೀಯತೆ ತುಂಬಿರುತ್ತದೆ.

ನಮ್ಮ ಊರು ಎಂಬುವುದರಲ್ಲಿ ತನ್ನದು ಎಂಬ ಅನನ್ಯತೆಯ ಅಥವಾ ಸ್ವಂತದ ಗುರುತಿನ ಭಾವನೆ ಹುದುಗಿದೆ. ಹಾಗಾಗಿ ಯಾವುದೇ ಊರು ನಮ್ಮ ಊರು ಆಗಲು ಸಾಧ್ಯವಿಲ್ಲ. ವ್ಯಕ್ತಿಯ ಇರುವಿಕೆಯ ಮಧ್ಯದ ಬಿಂದು 'ತಾನು' ಎಂಬ ಭಾವನೆ; ಅವನು ಬೆಳೆದಂತೆಲ್ಲ ಆ ಪ್ರಜ್ಞೆಯ ಸುತ್ತಲೂ ಪರಿಧಿ ವಿಸ್ತಾರಗೊಳ್ಳುತ್ತ ಹೋಗುತ್ತದೆ; ವ್ಯಕ್ತಿಯ ಆಂತರಿಕ ಪ್ರವೃತ್ತಿಗನುಗುಣವಾಗಿ ಹಿರಿದಾಗುತ್ತದೆ. ತಾನು ಎನ್ನುವುದರ ಸುತ್ತಲ ಮೊದಲ ಪದರ ತನ್ನ ಕುಟುಂಬ, ಆನಂತರ ತನ್ನ ಕುಟುಂಬದ ಪರಂಪರೆ ಅಥವಾ ಕುಲ, ಆನಂತರ ಊರು – ಇತ್ಯಾದಿ. ಹೀಗಾಗಿ ತಾನು ಎಂಬ ಪ್ರಜ್ಞೆಯ ಎರಡನೆಯ ಸುತ್ತಿನ ಪರಿಧಿಯೇ ತನ್ನ ಊರು ಆದ್ದರಿಂದ ಅದರ ಬಗ್ಗೆ ಮಮತೆ ಬೆಳೆಯುತ್ತದೆ. ಕುವೆಂಪು 'ಹೋಗುವೆನು ನಾ ಹೋಗುವೆನು ನಾ ಹೋಗುವೆನು ನಾ ಮಲೆನಾಡಿಗೆ' ಎಂಬ ಪದ್ಯದಲ್ಲಿ ಹೇಳಿಕೊಳ್ಳುವ ಹಾಗೆ, ಭೌತಿಕವಾಗಿ ಅಲ್ಲದಿದ್ದರೂ ಮಾನಸಿಕವಾಗಿ ತನ್ನ ಊರಿಗೆ ಪಯಣ ಬೆಳೆಸುವಂತಾಗುತ್ತದೆ. ಪೂರ್ತಿ ದೂರದ ದೇಶದಲ್ಲಿಯೇ ಬೆಳೆದಿದ್ದ ಯುವಕನೊಬ್ಬ ತನ್ನ ಊರಿನ ಅಥವಾ ವಂಶದವರು ಬದುಕಿದ್ದ ಊರಿನ ಬಗ್ಗೆ ಹಿರಿಯರಿಂದ ಕೇಳಿ, ಆ ಊರಿಗೇ ಹೋಗಿ ನೆಲಸಿ ಅದರಲ್ಲಿಯೇ ತನ್ನತನವನ್ನು ಕಂಡುಕೊಂಡಂತಹವನ ಕತೆಯನ್ನೇ ಶಿವರಾಮ ಕಾರಂತರ 'ಚಿಗುರಿದ ಕನಸು' ಎಂಬ ಕಾದಂಬರಿ ಹೇಳುತ್ತದೆ.

ಇಂತಹ ಮಮತೆಗೆ ಕಾರಣ ವ್ಯಕ್ತಿತ್ವ ರೂಪಗೊಳ್ಳುವ ಕಾಲದಲ್ಲಿ ಊರಿನೊಡನೆ ಹೊಂದಿದ್ದ ಸಂಬಂಧ. ನಮ್ಮ ಬದುಕಿನಲ್ಲಿ ಗಾಢವಾಗಿ ನೆಲೆಯೂರಿರುವ ಸಂಗತಿಗಳೆಂದರೆ ನಮ್ಮ ಬಾಲ್ಯದ ಅನುಭವಗಳೇ. ನಮ್ಮ ವ್ಯಕ್ತಿತ್ವದ ಪ್ರತಿ ಚೂರೂ ಆಗಿನ ಅನುಭವಗಳಿಂದ ರೂಪುಗೊಂಡಂತಹುದೇ. ಹಾಗಾಗಿ ನಮ್ಮ ಬದುಕಿನ ಅಡಿಗಲ್ಲು ಬಾಲ್ಯ. ಅಂತಹ ಬಾಲ್ಯದ ಎಲ್ಲ ಸಂಗತಿಗಳೊಡನೆ ಊರು ಬೆಸೆದುಕೊಂಡಿರುತ್ತದೆ. ಆಗ ನಡೆದ ಯಾವುದೇ ಘಟನೆ ಅಥವಾ ಸಂಪರ್ಕಕ್ಕೆ ಬಂದ ಯಾವುದೇ ವ್ಯಕ್ತಿ ಊರಿನ ಹಿನ್ನೆಲೆಯಲ್ಲಿಯೇ ತನ್ನ ಬದುಕಿಗೆ ಪ್ರವೇಶಿಸಿರುವುದು. ಹೀಗಾಗಿ ನಮ್ಮ ವ್ಯಕ್ತಿತ್ವದ ಅನನ್ಯತೆಯೊಡನೆ ನಮ್ಮ ಊರು ಸೇರಿರುತ್ತದೆ. ನಮ್ಮ ಹೆಸರಿನ ಜೊತೆಗೆ ಊರಿನ ಹೆಸರನ್ನೂ ಸೇರಿಸಿಕೊಂಡಿರುತ್ತೇವಲ್ಲ; ಆ ಪದ್ಧತಿ ಬರಲು ಕಾರಣ ವ್ಯಕ್ತಿಗೆ ಊರಿನ ಜೊತೆಗಿರುವ ಸಂಬಂಧಧ ಗಾಢತೆಯೇ.

ಬಹು ಕಾಲದಿಂದ ಬೆಂಗಳೂರಿನಲ್ಲಿಯೇ ವಾಸಿಸುತ್ತಿರುವ ನನ್ನಂತಹವನಿಗೆ

ನನ್ನ ಊರು ಯಾವುದು ಎಂಬ ಪ್ರಶ್ನೆ ಕೆಲವೊಮ್ಮೆ ಕಕ್ಕಾಬಿಕ್ಕಿಯಾಗುವಂತೆ ಮಾಡುತ್ತದೆ. ನಾನು ಹುಟ್ಟಿದ್ದು ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ಒಂದು ಹಳ್ಳಿಯಲ್ಲಿ. ಆದರೆ ಸ್ವಲ್ಪ ಕಾಲಕ್ಕೇ ಯಾವುದೋ ಕಾರಣಕ್ಕೆ ನಮ್ಮ ತಂದೆ ಆ ಊರನ್ನು ಬಿಟ್ಟು ಬೆಂಗಳೂರಿಗೆ ಬಂದು ಒಂದು ಸಣ್ಣ ಸರ್ಕಾರಿ ನೌಕರಿ ಹಿಡಿದು ಇಲ್ಲಿಯೇ ನೆಲಸಿದರು. ನಾನು ಆ ಮೇಲೆ ನಾಲ್ಕು ವರ್ಷಗಳ ಕಾಲ, ಅಂದರೆ ನಾಲ್ಕರಿಂದ ಎಂಟನೆಯ ತರಗತಿಯವರೆಗೆ, ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ಒಂದು ಸಣ್ಣ ಹಳ್ಳಿಯಲ್ಲಿ ತಾಯಿಯ ತಂದೆಯ ಮನೆಯಲ್ಲಿದ್ದುಕೊಂಡು ಓದಿದೆ. ಜೀವನದ ಆರಂಭದಲ್ಲಿ ನನಗೆ ಹಳ್ಳಿಯ ವಾತಾವರಣ ಇರದಿದ್ದರೂ, ಬಾಲ್ಯದ ಬಹು ಮುಖ್ಯವಾದ ಅವಧಿಯಲ್ಲಿ ತಾತನ ಊರಿನ ಪರಿಸರ ನನ್ನ ಮೇಲೆ ಗಾಢವಾದ ಪರಿಣಾಮ ಬೀರಿದೆ. ಈಗಲೂ ನನ್ನ ನೆನಪಿನ ಸಂಗ್ರಹದಲ್ಲಿರುವ ಅಮೂಲ್ಯ ಅನುಭವಗಳು ಆ ಹಳ್ಳಿಯಲ್ಲಿದ್ದ ಕಾಲದವು. ಹಳ್ಳಿಯ ಬದುಕಿನ ಅಲ್ಪಸ್ವಲ್ಪ ತಿಳಿವಳಿಕೆ ನನಗೆ ಬಂದಿರುವುದು ಅಲ್ಲಿನ ನನ್ನ ಇರುವಿಕೆಯ ಕಾರಣದಿಂದ.

ಈ ಕಾರಣದಿಂದ, ಅಂದರೆ ನನ್ನ ಬಾಲ್ಯ ಮೂರು ಊರುಗಳಿಗೆ ಸಂಬಂಧಿಸಿದಂತೆ ನಡೆದಿರುವುದರಿಂದ, ಈಗ ನನ್ನನ್ನು ಯಾರಾದರೂ 'ನಿಮ್ಮ ಊರು ಯಾವುದು?' ಎಂದು ಕೇಳಿದರೆ ಕಕ್ಕಾವಿಕ್ಕಿಯಾಗುತ್ತದೆ. ನಾನು ಹುಟ್ಟಿದ ಊರು, ಅದೇ ನಮ್ಮ ವಂಶದ ಹಿರಿಯರ ಊರು, ನನ್ನ ಊರು ಎನ್ನುವುದು ಹೇಗೆ? ಏಕೆಂದರೆ ತಿಳಿವಳಿಕೆ ಬರುವ ಮೊದಲೇ ಆ ಊರಿನಿಂದ ಹೊರಬಂದಿದ್ದೆ. ಬಾಲ್ಯದ ನಾಲ್ಕು ವರ್ಷಗಳನ್ನು ಕಳೆದ ತಾತನ ಊರನ್ನೇ ನಮ್ಮ ಊರು ಎನ್ನಲೇ? ಊರು ಬಿಟ್ಟ ಹೊಸತರಲ್ಲಿ ಕೆಲವು ಸಲ ಬಿಟ್ಟರೆ, ಆನಂತರ ಅಲ್ಲಿಗೆ ಹೋಗಲೇ ಇಲ್ಲ. ನನ್ನನ್ನು ಸಾಕಿದ ಅಜ್ಜಿತಾತಂದಿರೂ ಅಲ್ಲಿಂದ ಬೆಂಗಳೂರಿಗೇ ಬಂದುಬಿಟ್ಟರು. ಬಹು ದೀರ್ಘ ಕಾಲ ಬಾಳಿರುವ ಬೆಂಗಳೂರನ್ನು ನನ್ನ ಉರು ಎನ್ನಲೇ. ಇಲ್ಲಿನ ನನ್ನ ಅನುಭವಗಳಾವುವೂ ಬಾಲ್ಯದವಲ್ಲ. ಅಲ್ಲದೆ, ಬೆಂಗಳೂರನ್ನು ಯಾರಾದರೂ ನನ್ನ ಉರು ಎಂದುಕೊಳ್ಳಲು ಸಾಧ್ಯವೇ ಎಂದು ನನಗನ್ನಿಸಿದೆ. ಏಕೆಂದರೆ ಬೆಳವಣಿಗೆಯ ಸ್ವರೂಪದಿಂದಾಗಿ ಇದಕ್ಕೆ ಖಚಿತವಾದ ಆಕಾರವೇ ಇಲ್ಲ. ಆದರೆ ನನ್ನ ತೃಪ್ತಿಗಾಗಿ ಬಾಲ್ಯ ಕಳೆದ ಹಳ್ಳಿಯನ್ನೇ ನನ್ನ ಊರು ಎಂದು ಭಾವಿಸುವಂತಾಗುತ್ತದೆ. ಆದರೆ ನಮ್ಮ ಊರಿನ ಬಗ್ಗೆ ನನಗೆ ಗೊಂದಲವೇ ಇದೆ. ಈ ಬಗ್ಗೆ ಯೋಚಿಸಿದಾಗ 'ನಮ್ಮ ಊರು' ಎಂದು ಆಪ್ತವಾಗಿ ಹೇಳಿಕೊಳ್ಳುವ ಅವಕಾಶ ನನಗಿಲ್ಲವಲ್ಲ ಎಂಬ ಕೊರತೆ ನನ್ನನ್ನು ಕಾಡುತ್ತದೆ.

☆ – ☆ – ☆

# 'ಮೇಲ್ಮನೆ' ಎಂಬ ಪುನರ್ವಸತಿ ನಿಲಯ

'ಮೇಲ್ಮನೆ' ಎಂದಿಲ್ಲಿ ನಾನು ಸೂಚಿಸುತ್ತಿರುವುದು ವಿಧಾನ ಪರಿಷತ್ತು ಮತ್ತು ರಾಜ್ಯಸಭೆಗಳನ್ನು ಕುರಿತು. ನಮ್ಮದು ದ್ವಿಸದನ ಸಂಸತ್ತು; ಅದರಲ್ಲಿ ಎರಡು ಸದನಗಳು, ನೇರವಾಗಿ ಜನರಿಂದ ಆಯ್ಕೆಯಾಗುವ ಸದಸ್ಯರನ್ನುಳ್ಳ (ಕ್ರಮವಾಗಿ ಕೇಂದ್ರದಲ್ಲಿ ಮತ್ತು ರಾಜ್ಯದಲ್ಲಿ) ಲೋಕಸಭೆ ಅಥವಾ ವಿಧಾನಸಭೆ ಮತ್ತು ವಿವಿಧ ಕ್ಷೇತ್ರಗಳನ್ನು ಪ್ರತಿನಿಧಿಸುವ ರಾಜ್ಯಸಭೆ ಮತ್ತು ವಿಧಾನ ಪರಿಷತ್ತು. ನೇರವಾಗಿ ಆಯ್ಕೆಗೊಳ್ಳುವ ಜನಪ್ರತಿನಿಧಿಗಳು ಎಲ್ಲರ ಆಶೋತ್ತರಗಳನ್ನು ಬಿಂಬಿಸುವರು ಎಂಬುದಾದರೆ, ಸಮಾಜದ ವಿವಿಧ ವಲಯಗಳನ್ನು ಪ್ರತಿನಿಧಿಸಲೆಂದು ಇರುವವರು ಈ ಮೇಲ್ಮನೆಯ ಸದಸ್ಯರು. ಚುನಾವಣೆಯ ಮೂಲಕ ಆಯ್ಕೆಮಾಡುವುದು ಅನಪೇಕ್ಷಣಿಯ ಎನ್ನುವೆಡೆಗಳಲ್ಲಿ ಆಯಾ ಕ್ಷೇತ್ರಗಳ ಗಣ್ಯರನ್ನು ನಾಮಕರಣ ಮಾಡಲೂ ಅವಕಾಶವಿರುತ್ತದೆ.; ಕೇಂದ್ರದಲ್ಲಿ ರಾಷ್ಟ್ರಪತಿಗಳು ಮತ್ತು ರಾಜ್ಯಗಳಲ್ಲಿ ಆಯಾ ರಾಜ್ಯಪಾಲರು ಸರ್ಕಾರಗಳ ಶಿಫಾರಸಿನ ಮೇಲೆ ನಾಮಕರಣ ಮಾಡುತ್ತಾರೆ. ಹೀಗೆ ಸಮಾಜದಲ್ಲಿ ವ್ಯಾಪಕವಾಗಿಲ್ಲದ ವರ್ಗಗಳಿಗೂ ಪ್ರಾತಿನಿಧ್ಯ ಸಿಕ್ಕಬೇಕೆಂಬುದು ಈ ವ್ಯವಸ್ಥೆಯ ಆಶಯ.

ಇದು ಆಶಯವಾದರೆ ವಾಸ್ತವ ಇದಕ್ಕಿಂತ ಭಿನ್ನ. ಆಳುವ ಪಕ್ಷದವರಿಗೆ ಬೇಕಾದವರನ್ನು ನಾಮಕರಣ ಮಾಡಿ ತಮ್ಮ ಬಲ ಹೆಚ್ಚಿಸಿಕೊಳ್ಳುವ ಹಂಬಲ. ರಾಜ್ಯಮಟ್ಟದಲ್ಲಿಯೂ ಕೇಂದ್ರದಲ್ಲಿಯೂ ನಡೆಯುವುದು ಇದೇ. ಅಲ್ಲದೆ ಮೇಲ್ಮನೆ ನಿರಂತರವಾದ ಸದನ. ಪ್ರತಿ ಎರಡು ವರ್ಷಕ್ಕೊಮ್ಮೆ ಮೂರನೇ ಒಂದು ಭಾಗದಷ್ಟು ಸದಸ್ಯರು ನಿವೃತ್ತರಾಗಿ ಅವರ ಬದಲಿಗೆ ಹೊಸಬರು ಬರುತ್ತಾರೆ. ಅಂದರೆ ವಿಧಾನಸಭೆ ಮತ್ತು ಲೋಕಸಭೆಗಳನ್ನು ವಿಸರ್ಜಿಸಿ ಹೊಸ ಚುನಾವಣೆಗಳನ್ನು ನಡೆಸಿ ಪುನಾರಚಿಸುವ ಹಾಗೆ ಇವುಗಳನ್ನು ಮಾಡಲಾಗುವುದಿಲ್ಲ. ಹೀಗಾಗಿ ಅದಕ್ಕೆ ಕೊನೆ ಎಂಬುದಿಲ್ಲ. ಚುನಾವಣೆಗಳನ್ನೆದುರಿಸಲಾಗದವರು ಮೇಲ್ಮನೆಯ ಸದಸ್ಯರಾಗಲು ಹಾತೊರೆಯುವುದು ಈ ಕಾರಣಕ್ಕಾಗಿಯೇ. ವಿಧಾನ ಪರಿಷತ್ತಿನ ಸದಸ್ಯರು ವಿವಿಧ ಕ್ಷೇತ್ರಗಳಿಂದ – ಅಂದರೆ ಶಿಕ್ಷಕರು, ಪದವೀಧರರು, ಸ್ಥಳಿಯ ಸಂಸ್ಥೆಗಳು – ಪರೋಕ್ಷವಾಗಿ ಆಯ್ಕೆಯಾದರೆ ರಾಜ್ಯಸಭೆಗೆ ರಾಜ್ಯದ ಚುನಾಯಿತ ಪ್ರತಿನಿಧಿಗಳಿಂದ ಸದಸ್ಯರು ಆಯ್ಕೆಗೊಳ್ಳುತ್ತಾರೆ.

ಈಗ ರಾಜ್ಯಸಭೆಯ ಚುನಾವಣೆಯ ಕಾಲ. ಜನರಿಂದ ನೇರವಾಗಿ ಆಯ್ಕೆಗೊಂಡ ಪ್ರತಿನಿಧಿಗಳು ನಮ್ಮ ರಾಜ್ಯವನ್ನು ಪ್ರತಿನಿಧಿಸಲು ನಾಲ್ಕು ಜನರನ್ನು ಚುನಾಯಿಸಬೇಕಾಗಿದೆ. ಇಲ್ಲಿಯ ಆಯ್ಕೆ ಪ್ರಾಶಸ್ತ್ಯ ವಿಧಾನದ್ದು; ಅಂದರೆ ಸ್ಪರ್ಧಿಸಿರುವ ಅಭ್ಯರ್ಥಿಗಳಲ್ಲಿ ಯಾರ ಬಗ್ಗೆ ಗರಿಷ್ಠ ಒಲವಿದೆಯೋ ಅವರನ್ನು ಮೊದಲ ಆಯ್ಕೆ ಎಂದೂ, ನಂತರದವರನ್ನು ಎರಡನೇ ಆಯ್ಕೆ ಎಂದೂ – ಹೀಗೆ ನಮೂದಿಸಬೇಕು. ಪರಿಸ್ಥಿತಿಗನುಗುಣವಾಗಿ, ಒಂದೊಂದು ಆಯ್ಕೆಗೂ ಒಂದೊಂದು ಬೆಲೆ. ಅದಕ್ಕನುಗುಣವಾಗಿ ಪಡೆದ ವಿವಿಧ ಆದ್ಯತೆಯ ಮತಗಳ ಮೌಲ್ಯವನ್ನು ಸೇರಿಸಿ ಚುನಾಯಿತರೆಂದು ಘೋಷಿಸಲಾಗುತ್ತದೆ. ಅದರ ಪ್ರಕಾರ ಈಗಿನ ಚುನಾವಣೆಯಲ್ಲಿ ಚುನಾಯಿತರಾಗಲು ಅಭ್ಯರ್ಥಿಯು ನಲವತ್ತೈದು ಮೊದಲ ಪ್ರಾಶಸ್ತ್ಯದ ಮತಗಳನ್ನು ಪಡೆದರೆ ಮಿಕ್ಕ ಪ್ರಾಶಸ್ತ್ಯದ ಮತಗಳನ್ನು ಗಣಿಸದೆಯೇ ನಿಗದಿತ ಮೌಲ್ಯದ ಆದ್ಯತೆಯನ್ನು ಗಳಿಸಿದಂತಾಗಿ ಚುನಾಯಿತನಾಗುತ್ತಾನೆ. ನಮ್ಮ ವಿಧಾನಸಭೆಯಲ್ಲೀಗ ಮೂರು ಪ್ರಮುಖ ಪಕ್ಷಗಳು; ಮೂರು ಮಂದಿ ಆಯಾ ಪಕ್ಷಗಳ ಆದೇಶದಂತೆ ಆಯಾ ಪಕ್ಷದ ಅಭ್ಯರ್ಥಿಗಳಿಗೆ ಮೊದಲ ಪ್ರಾಶಸ್ತ್ಯದ ಮತಗಳನ್ನು ನೀಡುವುದರಿಂದ ಮೂರು ಮಂದಿಯ ಗೆಲವು ಖಚಿತ. ಆದರೆ ಈಗ ಆಯ್ಕೆ ಮಾಡಬೇಕಾಗಿರುವುದು ನಾಲ್ಕು ಮಂದಿಯನ್ನು. ಎಲ್ಲ ಪಕ್ಷಗಳಲ್ಲೂ ಕೆಲವು ಹೆಚ್ಚಿನ ಸದಸ್ಯರಿದ್ದಾರೆ, ಅಲ್ಲದೆ ಪಕ್ಷೇತರರೂ ಇದ್ದಾರೆ. ಅವರೆಲ್ಲರ ಮತಗಳನ್ನು ಒಗ್ಗೂಡಿಸಿ ನಾಲ್ಕನೆಯವರು ಗೆಲ್ಲಬೇಕಾಗಿದೆ.

ಪಕ್ಷಗಳು ತಮ್ಮ ಅಭ್ಯರ್ಥಿಗಳನ್ನು ಆರಿಸುವುದಕ್ಕೆ ಅನುಸರಿಸುತ್ತಿರುವ ಮಾನದಂಡಗಳು ಎರಡು; ಒಂದು ಪಕ್ಷದಲ್ಲಿನ ಹಿರಿಯತನ ಮತ್ತು ಅಲ್ಲಿ ಗಳಿಸಿರುವ ಪ್ರಾಧಾನ್ಯ, ಮತ್ತು ಎರಡು ಹಣಬಲ. ಯಾರು ಏನೇ ಆದರ್ಶ ಹೇಳಲಿ ಪಕ್ಷಗಳೆಲ್ಲ ಹಣವಂತರ ಕೈಬೊಂಬೆಗಳೇ. ಹೀಗಾಗಿ ಪಕ್ಷಕ್ಕೆ ಹಣ ನೀಡುವವರನ್ನು ಅವರು ಅಭ್ಯರ್ಥಿಗಳಾಗಿ ಮಾಡಲು ಹಾತೊರೆಯುತ್ತಾರೆ. ಹಣವಂತರು ನೇರವಾಗಿ ಚುನಾವಣೆಗೆ ನಿಲ್ಲುವ ಮನೋಭಾವದವರಲ್ಲ; ಅವರೇನಿದ್ದರೂ ರಾಜಕಾರಣಿಗಳೆಂಬ ಬೊಂಬೆಗಳ ಚಲನೆಯನ್ನು ನಿಯಂತ್ರಿಸುವ ಸೂತ್ರಧಾರನ ಪಾತ್ರ ವಹಿಸಲು ಇಷ್ಟಪಡುವವರು. ರಾಜಕಾರಣಿಗಳಿಗೆ ಹಣ ಬೇಕು, ಅದರಿಂದ ಹೆಚ್ಚು ರಾಜಕೀಯ ಶಕ್ತಿಯನ್ನು ಕೊಳ್ಳಲು ಅನುಕೂಲ; ಹಣವುಳ್ಳವರಿಗೆ ರಾಜಕೀಯ ಬೆಂಬಲ ಬೇಕು, ಅದರಿಂದ ಮತ್ತಷ್ಟು ಹಣ ಗಳಿಕೆ ಸುಲಭ. ಹೀಗೆ ಚುನಾವಣೆ ಎಂದರೆ ಹಣ(ರಾಜ)ಕಾರಣ. ಮೊದಲಿನಿಂದ ನಡೆದು ಬಂದದ್ದೇ ಇದು.

ಪ್ರಸ್ತುತ ಚುನಾವಣೆಯಲ್ಲಿ ನಾಲ್ಕನೆಯ ಅಭ್ಯರ್ಥಿಯನ್ನಾಗಿ ಪಕ್ಷೇತರರಾದ ಉದ್ಯಮಿಯೊಬ್ಬರನ್ನು ಆಡಳಿತ ಪಕ್ಷಗಳು ನಿಲ್ಲಿಸಿವೆ. ಈ ವ್ಯಕ್ತಿ ಈ ನಾಡಿನವನಲ್ಲ, ಅಂತಹವರಿಗೆ ಹಣವೇ ತಾಯ್ನಾಡು, ಹ(ಝು)ಣತ್ಕಾರವೇ ತಾಯ್ನುಡಿ. ಅವರ ನಿಷ್ಠೆ ಅದಕ್ಕೆ ಮಾತ್ರ. ಅಂತಹವರು ರಾಜ್ಯದ ಪ್ರತಿನಿಧಿಯಾಗಿ ರಾಜ್ಯದ ಹಿತವನ್ನೇನು

ಸಾಧಿಸಬಲ್ಲರು ಎಂಬುದು ಪ್ರಶ್ನೆ. ಹಿಂದಿನಿಂದಲೂ ಈ ರೋಗ ನಮ್ಮ ಎಲ್ಲ ಪಕ್ಷಗಳನ್ನೂ ಪೀಡಿಸುತ್ತಿದೆ. ಲೋಕಸಭೆಗೆ ಕೂಡ ಅನ್ಯರನ್ನು ಕರೆದು ಅಭ್ಯರ್ಥಿಗಳನ್ನಾಗಿಸಿ ಗೆಲ್ಲಿಸಿ ಪಕ್ಷಗಳು ತಮ್ಮ ಹಿತವನ್ನೇ ಮುಖ್ಯವನ್ನಾಗಿ ಮಾಡಿಕೊಂಡಿವೆ. ತುಮಕೂರಿನಿಂದ, ಚಿಕ್ಕಮಗಳೂರಿನಿಂದ ಇಂತಹ ಅಭ್ಯರ್ಥಿಗಳಿಗೆ ತಮ್ಮ ಸ್ವಂತ ಊರನ್ನೇ ಬಿಟ್ಟುಕೊಟ್ಟು ಗುಲಾಮತನವನ್ನು ಪ್ರದರ್ಶಿಸಿದ ದೇಶಭಕ್ತರ ನೆನಪಾಗುತ್ತದೆ. ಹಾಗೆಯೇ ಈ ಹಿಂದೆ ರಾಜ್ಯಸಭೆಗೂ ಅನ್ಯರನ್ನು ಕರೆತಂದಾಗ ಪ್ರತಿಪಕ್ಷದಲ್ಲಿದ್ದ ಧುರೀಣರು ಅದನ್ನು ವಿರೋಧಿಸಿದ್ದರು; ಅವರೇ ಒಂದು ಪಕ್ಷದ ವರಿಷ್ಠರೆನಿಸಿಕೊಂಡಾಗ ಅವರು ಮಾಡಿದ್ದೂ ಅದನ್ನೇ. ಬೇರೆಯವರಿಗೆ ಹಿಂದಿನ ಚುನಾವಣೆಯ ಸಂದರ್ಭದಲ್ಲಿ ಒಂದು ಪಕ್ಷ ಆಂಧ್ರದ ತನ್ನ ವ್ಯಕ್ತಿಯೊಬ್ಬನನ್ನು ಚುನಾವಣೆಗೆ ನಿಲ್ಲಿಸಿ ಗೆಲ್ಲಿಸಿತು. (ವ್ಯಕ್ತಿಗಳ ಹೆಸರುಗಳನ್ನು ನಾನು ಉದ್ದೇಶಪೂರ್ವಕವಾಗಿ ಹೇಳುತ್ತಿಲ್ಲ; ಅದಕ್ಕೆ ಕಾರಣ ಅಂತಹವರ ಹೆಸರನ್ನು ಉಚ್ಚರಿಸಲೂ ನನಗಿರುವ ಹೇಸಿಕೆಯ ಭಾವನೆ). ಅಂತಹ ಒಬ್ಬ ಪ್ರತಿನಿಧಿ ನಮ್ಮ ರಾಜ್ಯದ ವಿಷಯ ಪ್ರಸ್ತಾಪಿತವಾದಾಗ "ನಾನು ರಾಷ್ಟ್ರೀಯ ನಾಯಕ" ಎಂದುಕೊಂಡ. ಭಾರತವಿಲ್ಲದೆ ಕರ್ನಾಟಕ ಇರಬಲ್ಲುದು, ಆದರೆ ಕರ್ನಾಟಕ (ಮತ್ತು ಅಂತಹ ಇತರ ವಲಯಗಳು) ಇಲ್ಲದೆ ಭಾರತವಿರಲಾರದು ಎಂಬ ಮೂಲಭೂತ ಪ್ರಜ್ಞೆಯೂ ಇಲ್ಲದಿರುವ ಇಂತಹವರಿಂದ ರಾಜ್ಯಕ್ಕೇನು ಲಾಭ?

ರಾಜ್ಯಸಭೆ ಎಂದರೆ ರಾಜ್ಯಗಳ ಹಿತವನ್ನು ಕಾಪಾಡಬಲ್ಲ ಸದಸ್ಯರ ಸಭೆ ಎಂದೇ ಅರ್ಥ. ಹೊರಗಿನವನು ಇಲ್ಲಿನ ವಾಸ್ತವಾಂಶಗಳು, ವೈಶಿಷ್ಟ್ಯಗಳು ಮತ್ತು ಸಮಸ್ಯೆಗಳನ್ನು ಪ್ರತಿನಿಧಿಸಲಾರ. ಆದ್ದರಿಂದ ಆಯಾ ರಾಜ್ಯವನ್ನು ಪ್ರತಿನಿಧಿಸುವವರು ಆಯಾ ರಾಜ್ಯಗಳವರೇ ಆಗಿರಬೇಕೆಂಬ ನಿಯಮವನ್ನು ಚುನಾವಣಾ ಆಯೋಗ ಅಭ್ಯರ್ಥಿಗಳಾಗಬಯಸುವವರಿಗೆ ವಿಧಿಸಬೇಕು. ಇಲ್ಲದಿದ್ದರೆ ರಾಜ್ಯದ ಹಿತವನ್ನು ಪಕ್ಷಕ್ಕೆ ಹಣ ಸಂಪಾದಿಸುವ ಸಲುವಾಗಿ ಬಲಿಗೊಡುವುದು ನಿಲ್ಲುವುದಿಲ್ಲ. ಇದಕ್ಕೆ ಅಡ್ಡಿ ಬರುವ 'ಪೌರತ್ವ'(citizenship)ವನ್ನು ಕುರಿತ ನಮ್ಮ ಸಂವಿಧಾನದ ಎರಡನೆಯ ಅಧ್ಯಾಯವನ್ನು ಬದಲಾಯಿಸಬೇಕು. ದ್ವಿಪೌರತ್ವ ನೀತಿ ಜಾರಿಯಾಗಿ, ಪ್ರತಿಯೊಬ್ಬನೂ ಭಾರತದ ಪ್ರಜೆ ಹಾಗೂ ಆಯಾ ರಾಜ್ಯದ ಪ್ರಜೆ ಎಂಬ ಖಚಿತ ನಿಲವನ್ನು ಸಾರಿ, ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ವಲಸೆ ಬಂದ ವ್ಯಕ್ತಿ ಸಹಜೀಕರಣ ಪ್ರಕ್ರಿಯೆಯನ್ನು ಪೂರ್ಣಗೊಳಿಸುವವರೆಗೆ (ಇದಕ್ಕೆ ಬೇಕಾದ ನಿಯಮಗಳನ್ನು ರೂಪಿಸಬೇಕು) ರಾಜ್ಯದಲ್ಲಿ ಆಸ್ತಿ ಹೊಂದುವ, ಮತದಾರನಾಗುವ ಮತ್ತು ಚುನಾವಣೆಯ ಅಭ್ಯರ್ಥಿಯಾಗುವ ಅವಕಾಶ ತಪ್ಪಿಸಬೇಕು. ಇದರಿಂದ ಮಾತ್ರ ಪ್ರಾದೇಶಿಕ ಹಿತ ಸಾಧನೆ ಸಾಧ್ಯ.

☆ - ☆ - ☆

# ‘ಲಂಚಲುಂಚಾನಿಶಾಚರ’

ಈಚೆಗೆ ಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ ಲಂಚದ ಸುದ್ದಿ ತುಂಬ ಬರುತ್ತಿದೆ. ಭಾರತೀಯರು, ಅದರಲ್ಲೂ ಪೋಲೀಸರು, ಲಂಚ ತಿನ್ನುವುದರಲ್ಲಿ ಬಹುನಿಷ್ಣಾತರು ಎಂದು ಅಂತಾರಾಷ್ಟ್ರೀಯ ಪ್ರಶಸ್ತಿಗಳೂ ಬಂದಿವೆಯಂತೆ. ಜಗತ್ತಿನ ಮಟ್ಟದಲ್ಲಿ ಭಾರತ ಮೊದಲ ಸ್ಥಾನದಲ್ಲಿರುವುದು ಇದರಲ್ಲಿ ಮಾತ್ರವೇ ಎಂಬುದು ನಮ್ಮ ಹೆಮ್ಮೆ! ಏಕೆಂದರೆ ಇದು ನಮ್ಮ ಪರಂಪರೆಯ ಒಂದು ಭಾಗವೇ ಆಗಿದೆ. ಯಾವುದರಲ್ಲಾದರೂ ಸಾಧನೆ ಮಾಡಿ ಹೆಗ್ಗಳಿಕೆಯನ್ನು ಪಡೆಯುವುದು ಸಾಮಾನ್ಯವೇನಲ್ಲ!

ಸುಮಾರು ಹತ್ತನೇ ಶತಮಾನದ ಕನ್ನಡಿಗನೇ ಆದ ಸೋಮದೇವ ಎಂಬ ಕವಿಯ ‘ಯಶಸ್ತಿಲಕ ಚಂಪೂ’ ಎಂಬ ಸಂಸ್ಕೃತ ಕಾವ್ಯದಲ್ಲಿ ಗೂಢಚಾರನೊಬ್ಬ ಮಂತ್ರಿಯೊಬ್ಬನ ಚಲನಚಲನಗಳನ್ನು ಗಮನಿಸಿ ರಾಜನಿಗೆ ರಹಸ್ಯವಾಗಿ ವರದಿ ನೀಡುತ್ತಾನೆ. ಆಗ ಅವನು ಆ ಮಂತ್ರಿಯನ್ನು ವರ್ಣಿಸುವುದು ‘ಲಂಚಲುಂಚಾ ನಿಶಾಚರ’ ಎಂದು; ಅಂದರೆ ಲಂಚ ಕೀಳುವ ರಾಕ್ಷಸ ಅಥವಾ ಪಿಶಾಚಿ ಎಂದು. ನಿಶಾಚರ ಎಂದರೆ ರಾತ್ರಿ ತಿರುಗುವವನು; ಹಾಗೆ ಮಾಡುವವನು ರಾಕ್ಷಸನಾದರೂ ಆಗಬಹುದು, ಪಿಶಾಚನಾದರೂ ಆಗಬಹುದು. ಇಬ್ಬರೂ ಕ್ರೂರಿಗಳೇ ತಾನೇ? ಒಟ್ಟಿನಲ್ಲಿ ಈ ಮಾತಿನಿಂದ ಎರಡು ಅಂಶಗಳು ಹೊರಬರುತ್ತವೆ: ಲಂಚವನ್ನು ‘ಕೀಳ’ಬೇಕು ಮತ್ತು ಅದು ರಾತ್ರಿ ಅಥವಾ ಕತ್ತಲಿನ, ಅಂದರೆ ಬೇರಾರಿಗೂ ತಿಳಿಯದ ಹಾಗೆ ಮಾಡಬೇಕಾದ ಕೆಲಸ ಎಂಬುದು. ರಾಜಾರೋಷವಾಗಿ ಕಿತ್ತರೆ ಅದು ದರೋಡೆಯಾಗಬಹುದು, ಲಂಚ ಆಗಲಾರದು. ಹರಿಹರ ಕವಿಯ ‘ಬಸವರಾಜ ದೇವರ ರಗಳೆ’ಯಲ್ಲಿ ಒಂದು ಪ್ರಸಂಗವಿದೆ. ಬಸವಣ್ಣ ಶಿವನ ಮತ್ತು ಗುರುಗಳ ಆದೇಶದಂತೆ ಕೂಡಲಸಂಗಮ ಎಂಬ ಊರಿನಿಂದ ರಾಜಧಾನಿಯಾದ ಮಂಗಳವೇಡೆಗೆ ಭವಿಷ್ಯವನ್ನು ಹುಡುಕಿಕೊಂಡು ಬರುತ್ತಾನೆ. ಹಾಗೆ ಬರುವಾಗ ಆತ ತನಗೆ ಅಕ್ಷರಜ್ಞಾನವಿದೆ, ಅದನ್ನೇ ಬಳಸಿಕೊಂಡು ‘ಗಣಕ’ನಾಗಿ ಉಪಜೀವನವನ್ನು ಕಂಡುಕೊಳ್ಳುತ್ತೇನೆ ಎಂಬ ನಿರ್ಧಾರ ಮಾಡುತ್ತಾನೆ. ಬರುವಾಗ ಒಬ್ಬ ಗಣಕನ ವೇಷವನ್ನು ಧರಿಸಿಯೇ ಬರುತ್ತಾನಂತೆ. ಬಸವಣ್ಣ ಬರುವುದು ನೇರವಾಗಿ ಬಿಜ್ಜಳ ಮಹಾರಾಜನ ಭಂಡಾರಕ್ಕೆ ಅಂದರೆ ಖಜಾನೆಗೆ. ಬಸವಣ್ಣ ಸರ್ಕಾರಿ ಹುದ್ದೆಯೊಂದನ್ನು ಬಯಸಿ ರಾಜಧಾನಿಗೆ ಬಂದಂತಾಯಿತು. ಹಳ್ಳಿಯ ಹುಡುಗನಾದ ಅವನಿಗೆ ಅಲ್ಲಿ ನಿಬ್ಬೆರಗು.

ನೂರಾರು ಜನ ಅಲ್ಲಿ ಓಡಾಡುತ್ತಿರುತ್ತಾರೆ. ಅವರಲ್ಲಿ ಕೆಲವರು ಭಂಡಾರದ ಅಧಿಕಾರಿಗಳಿಗೆ ಲಂಚ ನೀಡುತ್ತಿರುವುದೂ ಕಾಣಿಸುತ್ತದಂತೆ! ಅಂದರೆ ಬಸವಣ್ಣನಿಗೆ ನಗರದಲ್ಲಿ ಮೊದಲು ಕಣ್ಣಿಗೆ ಬಿದ್ದದ್ದು ಲಂಚ ಸ್ವೀಕರಿಸುವ ದೃಶ್ಯ.

ಆ ಪರಂಪರೆಯೇ ಇಂದೂ ಮುಂದುವರಿಯುತ್ತಿದೆ. ಎಲ್ಲಿ ನೋಡಿದರೂ ಮೊದಲು ಕಣ್ಣಿಗೆ ಬೀಳುವ ದೃಶ್ಯವೇ ಲಂಚ ಸ್ವೀಕಾರದ್ದು. ಆದರೆ ಹಿಂದೆಯೇ ನೋಡಿದಂತೆ ಅದು ಕತ್ತಲ ವ್ಯವಹಾರವಲ್ಲವೇ? ಹಾಗಾಗಿ ಅದು ಕಣ್ಣಿಗೆಲ್ಲಿ ಬೀಳುತ್ತದೆ? ಪ್ರಾಯಶಃ ಅದರರ್ಥ ಅನುಭವಕ್ಕೆ ಬಂದದ್ದು ಎಂದು ಕಾಣುತ್ತದೆ. ಆದರೆ ಬಸವಣ್ಣನನ್ನು ಯಾರೂ ಲಂಚ ಕೇಳಿರಲಿಕ್ಕಿಲ್ಲ. ಯಾಕಂದರೆ ಅವನು ಆವರೆಗೆ ಯಾರನ್ನೂ ಏನೂ ಕೇಳಿರಲೇ ಇಲ್ಲ; ಆದರೆ ಕೆಲವರು ವ್ಯವಹಾರ ಮಾಡುತ್ತಿದ್ದ ರೀತಿಯನ್ನು ನೋಡಿಯೇ ಆತನಿಗೆ ಅದು ಲಂಚದ ವ್ಯವಹಾರ ಎಂದು ತಿಳಿದುಹೋಯಿತು. ಅಷ್ಟು ಸೂಕ್ಷ್ಮ ಬುದ್ಧಿ ಅವನದು. ಹಣ ಕೈಬದಲಾಯಿಸುವುದನ್ನು ಕಾಣುವವನು ಅದು ವ್ಯವಹಾರವೇ ಲಂಚವೇ ಎಂದು ತಿಳಿದುಕೊಳ್ಳುವುದು ಸೂಕ್ಷ್ಮ ಮತಿಗೆ ಮಾತ್ರ ಸಾಧ್ಯ. ಬಸವಣ್ಣ ಅಲ್ಲಿ ಕೆಲಸಕ್ಕೆ ಸೇರಿ ಮುಂದೆ ಭಂಡಾರದ ಮುಖ್ಯ ಅಧಿಕಾರಿಯಾಗುತ್ತಾನೆ. ಅವನ ಏಳಿಗೆಯನ್ನು ಸಹಿಸದ ಕೆಲವರು ಅವನ ಮೇಲೂ ಹಣ ದುರುಪಯೋಗದ ಆರೋಪ ಹೊರಿಸುತ್ತಾರೆ. ಅದನ್ನು ಪರೀಕ್ಷೆ ಮಾಡ ಹೋಗಿ ರಾಜ ಬೇಸ್ತು ಬಿದ್ದು ತಾನೇ ತಪ್ಪು ದಂಡ ಕೊಡುತ್ತಾನಂತೆ. ಅದು ಬೇರೆಯೇ ಕತೆ, ಇಲ್ಲಿ ಅಪ್ರಸ್ತುತ.

ಲಂಚದ ಆಪಾದನೆಗಳನ್ನು ಬಯಲಿಗೆಳೆಯಲು ಪರೀಕ್ಷೆಗೊಳಪಡಿಸಲು ಈಗ ರಾಜರಿಲ್ಲ; ಲೋಕಾಯುಕ್ತರಿದ್ದಾರೆ. ಅದೂ ಇದರ ಬಗ್ಗೆ ನಾವು ಈಗಲೇ ಕೇಳುತ್ತಿರುವುದು. ಇದುವರೆಗೆ ಅಂಥದೊಂದು ಇಲಾಖೆ ಇದೆ ಎಂಬುದೇ ಬಹಳ ಜನರಿಗೆ ಗೊತ್ತಿರಲಿಲ್ಲ. ಈಗಿನ ಲೋಕಾಯುಕ್ತರಿಂದ ಅದರ ಅಸ್ತಿತ್ವ ಎಲ್ಲರ ಅರಿವಿಗೆ ಬರುತ್ತಿದೆ. ಆದರೆ ತಾವು ಬಯಲಿಗೆಳೆದ ಲಂಚ ಪ್ರಕರಣಗಳ ಬಗ್ಗೆ ಸರ್ಕಾರ ಕ್ರಮ ಕೈಗೊಳ್ಳುತ್ತಿಲ್ಲ ಎಂಬುದು ಅವರ ದೂರು. ಇದು ಹೆಚ್ಚು ದಿನ ಕೇಳಲಾರದು; ಏಕೆಂದರೆ ಅವರ ಅಧಿಕಾರಾವಧಿ ಇನ್ನು ಮೂರೇ ತಿಂಗಳು. ಮುಂದೆ ಬರುವವರು ಅವರ ಹಾದಿಯನ್ನು ತುಳಿಯುತ್ತಾರೋ ಅದನ್ನೂ ಒಂದು ಸರ್ಕಾರದ ಇಲಾಖೆಯಂತೆಯೇ ಮಾಡಿಬಿಡುತ್ತಾರೋ ನೋಡೋಣ.

ಲೋಕಾಯುಕ್ತರ ಇತ್ತೀಚಿನ ಬೇಟೆಯಲ್ಲಿ ಸಿಲುಕಿಕೊಂಡವರು ಪೋಲೀಸ್ ಅಧಿಕಾರಿಗಳು. ಅದರಲ್ಲಿ ಒಬ್ಬರು ನಲವತ್ತೈದು ನಿವೇಶನಗಳನ್ನೂ ಇತರ ಆಸ್ತಿಯನ್ನೂ ಹೊಂದಿರುವರಂತೆ. ಅವರ ಮನೆಯವರನ್ನು ಕೇಳಿದರೆ, ಎಷ್ಟು ಕಷ್ಟ ಪಟ್ಟು ಅದನ್ನವರು ಸಂಪಾದಿಸಿದ್ದರು ಎಂದೇ ಹೇಳಿಯಾರು. ಯಾವುದೂ ಸಲೀಸಾಗಿ ಬರುವುದಿಲ್ಲವಲ್ಲ, ಲಂಚ ಪಡೆದು ದಕ್ಕಿಸಿಕೊಳ್ಳುವುದೇನೂ ಸುಲಭದ ಮಾತಲ್ಲ.

ಲಂಚ ತೆಗೆದುಕೊಳ್ಳುವವನಿರಬೇಕಾದರೆ ಅದನ್ನು ಕೊಡುವವನು ಇರಬೇಕಲ್ಲವೇ? ಕೊಡುವವನು ಅದನ್ನೇಕೆ ಕೊಡುತ್ತಾನೆ? ತಾನು ಕೊಡುವ ಲಂಚದ ಹಣಕ್ಕಿಂತ ಹೆಚ್ಚಿನ ಲಾಭ ತರುವ ಕಾರ್ಯಕ್ಕೆ ಅದರಿಂದ ಪರವಾನಗಿ ಸಿಗುತ್ತದೆ ಎಂಬ ಕಾರಣದಿಂದಲ್ಲವೇ? ಅಂದರೆ ಕಾನೂನು ಬಾಹಿರವಾಗಿ ತನಗೆ ದೊರೆಯಬೇಕಾದ್ದಕ್ಕಿಂತ ಹೆಚ್ಚಿನದನ್ನು ಪಡೆಯಲು ಅದರ ಒಂದು ಭಾಗವನ್ನು ಲಂಚವಾಗಿ ಕೊಡುತ್ತಾನೆ; ಲಂಚ ಪಡೆಯುವವನು ಸರ್ಕಾರಕ್ಕೆ ಬರಬೇಕಾದ ಆದಾಯದ ದೊಡ್ಡ ಭಾಗವನ್ನು ಬಿಟ್ಟು ತಾನು ಲಾಭ ಪಡೆಯುತ್ತಾನೆ. ಅಂದರೆ ಲಂಚ ಎರಡೂ ಕಡೆಯವರಿಗೆ – ಕೊಡುವವನಿಗೆ, ಪಡೆಯುವವನಿಗೆ – ಲಾಭ ತರುತ್ತದೆ, ಇಬ್ಬರೂ ಸೇರಿ ಸರ್ಕಾರಕ್ಕೆ ಪಂಗನಾಮ ಹಾಕುತ್ತಾರೆ. ಸಾಮಾನ್ಯವಾಗಿ ಲಂಚ ಕೊಡುವವನು ಕಾನೂನು ಮೀರಿರುತ್ತಾನೆ. ಕಾನೂನುಬದ್ಧವಾಗಿ ನಡೆದುಕೊಳ್ಳುವವನು ಲಂಚವೇಕೆ ಕೊಡಬೇಕು? ಕನಿಷ್ಠ ಪಕ್ಷ ಕೆಲಸ ಬೇಗ ಆಗಲಿ ಎಂದಿರಬಹುದು, ಅದೂ ಒಂದು ಬಗೆಯ ಲಂಚವಲ್ಲವೇ? ಸಮಯ ಉಳಿಸಲು ಹಣ ತೆರುವುದು? ದೇವರ ದರ್ಶನಕ್ಕಾಗಿ ಪ್ರಸಿದ್ಧ ದೇವಸ್ಥಾನಗಳ ಕ್ಯೂನಲ್ಲಿ ಬಹಳ ಹೊತ್ತು ಕಾಯಬೇಕಾಗುವುದೆಂದು ಕ್ಯೂ ಕಾಯುವವನಿಗೆ ಕೈಬಿಸಿ ಮಾಡಿ ಸ್ವಲ್ಪ ಮುಂಚೆ ದರ್ಶನ ಪಡೆಯುವವರನ್ನು ಬಹಳ ಜನ ಕಂಡಿರುತ್ತಾರೆ. ಅಷ್ಟೇಕೆ, ಹಣ ತೆತ್ತು ಯಾವುದೋ ವಿಶೇಷ ಅರ್ಚನೆ ಮಾಡಿಸಿದರೆ ನಿಮಗೆ ನೇರವಾಗಿ ದೇವರ ಸನ್ನಿಧಿ ದೊರೆಯುವುದಿಲ್ಲವೇ? ದೇವರನ್ನು ಕಾಣಲು ಬೇಕಾದುದೇನು, ಭಕ್ತಿಯೋ ಹಣವೋ? ಮುಗ್ಧನೊಬ್ಬ ಗಂಟೆಗಟ್ಟಲೆ ಕಾದು ಪಡೆಯಬೇಕಾದ ದೇವರ ದರ್ಶನವನ್ನು ಹಣ ಇರುವವನು ಬೇಗ ಪಡೆಯುತ್ತಾನೆ. ಇದನ್ನೇನೆಂದು ಕರೆಯುವುದು. ಹಣವನ್ನಿತ್ತು ವಕ್ರಮಾರ್ಗದಲ್ಲಿ ಕಾರ್ಯ ನೆರವೇರಿಸಿ ಕೊಳ್ಳುವುದೆಲ್ಲವೂ 'ಲಂಚಗಾರಿಕೆ'ಯಲ್ಲವೇ? ದೇವರ ಮೂಗಿನ ನೇರದಲ್ಲಿಯೇ ಇದು ನಡೆಯುತ್ತದೆ! ದೇವರು ಎಲ್ಲ ಕಡೆಯಲ್ಲಿಯೂ ಇದ್ದಾನೆ, ಆದ್ದರಿಂದ ಈ ಪ್ರಸಿದ್ಧ ದೇವಾಲಯದಲ್ಲಿ ಅವನನ್ನು ನೋಡಲು ಪ್ರಯತ್ನಿಸದೆ ಬಯಲಿನಲ್ಲಿ, ಆಕಾಶದಲ್ಲಿ ಕಾಣುತ್ತೇನೆಂದು ಭಕ್ತಿಯಿರುವವನು ಏಕೆ ನಿರ್ಧಾರ ತೆಗೆದುಕೊಳ್ಳಬಾರದು? ಅಂದರೆ ನಮಗೆ ಸಿಗಬೇಕಾದುದಕ್ಕಿಂತ ಹೆಚ್ಚಿನದನ್ನು ಪಡೆಯಲು ಅನುಸರಿಸುವ ಮಾರ್ಗವೆಲ್ಲ ಲಂಚದ ಮಾರ್ಗವೇ ಅಂದಂತಾಯಿತು. ಅದನ್ನು 'ಭ್ರಷ್ಟಾಚಾರ' ಎಂಬ ದೊಡ್ಡ ಮಾತಿನಿಂದ ಕರೆಯಬಹುದು. 'ಆಚಾರವಂತ' ಎಂಬ ಮಾತಿನಲ್ಲಿ ಭ್ರಷ್ಟಾಚಾರವನ್ನು ಅನುಸರಿಸುವುದೂ ಸೇರಿದೆಯೇನೋ!

★ – ★ – ★

# ‘ತಾನಿಟ್ಟ ಬೇತಾಳ ತನ್ನ ತಿಂದಿತು’

ನಾವು ಪ್ರತಿನಿತ್ಯ ಬಳಸುವ ಹಲವಾರು ಗಾದೆಗಳು ನಮ್ಮ ನುಡಿಯ ಬಹು ಜೀವಂತ ಭಾಗಗಳು. ನೂರಾರು ವರ್ಷಗಳಿಂದ ಬಳಸಿದರೂ ಅವುಗಳ ಹೊಳಪು ಮಾಸುವುದಿಲ್ಲ; ಅರ್ಥವಂತಿಕೆ ಕಡಿಮೆಯಾಗುವುದಿಲ್ಲ. ಗಾದೆಗಳ ಸರಳ ನುಡಿಯ ಹಿಂದೆ ಅನುಭವ ಹರಳುಗಟ್ಟಿರುತ್ತದೆ. ಹಾಗಾಗಿ ಯಾವುದೇ ಭಾಷೆಯಲ್ಲಿ ಗಾದೆಗಳು ಬಹು ಮುಖ್ಯ. ಈ ಗಾದೆಗಳು ಹೇಗೆ ರೂಪುಗೊಂಡವೆಂದು ಹೇಳುವುದು ಕಷ್ಟ; ಯಾವನಾದರೊಬ್ಬ ನುಡಿನಿಪುಣನಾದ ಪ್ರತಿಭಾವಂತನ ಬಾಯಿಂದ ನಾಡಿನ ಅನುಭವ ಗಾದೆಯಾಗಿ ಹೊಮ್ಮಿ, ಅದು ಸಾರ್ವಜನಿಕ ಸೊತ್ತಾಗಿರಬೇಕು. ಆದರೆ ಕೆಲವು ಗಾದೆಗಳನ್ನು ನೋಡಿದರೆ ಅವು ಯಾವುದೋ ಜಾನಪದ ಕತೆಗಳ ಕೊನೆಯ ನೀತಿವಾಕ್ಯಗಳಂತೆ ಕಾಣುತ್ತವೆ. ಪಂಪನು ತನ್ನ ಭಾರತದಲ್ಲಿ ಬಳಸಿಕೊಂಡ ಅಂತಹ ಒಂದು ಗಾದೆಯು ಒಂದು ಕತೆಯ ನೀತಿವಾಕ್ಯದಂತೆ ತೋರುತ್ತದೆ.

ಪಾಂಡವರು ವನವಾಸದಲ್ಲಿರುವಾಗ ನಡೆದ ಯಕ್ಷಪ್ರಶ್ನೆಯ ಪ್ರಸಂಗ ತುಂಬ ಜನಪ್ರಿಯವೂ ಅರ್ಥಗರ್ಭಿತವೂ ಆಗಿದೆ. ಒಮ್ಮೆ ಒಂದು ಮಾಯಾ ಮದಗಜವು ಕಾಡಿನಲ್ಲಿ ಕೋಲಾಹಲವುಂಟುಮಾಡಿ ತಾಪಸರು ಆಚರಿಸುತ್ತಿದ್ದ ಆರಣಿ(ಹೋಮದ ಸೌದೆ)ಯನ್ನು ತೆಗೆದುಕೊಂಡು ಓಡಿಬಿಟ್ಟಿತಂತೆ. ತಪಸ್ವಿಗಳೆಲ್ಲ ಭಯದಿಂದ ದಿಕ್ಕಾಪಾಲಾಗಿ ಓಡಿದರು. ಕೊನೆಗೆ ಅವರೆಲ್ಲ ಸೇರಿ ಪಾಂಡವರ ಬಳಿ ಬಂದು ಸಹಾಯ ಬೇಡಿದರು. ಅವರ ಬೇಡಿಕೆಯಂತೆ ಅದನ್ನು ವಾಪಸು ಪಡೆದು ಬರಲು ಪಾಂಡವರೆಲ್ಲ ಮದಗಜವನ್ನು ಬೆನ್ನಟ್ಟಿದರು. ಎಷ್ಟು ಹೊತ್ತಾದರೂ ಅದು ಕಣ್ಣಿಗೆ ಬೀಳಲಿಲ್ಲ. ಒಂದು ಆಲದ ಮರದ ಕೆಳಗೆ ಕುಳಿತು ದಣಿವಾರಿಸಿಕೊಳ್ಳತೊಡಗಿದರು. ಅವರಿಗೆಲ್ಲ ಮಹಾ ಬಾಯಾರಿಕೆ. ಎಲ್ಲಿಂದಾದರೂ ಕುಡಿಯುವ ನೀರನ್ನು ತೆಗೆದು ಕೊಂಡು ಬರುವಂತೆ ಯುಧಿಷ್ಠಿರನು ಅತ್ಯಂತ ಕಿರಿಯನಿಂದ ಮೊದಲುಗೊಂಡು ಕ್ರಮವಾಗಿ ತನ್ನ ತಮ್ಮಂದಿರನ್ನು ಒಬ್ಬೊಬ್ಬರಾಗಿ ಕಳಿಸಿಕೊಟ್ಟ. ಆದರೆ ಅವರಲ್ಲ ಹೋದವರು ವಾಪಸು ಬರಲೇ ಇಲ್ಲ. ಆಗಿದ್ದುದೇನೆಂದರೆ ಮೊದಲು ಹೋಗಿದ್ದ ಸಹದೇವ ಒಂದು ಕೊಳದ ಬಳಿ ನೀರು ಕುಡಿಯಲು ಹವಣಿಸಿದಾಗ ಒಂದು ಅಶರೀರವಾಣಿ ಅವನನ್ನು ತಡೆದು, ತನ್ನ ಪ್ರಶ್ನೆಗೆ ಸಮಂಜಸವಾಗಿ ಉತ್ತರವಿತ್ತು ಆ ಬಳಿಕ ನಿರನ್ನು ಕುಡಿಯಲು ಹೇಳಿತು. ಆದರೆ ಅದನ್ನು ಲೆಕ್ಕಿಸದ ಅವನು ನೀರು

ಕುಡಿದು ಹಿಂದಕ್ಕೆ ಒಂದು ಹೆಜ್ಜೆ ಇಟ್ಟಾಗ ಸತ್ತು ಬಿದ್ದ. ಅದರಂತೆಯೇ ಮುಂದಿನ ಮೂವರೂ ಆದರು.

ಈ ಮಧ್ಯೆ ನಡೆಯಿತೆನ್ನಲಾದ ಒಂದು ಪ್ರಸಂಗವನ್ನು ಪಂಪ ತನ್ನ ಭಾರತದಲ್ಲಿ ನಿರೂಪಿಸುತ್ತಾನೆ. ದುರ್ಯೋಧನನ ಒಬ್ಬ ಪುರೋಹಿತನ ಹೆಸರು ಕನಕಸ್ವಾಮಿ. ಪಾಂಡವರಿಗೆ ಕೇಡುಂಟಾಗುವ ಹಾಗೆ ಒಂದು ಬೇಳ್ವೆ (ಹೋಮ) (ಪ್ರಾಯಶಃ ಅದು ಮಾಟವಿರಬೇಕು) ಮಾಡುವಂತೆ ಈ ಕಡೆ ಅವನು ತನ್ನ ಯಜಮಾನನಿಗೆ ಸಲಹೆಯಿತ್ತ. ದುರ್ಯೋಧನನು ಅದಕ್ಕೆ ಅನುಮತಿಯಿತ್ತಾಗ ಕನಕಸ್ವಾಮಿ ಅದನ್ನು ನೆರವೇರಿಸಲು ಸಜ್ಜಾದ. ಒಂದು ಯಜ್ಞಕುಂಡವನ್ನು ನಿರ್ಮಿಸಿ ಬೆಂಕಿಯನ್ನು ಮಾಡಿದ. ಸ್ವಲ್ಪಕಾಲದಲ್ಲಿಯೇ ಅದರಿಂದ ಅಂಜನಪುಂಜದಂತಿದ್ದ (ಕಾಡಿಗೆಯಂತೆ ಕಪ್ಪಗಿದ್ದ) ಮೈ, ಸಿಡಿಲಿನಂತಹ ದಾಡೆಗಳು, ಉರಿಯ ಉಂಡೆ ಯಂತಹ ಕಣ್ಣುಗಳೂ ಇದ್ದ ಯಮನ ಆಕಾರದ ಕೀರ್ತಿಗೆ ಎಂಬ ಕ್ಷುದ್ರ ದೇವತೆಯು ಕೈಯಲ್ಲಿ ಥಳಥಳ ಹೊಳೆಯುವ ಕತ್ತಿಯನ್ನು ಹಿಡಿದು ಮೇಲೆದ್ದು ಬಂದಳು. "ಬೆಸಸು ಬೆಸಸು" ಎಂದು ಕನಕಸ್ವಾಮಿಗೆ ಅವಸರಿಸಿದಳು. ಆಗ 'ಪಾಂಡವರು ಎಲ್ಲಿದ್ದರೂ ಹುಡುಕಿ ತಿಂದುಬಿಡು' ಎಂದು ಕನಕಸ್ವಾಮಿ ಆದೇಶಿಸಿದ. ಹಾಗೆಯೇ ಮಾಡಲು ಕೀರ್ತಿಗೆಯು ಉಬ್ಬರದಿಂದ ಹೊರಟಳು. ಪಾಂಡವರಿದ್ದ ಗುಡಿಸಿಲಿಗೆ ಮೊದಲು ಹೋದಳು. ಆದರೆ ಅಲ್ಲಿ ಯಾರೂ ಇರಲಿಲ್ಲ. ತನ್ನ ಕೈಗೆ ಸಿಕ್ಕದೆ ತಪ್ಪಿಸಿಕೊಂಡು ಎಲ್ಲಿಗೆ ಹೋಗಿರಬಹುದೆಂದು ಚಿಂತಿಸುತ್ತ ಕಾಡಿನಲ್ಲಿ ಬಹು ಕಾಲ ಸುತ್ತಾಡಿದಳು. ಎಲ್ಲಿಯೂ ಪಾಂಡವರ ಸುಳಿವಿಲ್ಲ. ಅವಳ ಕೋಪ ಉಕ್ಕೇರಿತು. ಇನ್ನಷ್ಟು ಬಿರುಸಿನಿಂದ ಹುಡುಕಾಟ ನಡೆಸಿದಳು. ಕೊನೆಗೆ ಕೊಳದ ತಡಿಯಲ್ಲಿ ಯುಧಿಷ್ಠಿರನ ಹೊರತು ಸತ್ತು ಬಿದ್ದಿದ್ದ ನಾಲ್ವರು ಪಾಂಡವರ ದೇಹಗಳು ಅವಳ ಕಣ್ಣಿಗೆ ಬಿದ್ದವು. "ಸದ್ಯ, ಬದುಕಿದೆ" ಎಂದು ಸಮಾಧಾನದ ನಿಟ್ಟುಸಿರಿಟ್ಟಳು.

ಪಾಂಡವರನ್ನು ತಿನ್ನುವ ಆತುರ, ತನ್ನ ಯಜಮಾನ ಕನಕಸ್ವಾಮಿಯ ಆದೇಶವನ್ನು ನೆರವೇರಿಸುವ ತವಕ – ಇವುಗಳಿಂದ ಕೂಡಿದ ಆ ದೇವತೆ ಸಂಭ್ರಮ ದಿಂದ ಮುನ್ನಡೆದಳು. ಇನ್ನೇನು ಒಂದು ಶವಕ್ಕೆ ಕೈಹಾಕಬೇಕು, ಅಷ್ಟರಲ್ಲಿ ಅವರನ್ನು ಸಾಯುವಂತೆ ಮಾಡಿದ್ದ ದೈವವು ಪ್ರತ್ಯಕ್ಷವಾಯಿತು. "ಎಲೆ ಪಿರಿತಿನಿಯೇ, ಇವು ಗಳನ್ನು ಮುಟ್ಟದೆ ತೊಲಗು. ಈ ನಾಲ್ವರಲ್ಲಿದ್ದ ಜೀವಗಳನ್ನು ತೊಲಗಿಸಿ ದೇಹಗಳನ್ನು ಕಾಯ್ದುಕೊಂಡಿರುವ ಅಲಂಘ್ಯಬಲನಾದ ನನಗೆ ನೀನು ಸಮವೇ? ಅಲ್ಲದೆ, ನೀನು ಜಾತಿ ದೇವತೆಯಾಗಿದ್ದರೆ ನನ್ನ ಎಂಜಲನ್ನು ಹೇಗೆ ತಿನ್ನುತ್ತೀ?" ಎಂದು ಕೇಳಿತು. ತನ್ನ ಶ್ರೇಷ್ಠತೆಯ ಪ್ರಶ್ನೆ ಬಂದಾಗ ಕೀರ್ತಿಗೆಗೆ ಆ ಮಾತು ನಿಜವೆನ್ನಿಸಿತು. ತನ್ನ ಕೈಗೆ ಸಿಕ್ಕುವ ಮುಂಚೆಯೇ ನಾಲ್ವರು ಪಾಂಡವರು ಈ ದೈವಕ್ಕೆ ವಶವಾದರಲ್ಲ ಎಂದು ಪೇಚಾಡಿಕೊಂಡಳು. ತನ್ನ ಹಸಿವೂ ಇಂಗದು, ಯಜಮಾನನ ಆದೇಶವೂ ನೆರವೇರದು, ಏನು ಮಾಡಬೇಕು ಎಂದು ಆ ದೈವಕ್ಕೆ ಚಿಂತೆಯಾಯಿತು. ಕೊಂಚ

ಹೊತ್ತಾದ ಮೇಲೆ, ಆ ದೈವವನ್ನೇ ಮುಂದೇನು ಮಾಡಬೇಕೆಂಬುದರ ಬಗ್ಗೆ ಸಲಹೆ ಕೇಳಿತು. "ನಾನು ಈಗ ಏನು ಮಾಡಲಿ? ಯಾರನ್ನು ತಿನ್ನಲಿ?" ಎಂದು ಕೇಳಿತು. ಆಗ ಆ ಕೊಳದ ಯಜಮಾನ ದೈವ ಹೇಳಿತಂತೆ, "ನಿನ್ನನ್ನು ಯಾವನು ಅಕಾರಣವಾಗಿ ಹುಟ್ಟಿಸಿದನೋ ಅವನನ್ನೇ ಹೋಗಿ ತಿಂದುಬಿಡು!" ಕೀರ್ತಿಗೆ ಕೋಪಗೊಂಡು ಮರಳಿ ಹೋಗಿ ತನ್ನನ್ನು ಸೃಷ್ಟಿಸಿದ ಕನಕಸ್ವಾಮಿಯನ್ನೇ ತಿಂದುಹಾಕಿತಂತೆ. ಮುಂದೆ ಯುಧಿಷ್ಠಿರನು ಬಂದು ಕೊಳದ ದೇವತೆ ಕೇಳಿದ ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರವಿತ್ತ. ಅದನ್ನು ಮೆಚ್ಚಿದ ಆ ದೇವತೆ ಪ್ರತ್ಯಕ್ಷವಾಯಿತು. ಯಮನೇ ಆ ರೂಪದಲ್ಲಿದ್ದನಂತೆ. ಕನಕಸ್ವಾಮಿಯ ಬೇಳ್ವೆ(ಮಾಟ)ಗೆ ಬಲಿಯಾಗದಂತೆ ಪಾಂಡವರನ್ನು ಕಾಪಾಡಲು ತಾನೇ ಉದ್ದೇಶಪೂರ್ವಕವಾಗಿ ಆ ರೀತಿ ಮಾಡಿದ್ದಾಗಿ ಯಮ ಹೇಳಿದನಂತೆ. "ಕನಕನ ಬೇಳ್ವೆ ತಗುಳ್ದುದು ಕನಕನನ್" ಎಂಬ ಮಾತು (ಅಥವಾ ಗಾದೆ) ನಿಜವಾಯಿತು ಎಂದು ಪಂಪ ಈ ಪ್ರಸಂಗವನ್ನು ಮುಗಿಸುತ್ತಾನೆ.

ಅಂದರೆ ಕೀರ್ತಿಗೆಯ ಕತೆ ಪ್ರಾಯಶಃ ಕನ್ನಡನಾಡಿನ ಜನಸಾಮಾನ್ಯರಲ್ಲಿ ಪ್ರಚಲಿತವಿದ್ದ ಒಂದು ಕತೆ ಎಂದು ಕಾಣುತ್ತದೆ. ಆ ಕತೆಯ ಆಶಯ, 'ಅಕಾರಣವಾಗಿ ಬೇರೊಬ್ಬರಿಗೆ ಕೇಡು ಬಗೆಯಲು ಹೋದರೆ ಅದು ತನ್ನನ್ನೇ ಆಹುತಿ ತೆಗೆದುಕೊಳ್ಳುತ್ತದೆ' ಎಂಬುದಾಗಿರಬೇಕು. ಪಂಪ ಇದನ್ನು ದುರ್ಯೋಧನನ ಕೇಡಿಗತನಕ್ಕೆ ನಿದರ್ಶನವಾಗಿ ಬಳಸಿಕೊಂಡಿದ್ದಾನೆ. ಈ ಕತೆಯ ಮೂಲ ಸ್ವರೂಪ ಹೇಗಿತ್ತೋ ತಿಳಿಯದು. ಆದರೆ "ಕನಕನ ಬೇಳ್ವೆ ತಗುಳ್ದುದು ಕನಕನನ್" ಎಂಬ ಅರ್ಥದ ಗಾದೆ ಆಗ ಪ್ರಚಲಿತವಿತ್ತು; ಪಂಪನೇ ಇದನ್ನು ಸ್ಪಷ್ಟಪಡಿಸಿದ್ದಾನೆ. ವಚನಗಳಲ್ಲಿ ಅನೇಕ ಕಡೆ 'ತಾನಿಟ್ಟ ಬೇತಾಳ ತನ್ನ ತಿಂದಿತೆಂಬಂತೆ' ಎಂಬ ಗಾದೆಯು ಕಾಣಸಿಗುತ್ತದೆ. ಹಾಗಾಗಿ ಇದು ಹಳೆಯ ಗಾದೆಯೇ, ಪಂಪ ತನ್ನ ಕಾಲದಲ್ಲಿದ್ದಿರಬಹುದಾದ ಗಾದೆಯ ವಿವರಣೆಗಾಗಿ ಈ ಕತೆಯನ್ನು ಹೇಳಿದನೋ, ಅಥವಾ ಕತೆ-ಗಾದೆಗಳೆರಡೂ ಅವನ ಕಾಲದಲ್ಲಿಯೇ ಪ್ರಚಲಿತವಿತ್ತೋ ಹೇಳುವುದು ಕಷ್ಟ. ಮಹಾಭಾರತ ಕತೆಯನ್ನು ತಾನು ಕನ್ನಡ ವಾತಾವರಣದಲ್ಲಿ ನಿರೂಪಿಸುವಾಗ ಪಂಪ ಇಲ್ಲಿನ ಜಾನಪದ ಸತ್ವವನ್ನು ಬಳಸಿಕೊಳ್ಳುವ ರೀತಿಗಳಲ್ಲಿ ಇದೂ ಒಂದು.

☆ – ☆ – ☆

# ಪ್ರತಿಯೊಬ್ಬರೂ ವಿಶಿಷ್ಟರೇ

ತಮ್ಮ ಮಕ್ಕಳು ಹಾಗಿರಬೇಕು, ಹೀಗಿರಬೇಕು ಎಂದು ಎಲ್ಲ ತಂದೆ ತಾಯಿಗಳು ಹಂಬಲಿಸುತ್ತಾರೆ, ಕೆಲವರು ತಾವೂ ಇತರರಂತಾಗಲು ಹಾತೊರೆಯುತ್ತಾರೆ. ಆಸೆ ಸರಿಯೇ. ಆದರೆ ಈ ಹಂಬಲವನ್ನು ವ್ಯಕ್ತಪಡಿಸುವ ರೀತಿಯಲ್ಲಿ ಎಷ್ಟೋ ಸಲ ಮಕ್ಕಳ ಮೇಲೆ ಸೂಕ್ಷ್ಮವಾಗಿ ಅನಪೇಕ್ಷಣೀಯ ಪರಿಣಾಮವನ್ನು ಬೀರುತ್ತಾರೆ. ಮಕ್ಕಳ ಮುಂದೆ ಬೇರಾವುದೋ ಮಕ್ಕಳನ್ನು ಹೊಗಳುವುದು, ಅವರಂತೆ ಇವನೂ ಆಗಬೇಕೆನ್ನುವುದು ಅತಹವುಗಳಲ್ಲಿ ಕೆಲವು. ಪೌರಾಣಿಕ ಅಥವಾ ಐತಿಹಾಸಿಕ ವ್ಯಕ್ತಿಗಳ ನಿದರ್ಶನಗಳನ್ನಿತ್ತು ಅವರೇ ತಮ್ಮ ಮಕ್ಕಳಿಗೆ ಮಾದರಿಗಳಾಗಬೇಕು ಎಂದು ಆಶಿಸುವವರೂ ಇರಬಹುದು. ಶಾಲಾ ಪಠ್ಯಪುಸ್ತಕಗಳಲ್ಲಿಯೂ ಅಂತಹವರ ಬಗ್ಗೆ ಪಾಠಗಳನ್ನಿಟ್ಟು, ಅವರಂತೆ ಆಗಲು ಮಕ್ಕಳಿಗೆ ಉಪದೇಶ ಮಾಡುವ ಪರಿಪಾಟವೂ ಇದೆ.

ಯಾರಾದರೂ ಬೇರೆಯವರ ಹಾಗೆ ಯಾಕೆ ಆಗಬೇಕೆನ್ನುವುದು ಮೂಲ ಪ್ರಶ್ನೆ. ಏಕೆಂದರೆ ಪ್ರತಿಯೊಬ್ಬನೂ ಪ್ರತ್ಯೇಕ ವ್ಯಕ್ತಿಯಾಗಿರುವುದರಿಂದ ಪ್ರತ್ಯೇಕವಾಗಿಯೇ ಬೆಳೆಯಬೇಕು, ಉಳಿಯಬೇಕು. ಬೆರಳಚ್ಚಿನ ತಜ್ಞರು ಹೇಳುತ್ತಾರಲ್ಲ, ಒಬ್ಬ ವ್ಯಕ್ತಿಯ ಬೆರಳ ಗುರುತಿನ ಹಾಗೆ ಮತ್ತೊಬ್ಬನದಿರುವುದಿಲ್ಲ ಎಂದು. ಎಷ್ಟೇ ಜನರು ಹುಟ್ಟಲಿ, ಒಬ್ಬೊಬ್ಬನದೂ ಬೇರೆಯೇ ಆದ ಬೆರಳಿನ ಗುರುತು; ಅದಕ್ಕೇ ಮುಖ್ಯವಾದ ದಾಖಲೆಗಳಲ್ಲಿ ಹೆಬ್ಬೆಟ್ಟಿನ ಗುರುತು ಹಾಕಿಸಿಕೊಳ್ಳುವುದು. ಅಂದರೆ ಪ್ರಕೃತಿಯ ಇರಾದೆ ಪ್ರತಿ ಸೃಷ್ಟಿಯೂ ವಿಭಿನ್ನವಾಗಿರಬೇಕೆಂಬುದು. ಕೆಲವು ಅಂಶಗಳಲ್ಲಿ ಹೋಲಿಕೆಯಿರಬಹುದು; ಆದರೆ ಇಲ್ಲಿಯವರೆಗೆ ಹುಟ್ಟಿದ, ಈಗಿರುವ ಮತ್ತು ಮುಂದೆ ಬರಲಿರುವ ಪ್ರತಿ ವ್ಯಕ್ತಿಗೂ ತನ್ನದೇ ಆದ ಕೆಲವು ಲಕ್ಷಣಗಳಿರುತ್ತವೆ ಎಂದಂತಾಯಿತು. ಹಾಗಾಗಿ ಈಗಿನ ವೈಜ್ಞಾನಿಕ ಪರಿಕಲ್ಪನೆಯಾದ ಕ್ಲೋನಿಂಗ್ ಪ್ರಕೃತಿವಿರುದ್ಧ ಎಂದಂತಲ್ಲವೇ? ದೈಹಿಕ ಲಕ್ಷಣಗಳ ಕ್ಲೋನಿಂಗ್ ಸರಿಯಲ್ಲವಾದರೆ, ವ್ಯಕ್ತಿತ್ವದಲ್ಲಿಯೂ ತದ್ರೂಪಿಯನ್ನು ಸೃಷ್ಟಿಮಾಡುವುದೂ ಸರಿಯಲ್ಲ ಎಂಬುದು ಸರಿ ತಾನೇ? ಆದ್ದರಿಂದಲೇ ಒಬ್ಬ ಬೇರೊಬ್ಬನ ಹಾಗೆ ಆಗಬೇಕೆಂದು ಬಯಸುವುದು ಸಹಜವಲ್ಲ.

ಯಾರನ್ನೋ ಮನಸ್ಸಿನಲ್ಲಿರಿಸಿಕೊಂಡು ತಮ್ಮ ಮಕ್ಕಳು ಹಾಗಾಗಬೇಕೆಂದು

ಹಿರಿಯರು ಹಂಬಲಿಸುವ ಕಾರಣ ಅಂತಹವರಲ್ಲಿರುವ ಯಾವುದೋ ಲಕ್ಷಣ ತಮಗೆ ಬಹು ಪ್ರಿಯ ಎಂಬುದೇ ಆಗಿರುತ್ತದೆ. ಸಾಮಾನ್ಯವಾಗಿ ಹಣ ಮಾಡುವುದು, ಅಧಿಕಾರ ಹಿಡಿಯುವುದು, ಹೆಸರು ಮಾಡುವುದು ಇಂತಹವುಗಳ ಗೀಳು ದೊಡ್ಡವರಲ್ಲಿ ಹಾಗೆ ಹಂಬಲಿಸುವಂತೆ ಮಾಡುವಂಥವು. ಆದರೆ ಇವು ಬೇರೆಯವೂ ಆಗಿರಬಹುದು. ಉದಾಹರಣೆಗೆ, ತಮ್ಮ ಮಕ್ಕಳು 'ತಮಗೆ' ಇಷ್ಟವಾದುದನ್ನು ಬೆಳೆಸಿಕೊಂಡು ದೊಡ್ಡ ಹಾಡುಗಾರರಾಗಬೇಕೆಂದೋ ಕಲಾವಿದರಾಗಬೇಕೆಂದೋ ವಿಜ್ಞಾನ-ತಂತ್ರಜ್ಞಾನಿಗಳಾಗಬೇಕೆಂದೋ ಪೋಷಕರು ಬಯಸುವುದನ್ನು ಕಾಣುತ್ತೇವೆ. ಡಾಕ್ಟರರು, ಕಲಾವಿದರು, ರಾಜಕಾರಣಿಗಳು ತಮ್ಮ ಮಕ್ಕಳೂ ತಮ್ಮಂತೆಯೇ ಆಗಬೇಕೆಂದು ಆ ದಿಸೆಯಲ್ಲಿ ಅವರನ್ನು ತರಬೇತುಗೊಳಿಸುವುದು ದಿನನಿತ್ಯ ಕಣ್ಣೆದುರು ಕಾಣುವ ನಿದರ್ಶನಗಳು.

ಹಿರಿಯರು ಬಾಳಿದ ವಾತಾವರಣದಲ್ಲಿ ಬೆಳೆಯುವ ಮಕ್ಕಳೂ ಅದಕ್ಕನುಗುಣವಾದ ಅಭಿರುಚಿಯನ್ನು ಬೆಳೆಸಿಕೊಳ್ಳುವುದು ಸಹಜವಿರಬಹುದು. ಎಷ್ಟೋ ವೇಳೆ ಅದು ಸರಿಹೊಂದಲೂಬಹುದು. ಅಲ್ಲದೆ ಕೆಲವರಿಗೆ ಖಚಿತವಾದ ಆಳವಾದ ಅಭಿರುಚಿಯೂ ಇರದೆ ಅಥವಾ ಹೊರಗಿನ ಪ್ರಭಾವಗಳಿಗೆ ತನ್ನನ್ನು ಸುಲಭವಾಗಿ ಒಡ್ಡಿಕೊಂಡುಬಿಡುವ ಸ್ವಭಾವದ ವ್ಯಕ್ತಿಗಳು ಬಹು ಬೇಗ ಇತರರದನ್ನು ತಮ್ಮದನ್ನಾಗಿ ಮಾಡಿಕೊಂಡು ಬಿಡಬಹುದು. ಅಂತಹವರಿಗೆ ಬೇರೆಯವರಂತೆ ಆಗಲು ಪ್ರಯತ್ನಪಡುವುದು, ಅಥವಾ ಹಾಗೆ ಮಾಡಲು ಒತ್ತಾಯ ಬಂದಾಗ ಅದರಂತೆ ನಡೆದುಕೊಳ್ಳುವುದು ತೊಂದರೆ ಅನ್ನಿಸಲಿಕ್ಕಿಲ್ಲ. ಆದರೆ ನಿರ್ದಿಷ್ಟ ಅಭಿರುಚಿಯಿರುವ ಮತ್ತು ಖಚಿತ ಗುರಿಯಿರುವ ಕೆಲವು ವ್ಯಕ್ತಿಗಳಲ್ಲಾದರೂ ಇಂತಹ ಒತ್ತಾಯ ಕಿರಿಕಿರಿಯನ್ನುಂಟುಮಾಡಬಹುದು. ತನ್ನ ವ್ಯಕ್ತಿತ್ವದಲ್ಲಿರುವ ಲಕ್ಷಣಗಳಿಗೆ ವಿರೋಧವಾದುದೋ, ಭಿನ್ನವಾದುದೋ ಆದುದನ್ನು ರೂಢಿಸಿಕೊಳ್ಳಬೇಕೆಂಬ ಒತ್ತಾಯ ಬಂದಾಗ ಅಂತಹವರು ತುಂಬ ಖಿನ್ನರಾಗಬಹುದು. ಇಂತಹ ಅನೇಕ ವಿದ್ಯಾರ್ಥಿಗಳನ್ನು ನನ್ನ ದೀರ್ಘ ಅಧ್ಯಾಪಕತನದ ಅವಧಿಯಲ್ಲಿ ಕಂಡಿದ್ದೇನೆ. ಹಿರಿಯರ ಒತ್ತಾಯದಿಂದ ತನಗಿಷ್ಟವಿಲ್ಲದ ವಿಷಯವನ್ನು ಅಭ್ಯಾಸಮಾಡಬೇಕಾಗಿ ಬಂದಾಗ, ಎಷ್ಟೋ ವೇಳೆ ಶಕ್ತಿಯಿದ್ದರೂ ಅಭಿರುಚಿಯಿರದಿರುವುದರಿಂದ ಅಂಥದನ್ನು ಸ್ವೀಕರಿಸಲು ಬುದ್ಧಿ-ಮನಸ್ಸುಗಳು ನಿರಾಕರಿಸಬಹುದು. ಒತ್ತಾಯದ್ದನ್ನು ಸ್ವೀಕರಿಸಲಾರದ, ತನಗೆ ಇಷ್ಟವಾದದ್ದನ್ನು ಪಡೆಯಲಾಗದ ಇಕ್ಕಟ್ಟಿನಲ್ಲಿ ಸಿಲುಕಿ ಇಂಥವರು ಮಾನಸಿಕ ಹಿಂಸೆಯನ್ನೂ ಅನುಭವಿಸುತ್ತಾರೆ, ಹೊರ ಜಗತ್ತಿನ ದೃಷ್ಟಿಯಲ್ಲಿ ಅಯಶಸ್ವಿಗಳಾಗಲೂ ಬಹುದು. ಅಲ್ಲದೆ ಇಂಥಹವರ ಶ್ರಮ ಹಾಗೂ ಇತರರು ಇವರಿಗಾಗಿ ಮಾಡುವ ಪ್ರಯತ್ನಗಳೂ ನಿರರ್ಥಕವಾಗಿಬಿಡುತ್ತವೆ. ಹೀಗಾದರೆ ಬದುಕಿನ ಸಾರ್ಥಕತೆ ಹೇಗಾದೀತು?

ಬದುಕಿನ ಸಾರ್ಥಕತೆ ಎಂದರೆ ಒಬ್ಬನ ವ್ಯಕ್ತಿತ್ವದಲ್ಲಿ ಯಾವ ಲಕ್ಷಣಗಳು

ಬೀಜರೂಪದಲ್ಲಿವೆಯೋ ಅವುಗಳನ್ನು ಮುಕ್ತವಾಗಿ ವಿಕಾಸಗೊಳಿಸುವುದು. ಅದಕ್ಕೆ ಶಿಕ್ಷಣವೂ ಒಂದು ಪೂರಕ ಅಂಶ, ಹೊರ ಪರಿಸರವೂ ಮುಖ್ಯವಾದ ಅಂಶ. ಕಿರಿಯರು ದಾರಿ ತಪ್ಪಿದರು ಎಂದು ಎಷ್ಟೋ ವೇಳೆ ಹಿರಿಯರು ತಪ್ಪು ತಿಳಿಯುತ್ತಾರೆ. ತಮಗನ್ನಿಸಿದ ಮಾರ್ಗದಲ್ಲಿ ಕಿರಿಯರು ನಡೆಯದಿದ್ದರೆ ಅದನ್ನು ತಪ್ಪು ದಾರಿ ಎಂದು ನಿರ್ಣಯಿಸಿಬಿಡುವುದು ಸರಿಯಲ್ಲ. ಬದುಕಿಗೆ ಅಸಂಖ್ಯ ರೂಪಗಳು, ಅದನ್ನು ಬಾಳಲು ಅಪರಿಮಿತ ಮಾರ್ಗಗಳು. ಪ್ರತಿಯೊಂದೂ ಸರಿಯೇ. ಇಂಥ ವೈವಿಧ್ಯ ಪ್ರಕೃತಿಸಹಜ.

ಬದುಕಿನಲ್ಲಿ ಯಶಸ್ವಿಗಳೆನಿಸಿದ ಅಥವಾ ದೊಡ್ಡದನ್ನು ಸಾಧಿಸಿದವರು ಎನ್ನಿಸಿಕೊಂಡ ಬೇರೆಯವರಿಂದ ಕಲಿಯಬೇಕಾದುದು ಏನೂ ಇಲ್ಲವೆಂದು ಇದರ ಅರ್ಥವಲ್ಲ. ಅನುಸರಿಸಬೇಕಾದ್ದು ವಿವರಗಳನ್ನಲ್ಲ, ವೈಶಿಷ್ಟ್ಯಗಳನ್ನಲ್ಲ, ಅವರು ಯಶಸ್ವಿಗಳಾಗಲು ಮಾಡಿದ ಸಾಧನೆಯ ಹಿಂದಿನ ಮನೋಭಾವವನ್ನು, ದಾರಿ ತುಳಿಯುವಾಗಿನ ಕಾಲದ ಮನಃಸ್ಥಿತಿಯನ್ನು. ಎಂದರೆ ಯಾವನ ಸಾಧನೆಯೂ ಸುಲಭವಾಗಿ ಆಗಿರುವುದಿಲ್ಲ. ಆ ಮಾರ್ಗದಲ್ಲಿ ಅನೇಕ ವೈಪರೀತ್ಯಗಳನ್ನು ಆ ವ್ಯಕ್ತಿ ಎದುರಿಸಿರುತ್ತಾನೆ. ಆದರೆ ತನ್ನ ಮುಂದಿನ ಗುರಿ, ತಾನು ಸಾಕಾರಗೊಳಿಸಿಕೊಳ್ಳ ಬೇಕೆಂದು ಸಂಕಲ್ಪಿಸಿರುವ ಆದರ್ಶ ಇವುಗಳ ಬಗ್ಗೆ ಗಟ್ಟಿತನವಿದ್ದರೆ ದಾರಿಯಲ್ಲಿನ ಅಡ್ಡಿಗಳಿಗೆ ಅಂಜದ ಸ್ಥೈರ್ಯ ಒದಗುತ್ತದೆ. ಎಲ್ಲ ಸಾಧಕರಲ್ಲಿಯೂ ಸಾಮಾನ್ಯ ವಾಗಿರುವುದು ಈ ಮನೋಭಾವ. ಅದನ್ನು ಮಾದರಿಯಾಗಿಸಿಕೊಳ್ಳಬೇಕೇ ಹೊರತು ಆ ಸಾಧಕನ ಗುರಿಯೇ ತನ್ನ ಗುರಿಯಾಗಬೇಕು ಎಂಬುದನ್ನಲ್ಲ.

ಒಂದು ಕುರಿಮಂದೆಯನ್ನೋ ದನದ ಹಿಂಡನ್ನೋ ನೋಡಿದರೆ ಎಲ್ಲ ಕುರಿಗಳೂ ಎಲ್ಲ ದನಗಳೂ ಒಂದೇ ತರಹ ಎಂದು ಅನ್ನಿಸಬಹುದು, ಆದರೆ ಹತ್ತಿರ ಹೋದರೆ ಪ್ರತಿಯೊಂದೂ ಭಿನ್ನ. ಒಂದು ಮರದ ಎಲೆಗಳೆಲ್ಲ ಒಂದೇ ಬಗೆಯವಾಗಿ ಕಾಣುತ್ತವೆ, ಸ್ಥೂಲ ನೋಟಕ್ಕೆ. ಆದರೆ ಯಾವುದೇ ಎರಡು ಎಲೆಗಳನ್ನು ಕಿತ್ತುಕೊಂಡು ಸ್ವಲ್ಪ ಸೂಕ್ಷ್ಮವಾಗಿ ಪರಿಶೀಲಿಸಿ; ಒಟ್ಟಾರೆ ಆಕಾರದಲ್ಲಿ ಸಾಮ್ಯವಿದ್ದರೂ ವಿವರಗಳಲ್ಲಿ ಆ ಎರಡರಲ್ಲಿನ ಭಿನ್ನತೆಗಳು ಕಾಣಿಸುತ್ತವೆ. ಈ ಭಿನ್ನತೆಯೇ ಪ್ರಕೃತಿಯ ವೈಶಿಷ್ಟ್ಯ; ಅಸಂಖ್ಯಾತವಾದುದನ್ನು ಸೃಷ್ಟಿಸಿದರೂ ಪ್ರತಿಯೊಂದೂ ಭಿನ್ನ. ಪ್ರಕೃತಿಯ ಸೃಷ್ಟಿಶಕ್ತಿಯೇ ಅಂತಹುದು.



# ಸಾಮಾನ್ಯನ ಕನ್ನಡಪ್ರಜ್ಞೆಯ ಪ್ರತೀಕ

ಸುಮಾರು ೧೯೫೪; ನಾನಾಗ ಮಿಡ್ಲ್ ಸೂಲಿನಲ್ಲಿ ಓದುತ್ತಿದ್ದೆ, ದೂರದ ಪಾವಗಡ ತಾಲ್ಲೂಕಿನ ಕೊಂಡೇತಿಮ್ಮನಹಳ್ಳಿಯಲ್ಲಿ. ಪಾವಗಡದಲ್ಲಿ ನಿರ್ಮಿಸ ಬೇಕೆಂದಿದ್ದ ಶನಿಮಹಾತ್ಮನ ದೇವಸ್ಥಾನಕ್ಕೆಂದು ಸಹಾಯಕ ಪ್ರದರ್ಶನವಾಗಿ ಅಲ್ಲಿನ ಟೆಂಟ್ ಟಾಕೀಸಿನಲ್ಲಿ ಸಿನಿಮಾ ಏರ್ಪಾಟಾಗಿತ್ತು, 'ಬೇಡರ ಕಣ್ಣಪ್ಪ'. ನಮ್ಮ ಊರಿನಿಂದ ಗಾಡಿಯಲ್ಲಿ (ಆಗ ಬಸ್ಸಿರಲಿಲ್ಲ) ಪಾವಗಡಕ್ಕೆ ಬಂದ ಅನೇಕರಲ್ಲಿ ನಾನೂ ಸೇರಿದ್ದೆ. ಆಗಿನಿಂದ ನಾನೂ ರಾಜಕುಮಾರ್ ಅವರ ಅಭಿಮಾನಿ. ಆ ಚಿತ್ರ ಇನ್ನೂ ಕಣ್ಣಿಗೆ ಕಟ್ಟಿದೆ. ನನ್ನ ಪೀಳಿಗೆಯ ಕನ್ನಡಿಗರು ತಮ್ಮ ಜೀವನದಲ್ಲಿ ನೋಡಿರಬಹುದಾದ ಚಿತ್ರಗಳಲ್ಲಿ ಪ್ರಾಯಶಃ ಅರ್ಧಕ್ಕಿಂತ ಹೆಚ್ಚಿನ ಸಂಖ್ಯೆಯವು ರಾಜ್ ಅವರ ನಟನೆಯದೇ ಆಗಿದ್ದರೆ ಆಶ್ಚರ್ಯವಿಲ್ಲ. ಅಷ್ಟರಮಟ್ಟಿಗೆ ಅವರು ನಮ್ಮ ಬದುಕಿನ ಭಾಗ.

ಸಾಮಾನ್ಯ ಅಭಿಮಾನಿಯಾಗಿದ್ದ ನಾನು ಅವರನ್ನು ಹತ್ತಿರದಿಂದ ನೋಡಲು ಸಾಧ್ಯವಾದದ್ದು ಗೋಕಾಕ್ ಚಳುವಳಿಯ ಕಾಲದಲ್ಲಿ. ಪ್ರೌಢಶಾಲೆಗಳಲ್ಲಿ ಕನ್ನಡವನ್ನು ಏಕೈಕ ಪ್ರಥಮ ಭಾಷೆಯಾಗಿ ಮಾಡಲು ಶಿಫಾರಸು ಮಾಡಿದ್ದ ಗೋಕಾಕ್ ಅವರ ವರದಿಯನ್ನು ಜಾರಿಗೊಳಿಸಲು ಕರ್ನಾಟಕ ಸರ್ಕಾರ ಹಿಂದೆ ಮುಂದೆ ನೋಡಿದ ಸಂದರ್ಭದಲ್ಲಿ ಇಡೀ ಕನ್ನಡ ನಾಡು ಸೆಟೆದು ನಿಂತಿತು. ಕೆಲವು ದಿನಗಳ ಕಾಲ ಎಲ್ಲೆಡೆ ನಡೆದ ಹೋರಾಟದ ಫಲವಾಗಿ ಮೊದಲು ಕನ್ನಡವನ್ನು ಕಡ್ಡಾಯಮಾಡಿ ಮೂರು ಭಾಷೆಗಳಿಗೆ ಸಮಾನ ಸ್ಥಾನ ನೀಡುವ ಆದೇಶವನ್ನು ಸರ್ಕಾರ ಹೊರಡಿಸಿತು. ಕನ್ನಡ ಕಡ್ಡಾಯವಾಯಿತಲ್ಲ ಎಂದು ಅನೇಕರು ಚಳುವಳಿಯಿಂದ ದೂರ ಸರಿದರು; ಅನೇಕ ಹಿರಿಯರು ಅಷ್ಟಕ್ಕೇ ತೃಪ್ತಿಪಟ್ಟರು. ಹಾಗಾಗಿ ಚಳುವಳಿ ತನ್ನ ತೀವ್ರತೆಯನ್ನು ಕಳೆದುಕೊಂಡಿತು. ಕನ್ನಡಕ್ಕೆ ಅಗ್ರಸ್ಥಾನ ದೊರೆಯಬೇಕೆಂದು 'ಗೋಕಾಕ್ ವರದಿ ಪೂರ್ತಿ ಜಾರಿಗೆ ಬರಲಿ' ಎಂಬ ಮಂತ್ರದೊಂದಿಗೆ ಚಳುವಳಿ ಮತ್ತೆ ನಿಧಾನವಾಗಿ ತೇಜಿಯನ್ನು ಪಡೆಯಿತು. ಎಲ್ಲ ಕಡೆ ಜೈಲು ತುಂಬುವ ಕಾರ್ಯಕ್ರಮ ನಡೆಯಿತು. ಆ ಸನ್ನಿವೇಶದಲ್ಲಿಯೇ ಡಾ. ರಾಜಕುಮಾರ್ ರಂಗ ಪ್ರವೇಶಿಸಿದ್ದು. ಕಬ್ಬನ್ ಪಾರ್ಕ್‌ನಲ್ಲಿ ಸಾಹಿತಿಗಳ ಕಲಾವಿದರ ಬಳಗದ ಆಶ್ರಯದಲ್ಲಿ ಚಳುವಳಿ ನಡೆಯುತ್ತಿದ್ದ ಸ್ಥಳಕ್ಕೆ ಅವರು ಬಂದಾಗ, ಅಭಿಮಾನಿಗಳ ತಪ್ಪು

ತಿಳಿವಳಿಕೆಯಿಂದಾಗಿ ಗಲಭೆಯಾಯಿತು. ಮಧ್ಯೆ ಸಿಲುಕಿಕೊಂಡ ಡಾ. ಜಿ.ಎಸ್. ಶಿವರುದ್ರಪ್ಪನವರೂ ನಾನೂ ಅಲ್ಲಿದ್ದ ಒಂದು ಕ್ಲಬ್‌ಗೆ ಹೋಗಲು ಪ್ರಯತ್ನಿಸಿ ನಮ್ಮನ್ನು ಒಳಗೆ ಬಿಡದಿದ್ದುದರಿಂದ ಆತಂಕದಲ್ಲಿಯೇ ಕಾರ್ಪೊರೇಷನ್‌ವರೆಗೂ ನಡೆದು ಬಂದು ಪಾರಾದೆವು.

ಮುಂದೆ ಅವರ ನೇತೃತ್ವದಲ್ಲಿ ಇಡೀ ಕನ್ನಡ ಚಿತ್ರನಟರ ತಂಡ ಕರ್ನಾಟಕದೆಲ್ಲೆಡೆ ಪ್ರವಾಸ ಮಾಡಿ, ಮುಖ್ಯವಾದ ಸ್ಥಳಗಳಲ್ಲಿ ಸಭೆ ನಡೆಸಿ ಕನ್ನಡಕ್ಕೆ ಶಿಕ್ಷಣದಲ್ಲಿ ಅಗ್ರಪಟ್ಟ ನೀಡಲು ಒತ್ತಾಯಿಸಿತು. ಆಗ ಬೆಂಗಳೂರಿನ ಚಳುವಳಿಯಲ್ಲಿ ಮುಖ್ಯ ಪಾತ್ರ ವಹಿಸಿದ್ದ 'ಸಾಹಿತಿಗಳ ಕಲಾವಿದರ ಬಳಗ' ಚಿತ್ರನಟರ ಪ್ರವಾಸವು ನಡೆಯಲು ಒಳ ಪ್ರಯತ್ನ ನಡೆಸಿತ್ತು. ಆಗ ನಾನೂ ಬಳಗದ ಒಬ್ಬ ಸಕ್ರಿಯ ಕಾರ್ಯಕರ್ತ. ಹೀಗಾಗಿ ಡಾ. ಚಿದಾನಂದಮೂರ್ತಿಯವರೊಂದಿಗೆ ಗಾಂಧಿನಗರದ ವಜ್ರೇಶ್ವರಿ ಕಂಬೈನ್ಸ್ ಸಂಸ್ಥೆಯ ಕಚೇರಿಗೆ ಹಲವು ಬಾರಿ ಎಡೆತಾಕಿ ನಟರ ಪ್ರವಾಸ, ಡಾ. ರಾಜ್ ಅದರಲ್ಲಿ ಭಾಗವಹಿಸುವುದು ಮುಂತಾದುದರ ಬಗ್ಗೆ ಮಾತಾಡಿದ್ದೆವು. ಈ ಪ್ರವಾಸದಿಂದ ಹೆದರಿದ ಸರ್ಕಾರ ಹೊಸ ಭಾಷಾ ಸೂತ್ರವೊಂದನ್ನು ವಿಧಾನಮಂಡಲದ ಉಭಯ ಸದನಗಳ ಮುಂದಿಟ್ಟು ಒಪ್ಪಿಗೆ ಪಡೆಯಿತು. ಆದರೆ ಅದನ್ನು ನಾನಾ ಸಂಸ್ಥೆಗಳು ಕೋರ್ಟಿನಲ್ಲಿ ಪ್ರಶ್ನಿಸಿದ್ದರಿಂದ ಅದರ ಅನುಷ್ಠಾನ ವಿಳಂಬಗೊಂಡಿತು. ಆ ಸನ್ನಿವೇಶದಲ್ಲಿ ಡಾ. ರಾಜ್ ಚಳುವಳಿಗೆ ಬೆಂಬಲ ನೀಡಿರದಿದ್ದರೆ ಆ ಮಟ್ಟದ ಹೋರಾಟ ಅಸಾಧ್ಯವಾಗುತ್ತಿತ್ತು. ರಾಜಕುಮಾರರ ಅಭಿಮಾನಿಗಳ ಬೆಂಬಲ ದೊಡ್ಡ ಮಟ್ಟದಲ್ಲಿ ಸಿಕ್ಕಿದ್ದು ಸರ್ಕಾರವನ್ನು ಎದೆಗಡಿಸಿತ್ತು.

ಚಿತ್ರನಟರ ತಂಡ ಕರ್ನಾಟಕದ ವಿವಿಧೆಡೆ ಪ್ರವಾಸ ಮುಗಿಸಿ ವಾಪಸಾಗುವಾಗ ಡಾ. ಚಿದಾನಂದಮೂರ್ತಿಯವರೊಂದಿಗೆ ನಾನೂ ಮೈಸೂರಿನಿಂದ ಆ ತಂಡದ ಜೊತೆ ಬೆಂಗಳೂರಿಗೆ ಬಂದೆ. ತಂಡ ಮೈಸೂರನ್ನು ತಲುಪುವ ದಿನ ನಾವಿಬ್ಬರೂ ಬೆಂಗಳೂರಿನಿಂದ ಮೈಸೂರಿಗೆ ಹೋಗುತ್ತ ವಿವಿಧ ಜಾಗಗಳಲ್ಲಿ ಸಭೆ ನಡೆಯಲು ಆದ ಏರ್ಪಾಟುಗಳನ್ನು ನೋಡಿದ ನೆನಪು. ಮೈಸೂರಿನಿಂದ ಬೆಂಗಳೂರಿನ ಕಡೆ ಸಾಗುತ್ತ ತಂಡವು ಮಂಡ್ಯ, ಮದ್ದೂರು, ಚೆನ್ನಪಟ್ಟಣಗಳಲ್ಲಿ ಸಭೆ ನಡೆಸುವ ವ್ಯವಸ್ಥೆ. ನಾವಿಬ್ಬರೂ ಹಿಂದಿನ ದಿನ ಹೋಗುತ್ತ ಚೆನ್ನಪಟ್ಟಣದಲ್ಲಿ ಸಭೆಯ ಏರ್ಪಾಟಿನ ಹೊಣೆ ಹೊತ್ತ ಡಾಕ್ಟರೊಬ್ಬರನ್ನು ಭೇಟಿಮಾಡಿ ಮಾತಾಡಿದ ನೆನಪು ನನಗಿದೆ. ಅಂದು ರಾತ್ರಿ ರಾಜ್ ನೇತೃತ್ವದ ನಟರ ತಂಡ ಬಿಡಾರ ಮಾಡಲಿದ್ದ ಹೋಟಲಿನಲ್ಲೇ ನಾವೂ ಹೋಗಿ ಉಳಿದುಕೊಂಡೆವು.

ಮಾರನೆಯ ಬೆಳಿಗ್ಗೆ ಮೈಸೂರಿನ ದಿವಾನ್ ರಂಗಾಚಾರ್ಲು ಪುರಭವನದ ಮೈದಾನದಲ್ಲಿ ಸಭೆ. ಮೈದಾನ ತುಂಬಿ ಜನರು ರಸ್ತೆಗಳಲ್ಲೂ ಜಮಾಯಿಸಿದ್ದರು. ಪಾಟೀಲ ಪುಟ್ಟಪ್ಪ ಮುಂತಾದವರೆಲ್ಲ ರಾಜ್ ಅವರೊಂದಿಗೆ ಬಂದಿದ್ದರು. ರಾಜ್ ಅವರಿಗೆ ಹತ್ತಿರವಿದ್ದವರಲ್ಲಿ ಚಿತ್ರನಟರಾದ ಲೋಕೇಶ್ ಮತ್ತು ಅಶೋಕ್ ಕೂಡ

ಇದ್ದರು. ಸಾಮಾನ್ಯವಾಗಿ ಎಲ್ಲರ ಭಾಷಣಗಳ ನಂತರ ಕೊನೆಯಲ್ಲಿ ರಾಜಕುಮಾರರ ಭಾಷಣ. ಅವರು ಎದ್ದು ನಿಂತರೆಂದರೆ ಜನರ ಕೋಲಾಹಲ ಮುಗಿಲು ಮುಟ್ಟುತ್ತಿತ್ತು. ರಾಜ್ ಜನರನ್ನು "ಅಭಿಮಾನಿ ದೇವತೆಗಳೇ" ಎಂದು ಸಂಬೋಧಿಸುವ ಪರಿಪಾಟ. ಅವರ ಈ ಮಾತಿಗೆ ಜನರಿಂದ ಉತ್ಸಾಹಪೂರ್ಣ ಪ್ರತಿಕ್ರಿಯೆ. ಅವರ ಮಾತುಗಳಲ್ಲಿ ಭಾಷಾಸೂತ್ರದ ಬಗ್ಗೆ ಹೆಚ್ಚೇನೂ ಪ್ರಸ್ತಾಪವಿರುತ್ತಿರಲಿಲ್ಲ. ಆದರೆ ಜನರಲ್ಲಿ ಕನ್ನಡದ ಬಗ್ಗೆ ಅರಿವು ಮೂಡಿಸುವ ದಿಸೆಯಲ್ಲಿ ಅವರು ಚಳುವಳಿಯಲ್ಲಿ ಪಾತ್ರ ವಹಿಸಿದ್ದೇ ಸಾಕಾಗಿತ್ತು.

ಸಭೆ ನಡೆದ ಮಂಡ್ಯದ ಕ್ರೀಡಾಂಗಣ ಭಾರಿಯದು. ಆದರೂ ಜನರ ನೂಕು ನುಗ್ಗಲು ಹೇಳತೀರದು. ಮುಂದೆ ಚೆನ್ನಪಟ್ಟಣದ ಬಸ್‌ಸ್ಟಾಂಡ್ ಪಕ್ಕದ ಮೈದಾನದಲ್ಲಿ ಹೀಗೆಯೇ ಸಭೆ ನಡೆಯಿತು. ಅದರಲ್ಲಂತೂ ವೇದಿಕೆಯ ಮೇಲೆ ಅವರ ಹತ್ತಿರವೇ ಇದ್ದ ನಾನು ರಾಜ್ ಅವರ ಮಾತಿಗೆ ಜನ ಪ್ರತಿಕ್ರಿಯೆ ವ್ಯಕ್ತಪಡಿಸುವುದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದೆ. ತಮ್ಮ ಮತ್ತು ಅಭಿಮಾನಿಗಳ ನಡುವಣ ಸಂಬಂಧ ಜನ್ಮಾಂತರದ್ದು ಎಂದು ಅವರು ಹೇಳಿದಾಗ ಜನರ ಕೂಗು ಆಕಾಶದೆತ್ತರಕ್ಕೇರಿತು. ಮುಖ್ಯ ನಟರೂ ಇತರರೂ ಭಾಷಣ ಮಾಡುತ್ತಿದ್ದರು. ಕೆಲವರು ಗೋಕಾಕ್ ವರದಿಯ ಬಗ್ಗೆ ವಿವರಿಸಿದರೆ ಉಳಿದವರು ಕನ್ನಡಕ್ಕೆ ಸಿಕ್ಕಬೇಕಾದ ಮಾನ್ಯತೆಯ ಬಗ್ಗೆ ಹೇಳುತ್ತಿದ್ದರು. ಹೇಳುವ ವಿಚಾರಗಳಲ್ಲಿ ಹೊಸತೇನಿರಲು ಸಾಧ್ಯ? ಆದರೆ ಎಲ್ಲೆಡೆ ಕನ್ನಡ ಮೊಳಗುತ್ತಿತ್ತು.

ಸಭೆಗಳು ಎಲ್ಲೆಡೆ ಯಥಾಪ್ರಕಾರ ನಡೆದರೂ ನಟರನ್ನು, ಅದರಲ್ಲೂ ರಾಜಕುಮಾರ್ ಅವರನ್ನು ಕಣ್ತುಂಬ ನೋಡಲೆಂದೇ ಜನ ಸೇರುತ್ತಿದ್ದರು. ರಾಜಕುಮಾರರು ತಮ್ಮ ಬಗ್ಗೆ ಮಾತ್ರ ಹೇಳಿಕೊಳ್ಳುವರಲ್ಲ, ಕನ್ನಡದ ಬಗ್ಗೆ ಹೆಚ್ಚು ಹೇಳುವುದಿಲ್ಲವಲ್ಲ ಎಂಬ ಅಸಮಾಧಾನ ನನ್ನನ್ನು ಕೆಲವು ವೇಳೆ ಕಾಡುತ್ತಿತ್ತು. ಕನ್ನಡವನ್ನು ಜನ ಕಾಣಬೇಕಾದ ರೀತಿಯ ಬಗ್ಗೆ ಅವರ ಬಾಯಿಂದ ಮಾತುಗಳು ಬಂದರೆ ಜನ ಅದನ್ನು ಪಾಲಿಸಿಯಾರು ಎಂಬ ನಂಬಿಕೆ ನನ್ನದು. ಆದರೆ ಬರಬರುತ್ತ ನನಗೆ ತಿಳಿಯತೊಡಗಿತು. ಜನರಿಗೆ ಕನ್ನಡವೆಂದರೆ ಕನ್ನಡ ಸಿನಿಮಾಗಳು, ಅದರಲ್ಲೂ ರಾಜಕುಮಾರ್. ಏಕೆಂದರೆ ಅವರ ಅಭಿಮಾನಿಗಳಲ್ಲಿ ಸಾಕಷ್ಟು ಮಂದಿ ಅನಕ್ಷರಸ್ಥರು; ಅವರಿಗೆ ಕನ್ನಡವಲ್ಲದೆ ಬೇರೆ ಭಾಷೆ ಗೊತ್ತಿಲ್ಲ. ಹೀಗಾಗಿ ಸಮಸ್ಯೆಗಳು ಅವರಿಗೆ ಅರ್ಥವಾಗಲು ಶಕ್ಯವಿರಲಿಲ್ಲ. ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡಕ್ಕೆ ಬಂದಿರಬಹುದಾದ ಕುತ್ತಿನ ಬಗ್ಗೆ; ಅದರಲ್ಲಿ ಈಗ ಕನ್ನಡದ ಸ್ಥಾನ ಏನಿದೆ, ಏನಾಗಬೇಕೆಂಬುದರ ಬಗ್ಗೆ ಅರಿವಿರಲು ಸಾಧ್ಯವಿರಲಿಲ್ಲ. ರಾಜಕುಮಾರರಂತಹವರು ಚಳುವಳಿ ಮಾಡುತ್ತಾರೆಂದರೆ ಕನ್ನಡಕ್ಕೆ, ಅಂದರೆ ತಮ್ಮ ಅಸ್ತಿತ್ವಕ್ಕೇ, ಏನೋ ಗಂಡಾಂತರ ಒದಗಿದೆ ಎಂಬ ಭಾವನೆ ಅವರದು. ಜನ ತಮ್ಮ ಕನ್ನಡತನವನ್ನು ಮೆರೆಯುತ್ತಿದ್ದುದು ಈ ರೀತಿ. ಡಾ. ರಾಜಕುಮಾರರನ್ನು ಕನ್ನಡದ ಪ್ರತಿಮೆಯಾಗಿ ಜನ ಕಾಣುತ್ತಿದ್ದುದಕ್ಕೆ ಇನ್ನೂ ಒಂದು

ಕಾರಣವಿರಬೇಕು. ಅವರು ಬೇರಾವ ಭಾಷೆಯ ಸಿನಿಮಾಗಳಲ್ಲೂ ನಟಿಸಿದವರಲ್ಲ, ಅದು ಅವರ ಕನ್ನಡ ನಿಷ್ಠೆಯ ಪ್ರತೀಕ. ತಾವು ಹೆಚ್ಚು ಓದಿದವರಲ್ಲ, ಕೇವಲ ಮೂರನೆಯ ತರಗತಿಯವರೆಗೆ ಮಾತ್ರ ತಮ್ಮ ಓದು ಎಂದು ಎಲ್ಲಡೆ ಹೇಳಿಕೊಳ್ಳು ತ್ತಿದ್ದರು. ಈ ಸರಳತೆಯೇ ಅವರನ್ನು ಜನರಿಗೆ ಮತ್ತಷ್ಟು ಹತ್ತಿರವಾಗಿಸುತ್ತಿದ್ದ ಅಂಶ.

ಒಂದು ಊರಿನ ಸಭೆ ಮುಗಿಸಿ ಮುಂದಿನೂರಿಗೆ ಹೋಗುವ ದಾರಿಯ ಗುಂಟ ಎಲ್ಲ ಸಣ್ಣಪುಟ್ಟ ಊರುಗಳ ಬಳಿಯೂ ಜನ ಜಮಾಯಿಸಿ ಹಾದು ಹೋಗುವ ನಟರನ್ನು, ರಾಜಕುಮಾರರನ್ನು ಕಾಣುವ ಹಂಬಲದಿಂದ ಕಾದಿರುತ್ತಿದ್ದರು. ನಾವಿದ್ದ ಕಾರಿನಲ್ಲಿಯೂ ಒಬ್ಬ ನಟರಿದ್ದರು, ಪೋಷಕ ಪಾತ್ರ ವಹಿಸುವವರು. ಅವರು ಕನ್ನಡದ ಬಾವುಟವೊಂದನ್ನು ಹಿಡಿದು ಕಿಟಕಿಯ ಹೊರಗೆ ಕೈಚಾಚುತ್ತಿದ್ದರು. ಕನ್ನಡ ಬಾವುಟ ಕಂಡವರೇ ಜನ 'ರಾಜಕುಮಾರ್ ಜೈ' ಎಂದು ಕೂಗುತ್ತ ಕಾರಿನ ಬಳಿ ಮುಗಿ ಬೀಳುತ್ತಿದ್ದರು. ಕಾರು ಮುಂದೆ ಹೋಗುವುದೇ ಕಷ್ಟವಾಗುತ್ತಿತ್ತು. ಚಲಿಸುವ ಕಾರು ಎಲ್ಲಿ ಯಾವನಾದರ ಮೇಲೆ ಹರಿದುಬಿಡುತ್ತದೆಯೋ ಎಂಬ ಅಳುಕು ನನ್ನದು. ಅಲ್ಲದೆ ಜನರ ಗುಂಪು ಕಾರಿನ ಬಳಿ ಬಂದು ಧಿಡೀರೆಂದು ಮೇಲೆ ಬೀಳುತ್ತಿದ್ದರು. ಆಗೆಲ್ಲ ನನಗೆ ಆತಂಕ. ನಿಜವಾಗಿಯೂ ರಾಜಕುಮಾರರನ್ನು ಕಾರಿನಲ್ಲಿ ಕಂಡಿದ್ದರೆ ಜನ ಹೇಗೆ ವರ್ತಿಸುತ್ತಿದ್ದರೋ ಊಹಿಸಲೂ ಕಷ್ಟ. ತಮ್ಮ ಕಡೆ ಜನರು ಬರಲಿ, ತನ್ನ ಗುರುತಿಸಲಿ ಎಂಬ ಚಪಲದಿಂದಲೇ ಆ ನಟ ಕನ್ನಡ ಬಾವುಟ ಪ್ರದರ್ಶನ ಮಾಡುತ್ತಿದ್ದುದು ಎಂಬುದು ಗೊತ್ತಾಯಿತು. ಬಾವುಟವನ್ನು ತೋರಿಸಬಾರದೆಂದು ಕೊನೆಗೆ ಅವರನ್ನು ಬೇಡಿಕೊಂಡು ನಿಲ್ಲಿಸಬೇಕಾಯಿತು.

ಚನ್ನಪಟ್ಟಣದ ಸಭೆ ಮುಗಿಸಿ ಎಲ್ಲರೂ ಹಲವಾರು ಕಾರುಗಳಲ್ಲಿ ವಾಪಸು ಬರುವಾಗ ಕೆಂಗಲ್ ಹತ್ತಿರದ ಆಂಜನೇಯನ ದೇವಸ್ಥಾನಕ್ಕೆ ಹೋಗಲು ರಾಜ್ ಬಯಸಿ ಇಳಿದರು. ಗುಡಿ ಹೊಕ್ಕು ಒಂದೆರಡು ನಿಮಿಷದಲ್ಲಿ ಪೂಜೆ ಮುಗಿಸಿ ಹೊರ ಬರುವಷ್ಟರಲ್ಲಿಯೇ, ದೊಡ್ಡ ಗುಂಪು ಅವರನ್ನು ಕಾಣಲು ಸೇರಿಬಿಟ್ಟಿತ್ತು. ಅವರಿಗೆ ಹೇಗೆ ಸುದ್ದಿ ಮುಟ್ಟಿತೋ, ಅಷ್ಟೊಂದು ಮಂದಿ ಎಲ್ಲಿದ್ದರೋ ಅಂತೂ ಒಂದು ಕ್ಷಣದಲ್ಲಿ ನೂರಾರು ಮಂದಿ ಜಮಾಯಿಸಿಬಿಟ್ಟರು. ಅವರಿಂದ ತಪ್ಪಿಸಿಕೊಳ್ಳಲು ರಾಜ್ ಅವರಿಗೆ ಕಷ್ಟವೇ ಆಗುತ್ತಿತ್ತು. ಸರಸರ ನಡೆದು ಸುರಕ್ಷಿತ ಸ್ಥಳ ಸೇರಬೇಕಾಗಿತ್ತು. ಜನಪ್ರಿಯತೆ ಎಂಬುದು ಎಂಥ ಬಂಧನ, ಎಂಥ ಹಿಂಸೆ ಎಂಬುದು ಇಂಥ ಸಂದರ್ಭಗಳಲ್ಲಿ ತಿಳಿಯುತ್ತದೆ. ಜನಪ್ರಿಯತೆ ಹೆಚ್ಚಾದಷ್ಟೂ ಸ್ವಾತಂತ್ರ್ಯ ಕಡಿಮೆ, ಬಯಸಿದಂತೆ ಬದುಕುವುದು ಕಷ್ಟ.

ಅಂದುಕೊಂಡ ಕಡೆಗಳಲ್ಲೆಲ್ಲ ಸಭೆಗಳು ನಡೆದು ಎಲ್ಲರೂ ಬೆಂಗಳೂರಿನ ಕಡೆ ಬಂದೆವು. ರಾಜ್‌ಕುಮಾರ್ ಅವರ 'ಪುನೀತ್ ಫಾರಂ'ಗೆ ಅವರು ಬಂದಾಗ ನಾವು ಬಳಗದ ಕೆಲವು ಕಾರ್ಯಕರ್ತರೂ ಹಾಗೂ ಇತರ ಕೆಲವರು ಅವರಿಗೆ ಕೃತಜ್ಞತೆ ಅರ್ಪಿಸಿದೆವು. ಎಲ್ಲರಿಗೂ ಎಳನೀರು ಕೊಡಿಸಿದರು. ಅಲ್ಲಿಂದ ಹೊರಡುವಾಗ ಒಬ್ಬ

ಹಿರಿಯ ನಟರು, "ಅಂತೂ ನೀವಂದುಕೊಂಡ ಹಾಗೇ ನಡೆಯಿತಲ್ಲ, ಸ್ವಾಮಿ" ಎಂದರು. ಈ ಪ್ರವಾಸ ಇತ್ಯಾದಿಗಳೆಲ್ಲ ಅವರಿಗಷ್ಟೇ ಅಲ್ಲ, ಮತ್ತೂ ಕೆಲವರಿಗೆ ಇಷ್ಟವಿರದಿದ್ದುದು ತಿಳಿದಿತ್ತು. ಕೆಲವರು ಇದರಿಂದ ದೂರವಿದ್ದರೆ ಮತ್ತೆ ಕೆಲವರು ರಾಜ್ ಅವರ ಮುಲಾಜಿಗೆ ಅವರೊಡನೆ ಸೇರಿದ್ದರು, ಅಷ್ಟೆ.

ಈ ಹೋರಾಟಕ್ಕೆ ಮಣಿದ ಸರ್ಕಾರ ಕನ್ನಡಕ್ಕೆ ಹೆಚ್ಚಿನ ಅಂಕಗಳನ್ನು ನಿಗದಿಪಡಿಸಿದ ಒಂದು ಭಾಷಾಸೂತ್ರವನ್ನು ಒಪ್ಪಿದ ಮೇಲೆ ಬೆಂಗಳೂರಿನಲ್ಲಿ ಒಂದು ವಿಜಯೋತ್ಸವ ಕಾರ್ಯಕ್ರಮ ಏರ್ಪಾಟಾಯಿತು, ಬೆಂಗಳೂರಿನ ನ್ಯಾಷನಲ್ ಹೈಸ್ಕೂಲು ಮೈದಾನದಲ್ಲಿ. ಅದಕ್ಕೆ ಬೇಕಾದ ಏರ್ಪಾಟು ಮಾಡಲು ಸಾಹಿತಿಗಳ ಕಲಾವಿದರ ಬಳಗವು ಅನೇಕ ಕಿರು ಜಾಗೃತಿ ಸಭೆಗಳನ್ನು ನಡೆಸಿ ಅವುಗಳಲ್ಲಿ ಪುಡಿಗಾಸುಗಳನ್ನು ಸಂಗ್ರಹಿಸಿತ್ತು. ಆ ವಿಜಯೋತ್ಸವದ ವೇದಿಕೆಯನ್ನು ಸಿದ್ಧಪಡಿಸಿದ್ದವರು ಬಳಗದ ಒಬ್ಬ ಸಂಚಾಲಕರಾದ ಜಿ. ಕೆ. ಸತ್ಯ. ಅವರು. ಅಂದು ಬೆಳಿಗ್ಗೆಯಿಂದಲೇ ಜನ ಸೇರ ತೊಡಗಿದ್ದರು. ರಾಜಕುಮಾರ್ ಅವರು ಬರುವ ಮೊದಲು ಅಂದಿನ ಸಭೆಯಲ್ಲಿ ಭಾಗವಹಿಸಬೇಕಾಗಿದ್ದ ಹಿರಿಯ ಕವಿ ಎಂ. ಗೋಪಾಲ ಕೃಷ್ಣ ಅಡಿಗರನ್ನು ಕರೆತರಲು ನಾನು ಜಯನಗರದಲ್ಲಿದ್ದ ಅವರ ಮನೆಗೆ ಹೋದೆ. ಅವರು ಸಿದ್ಧಗೊಂಡ ಮೇಲೆ ಇಬ್ಬರೂ ಒಂದು ಆಟೋದಲ್ಲಿ ಹೊರಟೆವು. ನ್ಯಾಷನಲ್ ಹೈಸ್ಕೂಲಿನ ಬಳಿಯ ವಾಣಿವಿಲಾಸ ವೃತ್ತಕ್ಕೆ ಬರುವ ಹೊತ್ತಿಗೆ ಏನೋ ವ್ಯತ್ಯಾಸವಾಗಿದ್ದ ಹಾಗೆ ಕಾಣಿಸಿತು. ನೋಡಿದರೆ ಮೈದಾನ ಖಾಲಿ; ಸಂಜಯ ಟಾಕೀಸಿನ ಕಡೆಗೆ ಹೊಗುವ ಕೆ.ಆರ್. ರಸ್ತೆಯಲ್ಲಿ ಪೊಲೀಸರು ಅಶ್ರುವಾಯು ಸಿಡಿಸುತ್ತಿದ್ದ ದೃಶ್ಯ ಕಾಣಿಸಿತು! ನಾನು ಆಟೋವನ್ನು ಹಿಂದಕ್ಕೆ ತಿರುಗಿಸಲು ಹೇಳಿ ಅಡಿಗರನ್ನು ಸುರಕ್ಷಿತವಾಗಿ ಮನೆ ಸೇರಿಸಿದೆ. ಅಂಥ ಗಲಾಟೆಗಳನ್ನು ಕಂಡಿರದಿದ್ದ ಅಡಿಗರು "ನೀನು ನನ್ನ ಪ್ರಾಣ ಉಳಿಸಿದೆ ಕಣಯ್ಯ" ಅಂದಿದ್ದರು. ಮಾರನೆಯ ದಿನವೇ ಗೊತ್ತಾದದ್ದು, ಗಲಭೆಯಾಗಿ ಗೋಲಿಬಾರೂ ಆಗಿ ಒಬ್ಬರು ಸತ್ತ ವಿಷಯ. ಆ ಮುಂದೆ ಬಳಗದ ಯಾವುದಾದರೂ ಸಭೆಗೆ ಕರೆಯಲು ಹೋದರೆ ಅಡಿಗರು "ರಾಜಕುಮಾರ್ ಅಭಿಮಾನಗಳು ಬರೋಲ್ಲ ತಾನೇ?" ಅನ್ನುತ್ತಿದ್ದರು.

ರಾಜಕುಮಾರ್ ಚಳುವಳಿಗೆ ಧುಮುಕಿದ್ದರಲ್ಲಿ ಅವರ ಸ್ವಾರ್ಥವಿತ್ತು ಎಂದು ಕೆಲವರು ಅಡಿಕೊಂಡರು. ಅವರ ಜನಪ್ರಿಯತೆ ಕುಗ್ಗಿ ಅವರ ಚಿತ್ರಗಳು ಯಶಸ್ಸು ಕಾಣುತ್ತಿರಲಿಲ್ಲ, ಅದಕ್ಕೇ ಅವರು ಚಳುವಳಿಗೆ ಬಂದರು ಎಂಬುದು ಅವರ ಆರೋಪ. ನನಗೆ ಅಷ್ಟೆಲ್ಲ ಸೂಕ್ಷ್ಮಗಳು ಅರ್ಥವಾಗುತ್ತಿರಲಿಲ್ಲ. ಅವರ ಚಿತ್ರಗಳು ಅಂದರೆ, ಕನ್ನಡ ಚಿತ್ರಗಳು ತಾನೇ, ಅವಕ್ಕೆ ಪ್ರಚಾರ ಸಿಕ್ಕಿದರೆ ತಪ್ಪೇನು ಎಂದು ಅಂದುಕೊಳ್ಳುತ್ತಿದ್ದೆ. ಗೋಕಾಕ್ ಚಳುವಳಿ ಮುಗಿದ ಹೊಸತರಲ್ಲಿ ರಾಜ್ ಅವರ ಜನಪ್ರಿಯತೆ ಮುಗಿಲು ಮುಟ್ಟಿತ್ತು. ನೆರೆಯ ಆಂಧ್ರ ಮತ್ತು ತಮಿಳುನಡುಗಳಲ್ಲಿದ್ದಂತೆ ಅವರೂ ಕರ್ನಾಟಕದಲ್ಲಿ ಕನ್ನಡದ ಹೆಸರಿನ ಒಂದು ರಾಜಕೀಯ ಪಕ್ಷದ ನಾಯಕತ್ವ ವಹಿಸಬೇಕೆಂದು ಕೆಲವರು

ಬಯಸಿದರು. ಆದರೆ ಅವರಿಗೆ ಅಂಥ ಆಕಾಂಕ್ಷೆಗಳಿರಲಿಲ್ಲ, ಅವರ ಮನೋಭಾವ ಅದಕ್ಕೆ ತಕ್ಕುದಾಗಿರಲಿಲ್ಲ. ಅದನ್ನವರು ಅನೇಕಬಾರಿ ವ್ಯಕ್ತಪಡಿಸಿದ್ದರು. ಸಾಹಿತಿಗಳ ಕಲಾವಿದರ ಬಳಗವೂ ರಾಜಕೀಯದಲ್ಲಿ ಆಸಕ್ತಿ ಹೊಂದಿರಲಿಲ್ಲ; ಹೇಳಿ ಕೇಳಿ ಅದು ಸಾಹಿತಿಗಳು ಮತ್ತು ಕಲಾವಿದರು ಕನ್ನಡಕ್ಕಾಗಿ ಕಟ್ಟಿಕೊಂಡ ಒಂದು ಸಂಸ್ಥೆ ಎಂಬುದೇ ನಮ್ಮ ಭಾವನೆಯಾಗಿತ್ತು.

ಆ ಮುಂದೆ ಒಮ್ಮೆ ರಾಜಕುಮಾರ್ ಆಪ್ತವಲಯ ಒಂದು ಹೋಟಲಲ್ಲಿ ಸಭೆ ಏರ್ಪಡಿಸಿದ್ದರು. ಯಾಕೆ ಎಂಬುದು ನನಗೆ ಸ್ಪಷ್ಟವಾಗಿ ನೆನಪಿಲ್ಲ. ಅದರಲ್ಲಿ ಬಳಗದ ನಾವೂ ಕೆಲವರಿದ್ದೆವು. ಅದು ಸಾರ್ವಜನಿಕ ಸಭೆಯಾಗಿರಲಿಲ್ಲ; ಪತ್ರಕರ್ತರಿಗೆ ಅವಕಾಶವಿರಲಿಲ್ಲ. ರಾಜಕೀಯದಲ್ಲಿ ತಮಗೆ ಆಸಕ್ತಿಯಿಲ್ಲ ಎಂಬುದನ್ನು ವ್ಯಕ್ತಪಡಿಸಿದ್ದ ರಾಜ್‌ಕುಮಾರ್ ತಾವು ಪತ್ರಿಕೆಗಳನ್ನು ಕೂಡ ಓದುವುದಿಲ್ಲ ಎಂದು ಕೆಲವು ಸಂದರ್ಭ ಗಳಲ್ಲಿ ಹೇಳಿಕೊಂಡಿದ್ದರು. ಆ ಸಭೆಯಲ್ಲಿ ಮಾತನಾಡುತ್ತ ಚಿದಾನಂದಮೂರ್ತಿಗಳು ನೀವು ಪತ್ರಿಕೆಗಳನ್ನು ಓದಬೇಕು, ಸುತ್ತಲಿನ ವಿಷಯಗಳನ್ನು ತಿಳಿದುಕೊಳ್ಳಬೇಕು ಎಂದು ಸೂಚಿಸಿದರು; ಅದಕ್ಕೆ ಅಭಿಮಾನಿಗಳು ತೀವ್ರವಾಗಿ ಪ್ರತಿಭಟಿಸಿದರು. ಆದರೆ ರಾಜ್ ಆಗ ಏನೂ ಹೇಳಲಿಲ್ಲ. ಮುಂದೆ ಮಾತನಾಡಿದಾಗ ಅವರು ತಮಗೆ ರಾಜಕೀಯದಲ್ಲಿ ಆಸಕ್ತಿಯಿಲ್ಲ, ಕಲಾಜೀವನಕ್ಕೇ ತಮ್ಮ ಬಾಳು ಮುಡಿಪು ಎಂಬುದನ್ನು ಪುನರುಚ್ಚರಿಸಿದರೆಂದು ನೆನಪು. ರಾಜಕುಮಾರ್ ಅವರೊಡನೆ ನೇರವಾಗಿ ಚರ್ಚೆ ಮಾಡಲು ಅವಕಾಶವಿರುತ್ತಿರಲಿಲ್ಲ; ಅವರ ಸುತ್ತ ಒಂದು ಕೋಟೆ ಇದ್ದಂತಿತ್ತು. ಆ ಮೂಲಕವೇ ಅವರನ್ನು ತಲುಪಬೇಕಾಗಿತ್ತು. ತಮ್ಮ ಭಾಷಣಗಳಲ್ಲಿ ಅವರು ಪ್ರಸ್ತಾಪಿಸಬೇಕಾದ ಅಂಶಗಳನ್ನು ನೆನಪಿಸಲು ನಾವು ಕೆಲವೊಮ್ಮೆ ಹೋದಾಗ ರಾಜ್ ಅವರು "ಅದನ್ನೆಲ್ಲ ಇಂಥವರಿಗೆ ಹೇಳಿ" ಎಂದು ಒಂದಿಬ್ಬರ ಹೆಸರುಗಳನ್ನು ಹೇಳಿದ್ದು ನೆನಪಿನಲ್ಲಿದೆ, ಹೀಗಾಗಿ ಕುವೆಂಪು ಅವರ ಸುತ್ತ ಒಂದು ಕೋಟೆ ಯಿದ್ದಂತೆಯೇ ರಾಜ್ ಅವರನ್ನೂ ಸಾರ್ವಜನಿಕ ಸಂಪರ್ಕದಿಂದ ದೂರವಿರಿಸಿದ್ದ ಒಂದು ಗುಂಪು ಇತ್ತು ಎನ್ನಿಸುತ್ತದೆ.

ಇದೆಲ್ಲ ಈಗ ಮುಖ್ಯವಾಗುವುದಿಲ್ಲ. ರಾಜಕುಮಾರ್ ಜನಮನದಲ್ಲಿ ನೆಲೆಸಿರುವುದು ಸಾಮಾನ್ಯ ಜನತೆ ಅವರಲ್ಲಿ ತಮ್ಮತನವನ್ನೇ ಕಂಡದ್ದರಿಂದ. ಹಿಂದೆಯೇ ಹೇಳಿದಂತೆ ಅವರಿಗೆ ರಾಜ್ ಕನ್ನಡದ ಪ್ರತೀಕ. ಸಂಘಗಳಿಗೆ ತಮ್ಮ ಹೆಸರನ್ನು ಬಳಸಿಕೊಳ್ಳುವುದನ್ನು ಒಂದು ಸಂದರ್ಭದಲ್ಲಿ ಅವರು ವಿರೋಧಿಸಿದಾಗ ಕೆಲವು ರಾಜಕುಮಾರ್ ಅಭಿಮಾನಿ ಸಂಘಗಳು ತಮ್ಮ ಹೆಸರನ್ನು ಕನ್ನಡ ಅಭಿಮಾನಿ ಸಂಘಗಳೆಂದು ಬದಲಾಯಿಸಿಕೊಂಡವು. ಹೀಗೆ ಸಾವಿರಾರು ಮಂದಿಗೆ ರಾಜಕುಮಾರ್ ಮತ್ತು ಕನ್ನಡ ಸಮಾನಾರ್ಥಕ ಪದಗಳು.

☆ – ☆ – ☆

# ಕಣ್ಣ ಮುಂದೇ ಬೆಳೆದ ದೇವರು

ದೊಡ್ಡದನ್ನು ಸಾಧಿಸಿದ ಅಥವಾ ಇನ್ನಾವುದಾದರೂ ಅಸಾಧಾರಣ ವಾದುದನ್ನು ಮಾಡಿದ ಹುಡುಗರನ್ನು ಕಂಡು ದೊಡ್ಡವರು "ನಮ್ಮ ಕಣ್ಣ ಮುಂದೆ ಬೆಳೆದ ಹುಡುಗ" ಇಷ್ಟೆಲ್ಲ ಮಾಡಿಬಿಟ್ಟನಲ್ಲ ಎಂದು ಉದ್ಗಾರ ತೆಗೆಯುತ್ತಾರೆ. ದೇವರುಗಳು ಹಾಗೆಯೇ. ಆ ಜಾಗದಲ್ಲಿ ಇಲ್ಲದೆಯೇ ಹೋಗಿದ್ದ ದೇವರು ನಿಮ್ಮ ಕಣ್ಣ ಮುಂದೆಯೇ ಬೃಹತ್ತಾಗಿ ಬೆಳೆದುಬಿಟ್ಟುದನ್ನು ಕಂಡು ನಿಮಗೆ ಬೆರಗು ತರಬಹುದು, ವಾಮನ ತ್ರಿವಿಕ್ರಮನಾಗುವುದು ಎಂದರೆ ಇದೇ ಇರಬೇಕು.

ಬಹು ಹಿಂದೆ ಬಹು ದೊಡ್ಡ ದೈವಗಳೆನ್ನಿಸಿಕೊಂಡವು ಬರಬರುತ್ತ ಹಿಂದೆ ಸರಿದು ಹೊಸ ದೇವರುಗಳು ಪಟ್ಟಕ್ಕೇರುವುದನ್ನು ವಿಸೀ ತಮ್ಮ 'ಕಸ್ಮೈ ದೇವಾಯ?' ಎಂಬ ಕವನದಲ್ಲಿ ಪ್ರಸ್ತಾಪಿಸುತ್ತಾರೆ; "ಅಂದಿನಾ ದೇವರುಗಳೆಲ್ಲ ಮಡಿದುರುಳಿಹರು" ಎಂದು ಉದ್ಗರಿಸುತ್ತಾರೆ. ನಾನು ಈಗ ಕುರಿತು ಹೇಳುತ್ತಿರುವುದು ದೇವಸ್ಥಾನದ ದೇವರುಗಳನ್ನು ಕುರಿತು. ಒಂದು ಕಾಲದಲ್ಲಿ ಯಾರಿಗೂ ಗೊತ್ತೇ ಇರದಿದ್ದ ದೇವಸ್ಥಾನವೊಂದು ಹೇಗೆ ಜನಪ್ರಿಯವಾಗಿ ಚಟುವಟಿಕೆಯ ಕೇಂದ್ರವಾಗಿಬಿಡುತ್ತದೆ ಎಂಬುದನ್ನು ಕಂಡ ದೇವಸ್ಥಾನಗಳನ್ನು ನೆನೆಪಿಸಿಕೊಂಡರೆ ತಿಳಿಯುತ್ತದೆ. ಒಂದು ಕಾಲದಲ್ಲಿ ಪ್ರಸಿದ್ಧವಾಗಿದ್ದ ದೇವಸ್ಥಾನ ಬರುಬರುತ್ತ ಯಾವುದೋ ಕಾರಣಕ್ಕೆ ತನ್ನ ಜನಪ್ರಿಯತೆಯನ್ನು ಕಳೆದುಕೊಂಡಿರಬಹುದು. "ಅತ್ತೆಗೊಂದು ಕಾಲ ಸೊಸೆಗೊಂದು ಕಾಲ" ಎನ್ನುತ್ತದೆ ಗಾದೆ. ಹಾಗೆಯೇ ಒಬ್ಬೊಬ್ಬ ದೇವರಿಗೂ ಒಂದೊಂದು ಕಾಲವಿದ್ದಂತೆ ತೋರುತ್ತದೆ.

ಎಂ. ಎ. ಆದ ಮೇಲೆ ಕೆಲವು ಕಡೆಗಳಲ್ಲಿ ಕೆಲಸ ಮಾಡಿ ಕೊನೆಗೆ ಮೂವತ್ತೆಂಟು ವರುಷಗಳ ಹಿಂದೆ ನಾನು ಬೆಂಗಳೂರು ದಕ್ಷಿಣದಲ್ಲಿರುವ ಈ ಕಾಲೇಜಿಗೆ ಮೇಷ್ಟರಾಗಿ ಸೇರಿದೆ. ಬಂದ ಹೊಸತರಲ್ಲಿಯೇ ನಮ್ಮ ಪ್ರಿನ್ಸಿಪಾಲರು ಒಂದು ಜವಾಬ್ದಾರಿಯನ್ನು ನನಗೆ ವಹಿಸಿದರು; ರಾಷ್ಟ್ರೀಯ ಸೇವಾ ಯೋಜನೆಯ ಅಧಿಕಾರಿಯಾಗುವುದು. ಎಲ್ಲ ಅಧ್ಯಾಪಕರೂ ಪಾಠಗಳನ್ನು ಮಾಡಲೇಬೇಕಲ್ಲ; ಆದರೆ ಇಂತಹ ಪೂರಕ ಜವಾಬ್ದಾರಿಗಳನ್ನು ಹೊಸಬರು ತಾನೇ ಹೊರಬೇಕು? ಆಗ ತಾನೇ ಕಾಲೇಜಿಗೆ ಸೇರಿದ್ದರಿಂದ ಕೊಟ್ಟ ಕೆಲಸವನ್ನು ಮಾಡಲಾರೆ ಎನ್ನುವಂತಿಲ್ಲ. ಏನು

ಬೇಕಾದರೂ ಮಾಡುವೆನೆಂಬ ಉತ್ಸಾಹ ಬೇರೆ. ಹಾಗಾಗಿ ಒಪ್ಪಿಕೊಂಡೆ. ಈ ಬಗ್ಗೆ ಹೇಳುವಂಥದೇನೂ ಇಲ್ಲ, ನಾನು ಹೇಳಹೊರಟಿದ್ದು ಮತ್ತೊಂದು ಸಂಗತಿಯ ಕುರಿತು.

ಮೊದಲ ಟರ್ಮ್ ರಜೆಯಲ್ಲಿಯೋ ಏನೋ ನಮ್ಮ ಕಾಲೇಜಿನ ಎನ್‌ಎಸ್‌ಎಸ್ ಕ್ಯಾಂಪ್ ಹಾಕಿದ್ದೆವು; ಸುಮಾರು ಹತ್ತು ದಿನಗಳ ಕಾಲ; ಆಗ ಬೆಂಗಳೂರಿನಿಂದ ದೂರ ಇದ್ದ ಸಾರಕ್ಕಿ ಎಂಬ ಹಳ್ಳಿಯಲ್ಲಿ. ಹತ್ತು ದಿನಗಳ ಕಾಲ ನಮ್ಮ ಹುಡುಗರು ಅಲ್ಲಿಯೇ ವಾಸ ಮಾಡಿ, ಕೆಲವು ಸಾಮಾಜಿಕ ಸೇವಾ ಕಾರ್ಯ ಗಳನ್ನು ಮಾಡಬೇಕು; ರಸ್ತೆ ಮಾಡುವುದು, ಊರನ್ನು ಶುಚಿಗೊಳಿಸುವುದು, ಯಾವುದಾದರೂ ಸಾರ್ವಜನಿಕ ಕಟ್ಟಡ ಕಟ್ಟುತ್ತಿದ್ದರೆ ಶ್ರಮದಾನ ಮಾಡುವುದು ಇತ್ಯಾದಿ. ವಿವಿಧ ಮನೋಭಾವದವರು ಒಟ್ಟಿಗೇ ವಾಸಿಸುವುದು, ಹೊಂದಿಕೊಂಡು ಗುಂಪಿನಲ್ಲಿ ಕೆಲಸಮಾಡುವುದು, ದೈಹಿಕ ಶ್ರಮಕ್ಕೆ ಹಿಂಜರಿಯದಿರುವುದು ಮುಂತಾದ ಮೌಲ್ಯಗಳನ್ನು ಕಲಿಸಲೆಂದೇ ರಾಷ್ಟ್ರೀಯ ಸೇವಾ ಯೋಜನೆ ಆರಂಭವಾಗಿರುವುದು. ಹುಡುಗರು ತಕ್ಕಮಟ್ಟಿಗೆ ಇಂಥದನ್ನೆಲ್ಲ ಮಾಡಿದರು. ಹತ್ತು ದಿನಳ ಕಳೆದವು; ಶಿಬಿರದ ಮುಕ್ತಾಯ ಸಮಾರಂಭ.

ಸಮಾರೋಪಕ್ಕೆ ವಿಶ್ವವಿದ್ಯಾಲಯದ ಕುಲಪತಿಗಳನ್ನು ಆಹ್ವಾನಿಸಿದ್ದ ನೆನಪು. ಅವರು ಕಾಲೇಜಿಗೆ ಬಂದಾಗ ಅವರನ್ನು ಎನ್‌ಎಸ್‌ಎಸ್ ಶಿಬಿರದ ಜಾಗಕ್ಕೆ ಒಂದು ಟ್ಯಾಕ್ಸಿಯಲ್ಲಿ ಕರೆದೊಯ್ಯುವ ಏರ್ಪಾಟಾಗಿತ್ತು. ಅವರೊಡನೆ ನಮ್ಮ ಪ್ರಿನ್ಸಿಪಾಲರೂ ಬಂದರು. ಶಿಬಿರ ನಡೆಯುತ್ತಿದ್ದ ಹಳ್ಳಿ ಸಾರಕ್ಕಿ ಇದ್ದುದು ರಾಗಿಗುಡ್ಡ ಎನ್ನುತ್ತಾರಲ್ಲ ಅದರ ಆಚೆಗೆ, ಸುಮಾರು ಮುಕ್ಕಾಲು ಕಿಲೋಮೀಟರ್ ದೂರದಲ್ಲಿ. ರಾಗಿಗುಡ್ಡ ತಲುಪಲೂ ಅರ್ಧ ಕಿಲೋಮೀಟರ್ ಗದ್ದೆಗಳನ್ನು ದಾಟಿ ಹೋಗಬೇಕು. ಈಗಿನ ಜಯನಗರದ ಒಂಬತ್ತನೇ ಬ್ಲಾಕ್ ಆಗ ತಾನೇ ರೂಪುವಡೆಯುತ್ತಿತ್ತೋ ಏನೋ. ಸರಿಯಾದ ರಸ್ತೆಗಳೆ ಇಲ್ಲ; ದೂಳು ಜಾಡಿನಲ್ಲಿ ಟ್ಯಾಕ್ಸಿ ಸಾಗಿತು. ರಾಗಿಗುಡ್ಡ ಇನ್ನೂ ಸ್ವಲ್ಪ ದೂರ ಇದೆ ಎನ್ನುವಾಗಲೇ ಗಾಡಿಜಾಡೂ ಮುಗಿಯಿತು; ಮುಂದಿದ್ದುದು ಕಾಲುದಾರಿ ಮಾತ್ರ. ಹೀಗಾಗಿ ಅಲ್ಲಿಂದ ಮುಂದೆ ನಡೆದೇ ಹೋಗಬೇಕಾಯಿತೆಂದು ಕಾಣುತ್ತದೆ. ಅಂತೂ ಹೇಗೋ ಶಿಬಿರದ ಸಮಾರೋಪ ಮುಗಿಯಿತು.

ನಾನು ಹೇಳಬೇಕಾಗಿರುವ ವಿಷಯ ಮುಂದಿನದು: ಈ ರೀತಿ ಇದ್ದ ಜಾಗ ಈಗ ಹೇಗಾಗಿದೆ? ಅಲ್ಲಿನ ಆಂಜನೇಯ ದೇವಸ್ಥಾನ ಬೆಂಗಳೂರಿನ ಹೊರಗೂ ಪ್ರಖ್ಯಾತಿಯನ್ನು ಪಡೆದಿದೆ. ಇದೆಲ್ಲ ಹೇಗಾಯಿತು. ಅಲ್ಲೊಂದು ಇಲ್ಲೊಂದು ಮನೆಯಿದ್ದ ಆಗಿನ ಒಂಬತ್ತನೇ ಬ್ಲಾಕಿನಲ್ಲಿ ನಮ್ಮ ಕಾಲೇಜಿನ ಅಧ್ಯಾಪಕರೊಬ್ಬರ ಮನೆಯಿತ್ತು. ಒಂದು ದಿನ ಅವರು ಒಂದು ಸುದ್ದಿ ತಂದರು, ರಾಗಿಗುಡ್ಡದ ಬಗ್ಗೆ. (ಆ ಗುಡ್ಡಕ್ಕೆ ಆ ಹೆಸರು ಬರಲು ಕಾರಣ, ಎತ್ತರವಾದ ಕಪ್ಪು ಬಂಡೆ ದೂರದಿಂದ ನೋಡಿದರೆ ರಾಗಿಯ ರಾಶಿ ಕಂಡ ಹಾಗೆ ಕಾಣುತ್ತಿದ್ದುದು). ಒಂದು ದಿನ

ಇದ್ದಕ್ಕಿದ್ದಂತೆ ಆ ಗುಡ್ಡದ ತುದಿಯಲ್ಲಿ ಕೆಲವರಿಗೆ ಒಂದು ಶಿಲುಬೆ ಕಾಣಿಸಿತಂತೆ. ಸರಿ, ಸನಾತನ ಧರ್ಮಾನುಯಾಯಿಗಳ ಮೈಯಲ್ಲಿ ವಿದ್ಯುತ್ ಸಂಚಾರವಾಯಿತು; ಆ ರಾತ್ರಿ ಎಲ್ಲ ಒಟ್ಟಾಗಿ ಸೇರಿ ಆ ಶಿಲುಬೆಯನ್ನು ಕಿತ್ತೆಸೆದು ಅಲ್ಲೊಂದು ಆಂಜನೇಯ ಎಂದು ಕರೆದು ಒಂದು ಅಗಲವಾದ ಕಲ್ಲನ್ನು ನಿಲ್ಲಿಸಿದರು; ಆಂಜನೇಯ ಉದ್ಭವವಾಗಿದ್ದಾನೆ ಎಂದು ವದಂತಿಯನ್ನೂ ಹಬ್ಬಿಸಿದರೆಂದು ಕಾಣುತ್ತದೆ. ಮುಂದೆ ಕೆಲವೇ ಕಾಲದಲ್ಲಿ ಈ ಆಂಜನೇಯ ಸಮುದ್ರ ಲಂಘನ ಮಾಡಿಬಿಟ್ಟ.

ಒಂದು ಜಾಗದಲ್ಲಿ ಗುಂಡುಕಲ್ಲಿಗೆ ಯಾರಾದರೊಬ್ಬರು ಸ್ವಲ್ಪ ಅರಿಸಿನ ಕುಂಕುಮ ಬಳಿದರೆ ಆ ದಾರಿಯಗುಂಟ ಹೋಗುವವರೆಲ್ಲ ಅದಕ್ಕೆ ಕೈಮುಗಿಯುತ್ತಾರೆ; ಕೊಂಚ ವ್ಯವಧಾನ ಇದ್ದವರು ನಿಂತು ಕಣ್ಣು ಮುಚ್ಚಿ ಕ್ಷಣ ಧ್ಯಾನಿಸುತ್ತಾರೆ. ಎಲ್ಲ ಸರಿ ಹೋದರೆ ಕಾಲಾನುಕಾಲಕ್ಕೆ ಅಲ್ಲೊಂದು ದೇವಸ್ಥಾನ ಎದ್ದು ನಿಲ್ಲುತ್ತದೆ. ರಾಗಿಗುಡ್ಡದ ಮೇಲೆ ಆದದ್ದೂ ಅದೇ. ನಾನು ಮೂವತ್ತೆಂಟು ವರ್ಷದ ಹಿಂದೆ ಹೋದಾಗ ಏನೂ ಇಲ್ಲದಿದ್ದ ಜಾಗ ಇವತ್ತು ನಾನಾ ಬಗೆಯ ಚಟುವಟಿಕೆಗಳ ಕೇಂದ್ರ. ಅಲ್ಲಿ ದೇವಸ್ಥಾನ ಮಾತ್ರ ಆಗಿಲ್ಲ; ಕಲ್ಯಾಣ ಮಂಟಪವಾಗಿದೆ, ಶಾಲೆ ಆಗಿದೆ, ಪ್ರತಿನಿತ್ಯ ಏನಾದರೊಂದು ಕಾರ್ಯಕ್ರಮ ಅಲ್ಲಿ ನಡೆಯುತ್ತಿರುತ್ತದೆ. ಅನೇಕ ಬಗೆಯ ಸಾಮಾಜಿಕ ಕಾರ್ಯಗಳ ತಾಣವಾಗಿದೆ ಆ ಜಾಗ; ಬೆಂಗಳೂರಿನ ಒಂದು ಮುಖ್ಯ ಸಾಂಸ್ಕೃತಿಕ ಕೇಂದ್ರವೆನ್ನಿಸಿದೆ. ಆ ಜಾಗ ಹಿಂದೆ ಇದ್ದ ಬಗೆಯನ್ನು ನೆನಸಿಕೊಂಡಾಗ ಅಚ್ಚರಿ ಮೂಡುತ್ತದೆ; ಅಲ್ಲಿ ಇಲ್ಲದೇ ಇದ್ದ ಆಂಜನೇಯ ನಮ್ಮ ಕಣ್ಣೆದಿರಿನಲ್ಲಿ ಮೂಡಿ ಇಂದು ಎಷ್ಟು ದೊಡ್ಡ ದಾಗಿ ಬೆಳೆದುಬಿಟ್ಟಿದ್ದಾನೆ! ಇನ್ನೂ ಕೆಲ ಕಾಲ ಹೋದರೆ ಆ ಜಾಗದ ಮಹಿಮೆಯ ಬಗ್ಗೆ ಕತೆಗಳು ಹುಟ್ಟಿಕೊಳ್ಳುತ್ತವೆ, ಪುರಾಣಗಳು ನಿರ್ಮಾಣಗೊಳ್ಳುತ್ತವೆ, ರಾಮಸೀತೆ ಲಕ್ಷ್ಮಣರು ವನವಾಸದಲ್ಲಿದ್ದಾಗ ಅಲ್ಲಿ ತಂಗಿದ್ದ ರುಜುವಾತುಗಳೂ ಸೃಷ್ಟಿಗೊಳ್ಳುತ್ತವೆ.

ಪ್ರಾಯಶಃ ಎಲ್ಲ ಪ್ರಸಿದ್ಧ ದೇವಾಲಯಗಳು ಹೀಗೇ ಆದವು. ಹಿಂದೆ ಬಹು ಪ್ರಸಿದ್ಧವಾಗಿದ್ದ ಹಲವಾರು ದೇವಾಲಯಗಳು ಈಗ ಮಣ್ಣುಪಾಲಾಗಿವೆ; ಹೊಸವು ತಲೆ ಎತ್ತುತ್ತಿವೆ. ಭಕ್ತಿಯನ್ನು ಮೈಯಲ್ಲಿ ತುಂಬಿಕೊಂಡ ಜನ ಆಗ ಅಲ್ಲಿ ಮೈ ಮರೆಯುತ್ತಿದ್ದರು; ಈಗ ಅದನ್ನೇ ಜನ ಮರೆತಿದ್ದಾರೆ. ಪ್ರತಿಯೊಂದು ದೇವಸ್ಥಾನದ ಹಿಂದೆಯೂ ಒಂದು ಕತೆ ಇರುತ್ತದೆ. ನದಿಗಳ ಮೂಲ ಋಷಿಗಳ ಮೂಲ ಕೇಳಬಾರದಂತೆ ದೇವಸ್ಥಾನಗಳ ಮೂಲವನ್ನೂ ಕೆದಕಲು ಹೋಗಬಾರದು ಎಂದು ಕಾಣುತ್ತದೆ.

☆ – ☆ – ☆

# 'ಚಟ'ವಟಿಕೆ

ಕಾಲೇಜಲ್ಲಿ ಮೇಷ್ಟರಾಗಿದ್ದಾಗ ಎರಡು ತರಗತಿಗಳ ಮೇಲೆ ನಡುವೆ ಬಿಡು ವಿದ್ದರೆ ಸಾಮಾನ್ಯವಾಗಿ ಒಂದರ್ಧ ಕಪ್ ಕಾಫಿ ಕುಡಿದು ಬರುವುದು ವಾಡಿಕೆ ಯಾಗಿತ್ತು, ಒಂದು ಗಂಟೆ ಪಾಠ ಮಾಡಿ ಒಣಗಿದ ಗಂಟಲನ್ನು ಒದ್ದೆ ಮಾಡಿ ಕೊಳ್ಳಲು. ಕೆಲವರು ಆ ಹೊತ್ತಿನಲ್ಲಿ ಕಾಫಿ ಅಥವಾ ಟೀ ಕುಡಿಯುವುದರ ಜೊತೆ ಒಂದು ದಂ ಎಳೆದು ಬರುವುದು ರೂಢಿ. ಕಾಲೇಜಿನ ಆವರಣದಲ್ಲಿ ಯಾರೂ ಸಿಗರೇಟು ಸೇದುತ್ತಿರಲಿಲ್ಲ. ಅದೊಂದು ಅಲಿಖಿತ ನಿಯಮವಾಗಿತ್ತು. ಹಾಗಾಗಿ ಬಿಡುವಿದ್ದಾಗ ಒಬ್ಬರೇ ಹೋಗುವುದರ ಬದಲು ಇಬ್ಬರು ಮೂವರು ಮೇಷ್ಟರುಗಳು ಸೇರಿ ಸ್ವಲ್ಪ ದೂರದ ಹೋಟೆಲಿಗೆ ಹೋಗಿ ಈ ಮಧ್ಯಂತರ ಚಟುವಟಿಕೆಯನ್ನು ಮುಗಿಸುತ್ತಿದ್ದೆವು. ಅದಕ್ಕೇ ನಾವು ಇದನ್ನು 'ಚಟವಟಿಕೆ' ಎಂದೇ ಕರೆಯುತ್ತಿದ್ದೆವು. ಸಣ್ಣ ಪುಟ್ಟ ಇಂಥ ಚಟವನ್ನು ಪೂರೈಸಿಕೊಳ್ಳುವ ಕಾರ್ಯ ಅದು, ಅದಕ್ಕೆ.

ನಾನು ಸಿಗರೇಟು ಮುಂತಾದವನ್ನು ಸೇದುವ ಹವ್ಯಾಸದವನಲ್ಲ. (ಆದರೆ ಈಗ ಪರಿಣತನಲ್ಲದಿದ್ದರೂ, 'ಹವ್ಯಾಸಿ'). ನಮ್ಮ ತಂದೆ ಬಹು ಹಿಂದೆ ಬೀಡಿ ಸೇದುತ್ತಿದ್ದರೂ, ಆನಂತರ ಅದನ್ನು ಬಿಟ್ಟಿದ್ದರು. ಹಾಗಾಗಿ ಹೊಗೆ ಸೇವನೆಯ ಅಭ್ಯಾಸವನ್ನು ನಾನಾಗಲೀ ನಮ್ಮ ಅಣ್ಣತಮ್ಮಂದಿರಾಗಲೀ ಬೆಳೆಸಿಕೊಳ್ಳಲಿಲ್ಲ. ತಂದೆ ಬೀಡಿಯನ್ನೋ ಸಿಗರೇಟನ್ನೋ ಸೇದುವ ಅಭ್ಯಾಸದವನಾದರೆ ಮಕ್ಕಳು ಅದನ್ನು ಕಲಿಯುತ್ತಾರೆಂಬ ಕಾರಣಕ್ಕಾಗಿ ಪ್ರಾಯಶಃ ನಮ್ಮ ತಾಯಿ ತಂದೆಯವರನ್ನು ಬಲವಂತ ಮಾಡಿ ಆ ಚಟದಿಂದ ಮುಕ್ತಿಗೊಳ್ಳುವಂತೆ ಮಾಡಿರಬೇಕು.

ಪ್ರಗತಿಶೀಲ ಸಾಹಿತಿಗಳ ಕಾದಂಬರಿಗಳನ್ನೋದುವ ಸಂದರ್ಭದಲ್ಲಿ ಸಿಗರೇಟಿಗೆ ಮಹತ್ವವಿದ್ದುದನ್ನು ಕಂಡಿದ್ದೆ. ನಾಯಕ ಯಾವುದಾದರೂ ಆಲೋಚನೆಯಲ್ಲಿ ತೊಡಗಿದಾಗ ಅವನ ಕೈಲಿ ಸಿಗರೇಟು ಇರುತ್ತಿದ್ದ ಚಿತ್ರಣ. ಅನೇಕ ಸಾಹಿತಿಗಳು ಕೈಲಿ ಸಿಗರೇಟು ಹಿಡಿದ ಚಿತ್ರವನ್ನೇ ಪುಸ್ತಕದ ಹಿಂಬದಿಗೆ ಹಾಕಿಸಿಕೊಳ್ಳುತ್ತಿದ್ದರು. ಆಗೆಲ್ಲ ನನಗನ್ನಿಸುತ್ತಿತ್ತು, ಸಿಗರೇಟು ಸೇದುತ್ತ ಯೋಚಿಸಲು ತೊಡಗಿದರೆ ಆಲೋಚನೆಗಳು ಸಲೀಸಾಗಿ ಬರುತ್ತವೇನೋ ಎಂದು. ಆದರೆ ಆ ಚಟವನ್ನು ಶುರುಮಾಡಲು ನನಗೆ ಧೈರ್ಯ ಬರಲಿಲ್ಲ; ಅದಕ್ಕಿಂತ ಹೆಚ್ಚಾಗಿ, ಊಟಕ್ಕೇ ಸರಿಯಾಗಿ ಅವಕಾಶವಿರದಿದ್ದಾಗ

ವಿದ್ಯಾರ್ಥಿ ದೆಸೆಯಲ್ಲಿ ಚಟಕ್ಕೆ ದುಡ್ಡೆಲ್ಲಿಂದ ಬರಬೇಕು? ಜೊತೆಯಲ್ಲಿ ಇಂಥ ಚಟಗಳು ಮನುಷ್ಯನನ್ನು ನರಕಕ್ಕೆ ತಳ್ಳುತ್ತವೆ ಎಂಬ ಮುಗ್ಧ ನಂಬಿಕೆ ಮತ್ತು ಭಯ. ಹೀಗಾಗಿ ನಾನು ಇದಕ್ಕೆ ಬಲಿಯಾಗಲಿಲ್ಲ ಅನ್ನುವುದಿಲ್ಲ, ಯಾಕಂದರೆ ಅದು 'ಬಲಿ' ಯಾಗುವುದೇನಲ್ಲ ಎಂದು ಆಮೇಲೆ ಅನ್ನಿಸಿತು, ಆದ್ದರಿಂದ ಒಳಗಾಗಲಿಲ್ಲ ಅನ್ನುತ್ತೇನೆ. ಆದರೂ ಯಾರಾದರೂ ಸಿಗರೇಟು ಸೇದುತ್ತ ಆಳವಾದ ಆಲೋಚನೆ ಯಲ್ಲಿರುವುದನ್ನು ಕಂಡಾಗ ಅಥವಾ ಬೇಸರ ಕಳೆಯಲೆಂದು ಸಿಗರೇಟು ಸೇದು ವುದನ್ನು ನೆನೆಸಿಕೊಂಡಾಗ, ನನಗೆ ಬೇಸರವೆನಿಸಿದ ಸಮಯದಲ್ಲಿ ನಾನೂ ಸಿಗರೇಟು ಸೇದುವ ಅಭ್ಯಾಸ ಮಾಡಿಕೊಂಡಿದ್ದರೆ ಸುಲಭದಲ್ಲಿ ಬೇಸರದಿಂದ ಪಾರಾಗಬಹು ದಿತ್ತಲ್ಲ ಅನಿಸುತ್ತಿತ್ತು. ಆದರೆ ಆ ಅಭ್ಯಾಸವಾಗಲಿಲ್ಲ.

ಕೈಲಾಸಂ ಅಂತಹ ಸಾಹಿತಿಗಳು ಚೈನ್ ಸ್ಮೋಕರ್‌ಗಳಲ್ಲವೇ? ಕೃತಿ ರಚನೆಗೆ ಸಿಗರೇಟು ಸೇವನೆಯು ಸ್ಫೂರ್ತಿ ನೀಡುವುದೇನೋ ಎಂಬ ಭ್ರಮೆ ಮೊದಮೊದಲು ನನ್ನನ್ನು ಕಾಡಿತ್ತು. 'ದುಶ್ಚಟ'ವಿಲ್ಲ ಎಂದು ಭಾವಿಸಿದ್ದ ಅನೇಕ ಹಿರಿಯರು ಕನಿಷ್ಠ ಪಕ್ಷ ನಸ್ಯ ಹಾಕುವುದರ ಬಗ್ಗೆ ಕೇಳಿದಾಗ ನನಗೆ 'ಹೌದೇ?" ಅನ್ನಿಸುತ್ತಿತ್ತು. ಸಾಂಪ್ರದಾಯಿಕ ಹಿನ್ನೆಲೆಯವರು ಸಿಗರೇಟು ಬೀಡಿಗಳನ್ನು ಸೇದದಿದ್ದರೂ ನಸ್ಯದ ಚಟಕ್ಕೆ ಒಳಗಾ ದವರು. ಮಡಿಯಲ್ಲಿರುತ್ತಿದ್ದಾಗಲೂ ನಸ್ಯ ಹಾಕಬಹುದು! ಹಾಗಾಗಿ ಅದೊಂದು ಸಾತ್ವಿಕ ಚಟವೇನೋ ಅನ್ನಿಸುತ್ತಿತ್ತು. ಎಲ್ಲವೂ ಹೊಗೆಸೊಪ್ಪಿನ ಉತ್ಪನ್ನಗಳೇ ತಾನೆ, ಅದರಲ್ಲಿ ಮೇಲೇನು ಕೀಳೇನು ಎಂದೂ ಅನ್ನಿಸುತ್ತಿತ್ತು. ನಸ್ಯದ ಚಟ ಅಷ್ಟು ದುಬಾರಿಯಲ್ಲ, ಅದಕ್ಕೆ ಸಿಗರೇಟಿನ ಬೆಲೆಯಿಲ್ಲ ಅನ್ನಿಸಿ, ಅದರಿಂದಾಗಿ ಅದು 'lesser evil' ಅನ್ನಿಸುತ್ತಿದ್ದುದೂ ಉಂಟು. ಆದರೆ ದುಬಾರಿ ವಸ್ತುಗಳನ್ನು ಹಾಕಿ ಉಂಡೆ ನಸ್ಯವನ್ನು ಮಾಡಿಕೊಳ್ಳುವ ವರ್ಣನೆಗಳನ್ನು ಓದಿದಾಗ ಎಲ್ಲವೂ ಒಂದೇ ಎಂಬ ತೀರ್ಮಾನ..

ಹೊಗೆ ಸೇದುವುದು ಅಗ್ಗದ ಅಂದರೆ ಕಡಿಮೆ ಬೆಲೆಯ ಚಟ; ಆದರೆ ಮದ್ಯಪಾನ ದೊಡ್ಡ ಚಟ ಎಂಬ ಭಾವನೆ ಎಲ್ಲರಲ್ಲಿರುವಂತೆ ನನ್ನಲ್ಲೂ ಮನೆ ಮಾಡಿತ್ತು. ಅನೇಕರು ಅದಕ್ಕೆ ದಾಸರಾಗಿದ ಪ್ರಸಂಗಗಳು ಕಣ್ಣೆದುರೇ ಇರುತ್ತಿದ್ದುವಲ್ಲ. ಸಿನಿಮಾಗಳಲ್ಲಂತೂ ವಿರಹಿಯಾದವನು ತನ್ನ ನೋವನ್ನು ಮರೆಯಲು ಕುಡಿತವನ್ನು ಆಶ್ರಯಿಸಲೇಬೇಕು. 'ದೇವಿದಾಸ'ರಾದವರು ದೇವದಾಸರಾಗಲೇಬೇಕು. ದೊಡ್ಡ ದುಃಖವನ್ನು ತಾಳಿಕೊಳ್ಳಲು ದೊಡ್ಡ ಚಟ. ಆದರೂ ಸ್ಟೈಲಾಗಿ ಗ್ಲಾಸು ಹಿಡಿದು ಸ್ವಲ್ಪಸ್ವಲ್ಪವಾಗಿ ಹೀರುವ ದೃಶ್ಯವನ್ನು ಸಿನಿಮಾಗಳಲ್ಲಿ ಕಂಡಾಗ ಕೆಲವೊಮ್ಮೆ 'ಎಷ್ಟು ಚೆನ್ನ!' ಅಂತ ಅಂದುಕೊಂಡದ್ದೂ ಉಂಟು.

ಬೆಳೆದಂತೆಲ್ಲ ನನಗೆ ಇಂಥ ವಿಷಯಗಳ ಬಗ್ಗೆ ಹೆಚ್ಚು ವಸ್ತುನಿಷ್ಠವಾಗಿ ಆಲೋಚಿಸುವುದು ಸಾಧ್ಯವಾಯಿತು. ಸಿಗರೇಟು ಸೇವನೆಯಾಗಲೀ ಮದ್ಯಪಾನ ವಾಗಲೀ ನಮ್ಮ ದೇಶಕ್ಕೆ ಹೊಸದೇನಲ್ಲ. 'ತಾಮ್ರಪಾಕ' ಎಂಬ ಗಿಡದ ಎಲೆಯನ್ನು

ಒಣಗಿಸಿ ಅದರ ಹೊಗೆ ಸೇವಿಸುವುದು ಜೀರ್ಣಕಾರಿ ಎಂಬ ಮಾಹಿತಿ ಚರಕಸಂಹಿತೆಯಲ್ಲೇ ಇದೆ ಎಂಬುದನ್ನು ಓದಿದ್ದೆ. (ಆದರೆ ಆ ಸೊಪ್ಪು ಯಾವುದೋ ನಿಖರವಾಗಿ ತಿಳಿಯದು.) ಹಾಗೆಯೇ ನಮ್ಮ ಯಜ್ಞಯಾಗಾದಿ ಅತಿ ಪವಿತ್ರ ಕಾರ್ಯಗಳಲ್ಲಿ ಸೋಮರಸಪಾನ ಒಂದು ಅನಿವಾರ್ಯ ಭಾಗ. ಅದನ್ನು ದೇವತೆಗಳಿಗೂ ಅರ್ಪಿಸಲಾಗುತ್ತಿತ್ತು. ಈ ಸೋಮರಸ ರಾಮರಸಗಳನ್ನೂ ಭಂಗಿಯಂತಹ ಸೊಪ್ಪಿನಿಂದಲೇ ಮಾಡುವ ವಿಷಯ ಬಿಜಿಎಲ್ ಸ್ವಾಮಿಯವರ 'ಸಾಕ್ಷಾತ್ಕಾರದ ಹಾದಿಯಲ್ಲಿ' ಪುಸ್ತಕ ಓದಿದಾಗ ತಿಳಿಯಿತು. ಹಾಗೆಯೇ, ಮದುವೆ ಮುಂತಾದ ಸನ್ನಿವೇಶಗಳಲ್ಲಿ ಕಳ್ಳು ನೀಡಿ ಅತಿಥಿಗಳನ್ನು ಸತ್ಕರಿಸುವ ಪದ್ಧತಿ ಮಲೆನಾಡಿನಲ್ಲಿದೆ ಎಂಬ ವಿಷಯ ಕುವೆಂಪು ಅವರ ಕಾದಂಬರಿಗಳಲ್ಲಿದೆಯಲ್ಲ.

ಬ್ರಿಟಿಷರಿಂದ ಈ ಸಿಗರೇಟು ಸೇವನೆ ಮುಂತಾದವು ಬಂದಿದೆಯೇನೋ ಎಂಬ ಮಧ್ಯಮವರ್ಗದ ತಪ್ಪು ತಿಳಿವಳಿಕೆಗೆ ಒಳಗಾಗಿದ್ದ ನಾನು ಈ ವಿಷಯದ ಬಗ್ಗೆ ಇನ್ನಷ್ಟು ತಿಳಿಯಾಗಿ ಯೋಚಿಸತೊಡಗಿದ್ದೆ. ಸಾಧುಸಂತರು ಕೂಡ ಭಂಗಿ ಸೇದುವರಲ್ಲ, ಅದಕ್ಕೂ ಆಧ್ಯಾತ್ಮಿಕ ಸಾಧನೆಗೂ ವಿರೋಧ ಇಲ್ಲವೆಂದ ಮೇಲೆ ಅದನ್ನೇಕೆ ಕೆಟ್ಟುದೆಂದು ಭಾವಿಸಬೇಕು. ಅಥವಾ ಎಲ್ಲವೂ ಅತಿಯಾದರೆ, ಮಿತಿ ಮೀರಿದರೆ ಕೆಟ್ಟುದೇ ಅಲ್ಲವೇ? ಸಿಗರೇಟು ಸೇದುವುದರಿಂದ ಕೆಲವರಿಗೆ ಒಂದಷ್ಟು ಹುರುಪು ಬಂದಂತಾಗಬಹುದು. ಇದು ತಪ್ಪು ತಿಳಿವಳಿಕೆಯಿರಬಹುದು, ಅಥವಾ ಆ ಚಟ ಬೆಳೆಸಿಕೊಂಡಿರುವುದರಿಂದ ಚಟದವರಿಗೆ ಹಾಗನ್ನಿಸಬಹುದು. ಅಲ್ಲದೆ, ಕಾಫಿ, ಟೀ, ಹೊಗೆಸೊಪ್ಪು ಇಂಥವುಗಳಲ್ಲಿ ಉತ್ತೇಜಕ ರಾಸಾಯನಿಕಗಳಿರುತ್ತವೆ ಎಂಬುದೂ ಸತ್ಯ. ಅವಿಲ್ಲದಿದ್ದರೂ ಇರಬಹುದಾದರೂ, ಕೆಡುಕಾಗದ ರೀತಿ ಅವುಗಳನ್ನು ಇರಿಸಿಕೊಂಡಿದ್ದರೆ ತಪ್ಪಲ್ಲ, ಅಲ್ಲವೇ ಅನ್ನುವುದು ನನ್ನ ನಿಲವಾಯಿತು.

ತಿನ್ನುವವರೆಲ್ಲ ಹೊಟ್ಟೆಬಾಕರಲ್ಲ, ಕುಡಿಯುವವರೆಲ್ಲ ಕುಡುಕರಲ್ಲ. ಬಕಾಸುರನಂತೆ ಎಷ್ಟು ತಿಂದರೂ ತೃಪ್ತಿಯಿಲ್ಲದವರ ಬಗ್ಗೆ ನಮಗೆ ಅಸಮಾಧಾನ ಸರಿಯೇ, ಆದರೆ ತಿನ್ನುವುದೇ ತಪ್ಪಲ್ಲ ತಾನೇ? ಎಷ್ಟು ಬೇಕೋ ಅಷ್ಟನ್ನು ತಿನ್ನುವುದು ಅರೋಗ್ಯಕರವಾಗಿರುವ ರೀತಿಯಲ್ಲಿಯೇ ಯಾವಾಗಾದರೊಮ್ಮೆ ಒಂದು ಸಿಗರೇಟು ಸೇದುವುದೋ, ಒಂದಷ್ಟು ಮದ್ಯ ಕುಡಿಯುವುದೋ ತಪ್ಪಾಗಲು ಸಾಧ್ಯವಿಲ್ಲ. ಸ್ಥಿಮಿತ ಕಳೆದುಕೊಳ್ಳದ ಯಾವುದೂ ಅಹಿತವಲ್ಲ. ಮಾಸ್ತಿಯವರೂ ಕ್ಲಬ್‌ಗೆ ಹೋಗಿ ಕಾಸು ಇಟ್ಟು ಇಸ್ಪೀಟು ಆಡುತ್ತಿದ್ದರಂತೆ. ಆದರೆ ಅವರೆಂದೂ ವಿಷಯದಲ್ಲಿ 'ಧರ್ಮರಾಯ'ನಾಗಲಿಲ್ಲ. ಬದುಕಿನಲ್ಲಿ ಸಣ್ಣ ಪುಟ್ಟ ಸಂತೋಷಗಳು, 'little pleasure' ಅನ್ನುತ್ತಾರಲ್ಲ, ಅಂತಹದು ಒಂದಷ್ಟು ಇದ್ದರೇ ಚಂದವೇನೋ. ದಾಸರಾಗುವುದು ಬೇರೆ, ಸ್ವಲ್ಪ ಹಗುರಾಗುವುದು ಬೇರೆ.

☆ – ☆ – ☆

# ಊಡದ ಆವು, ಉಣ್ಣದ ಕರು!

**ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ**
**ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ**
**ಇದ್ದಡೇನೋ, ಶಿವ ಶಿವಾ, ಹೋದಡೇನೋ!**
**ಕೂಡಲಸಂಗಮದೇವಯ್ಯಾ**
**ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ.**

ಇದು ಬಸವಣ್ಣನ ಒಂದು ವಚನ. ದೇಹದ ಮೇಲೆ ಲಿಂಗ ಕಟ್ಟಿಕೊಂಡಿದ್ದರೂ ಅದಕ್ಕೆ ನಿಷ್ಠೆ ತೋರದ ಭಕ್ತನ ಬಗ್ಗೆ ವಚನಕಾರನ ಆಕ್ರೋಶ ಭುಗಿಲೆದ್ದಿದೆ. ಲಿಂಗ-ಭಕ್ತರ ಸಂಬಂಧವನ್ನು ಗಂಡ-ಹೆಂಡತಿಯರ ಸಂಬಂಧಕ್ಕೆ ಹೋಲಿಸಲಾಗಿದೆ. ಹಾಲು ಉಣಿಸಲು ಇಷ್ಟವಿಲ್ಲದ ಹಸು, ಹಾಲು ಕುಡಿಯಲು ಇಷ್ಟವಿಲ್ಲದ ಕರು - ಇವರಿಬ್ಬರ ನಡುವೆ ಹಾಲಿನ ಸಾರ್ಥಕ್ಯ ಎಂತಹುದು? ಜೋಡಿಗಳ ಎರಡರ ನಡುವೆ ಇರಬೇಕಾದದ್ದು ಪರಸ್ಪರ ಆತ್ಮೀಯತೆಯ ನಂಟು; ಅದರ ಬದಲು ಅದು ಔಪಚಾರಿಕವಾಗಿಬಿಟ್ಟರೆ ಏನು ಪ್ರಯೋಜನ ಎಂಬುದು ಇಲ್ಲಿನ ಆಶಯ. ಒಂದು ಪ್ರಕ್ರಿಯೆ ನಡೆಯಲು ಪೂರಕವಾಗಿರಬೇಕಾದ ಎರಡು ಪಕ್ಷಗಳ ನಡುವೆ ಅನ್ಯೋನ್ಯತೆ ಇರದಿದ್ದರೆ ಇಡೀ ಸಂಬಂಧವೇ ಅರ್ಥಹೀನವಾಗಿಬಿಡುವುದರ ಬಗ್ಗೆ ವಚನ ಚಿಂತಿಸುತ್ತದೆ.

ಬದುಕಿನಲ್ಲಿರುವುದು ಸಂಬಂಧಗಳೇ ತಾನೇ? ಸಂಬಂಧವೆಂದರೆ ಎರಡರ ಸಮಾಗಮ. ವಚನದಲ್ಲಿ ಹೇಳಿರುವ ದಾಂಪತ್ಯದಂತೆಯೇ ಇನ್ನೂ ಅನೇಕ ಒಂದಕ್ಕೊಂದು ಪೂರಕವಾದ ಸಂಬಂಧಗಳಿವೆ. ನಿದರ್ಶನಕ್ಕೆ ಅಧ್ಯಾಪಕ-ವಿದ್ಯಾರ್ಥಿ ಸಂಬಂಧ, ಉದ್ಯೋಗದಾತ-ನೌಕರ, ಸರ್ಕಾರ-ಪ್ರಜೆ - ಇವೂ ಇಂತಹವೇ. ಎರಡು ಪಕ್ಷಗಳು ಸೇರಿರುವುದೇ ಯವುದೋ ಕಾರ್ಯವನ್ನು ಆಗುಮಾಡಲು. ವಿದ್ಯೆ ಎಂಬುದು ಕಲಿಕೆಯ ಒಂದು ಪ್ರಕ್ರಿಯೆ; ಕಲಿತವನು ಅಥವಾ ತಿಳಿದವನ ಕಡೆಯಿಂದ ಕಲಿಯುವವನ ಅಥವಾ ತಿಳಿಯದವನ ಕಡೆಗೆ ವಿಷಯ-ವಿಚಾರಗಳು ಪ್ರವಹಿಸುವುದೇ ಕಲಿಕೆಯ ಪ್ರಕ್ರಿಯೆಯ ಸ್ವರೂಪ. ಹೇಗೆ ಆ ಪ್ರವಹನವು ಸಾಗಬೇಕು ಎಂಬುದು ಕಲಿಸುವವನ ಸಾಮರ್ಥ್ಯಕ್ಕೆ ಸಮಬಂಧಿಸಿದ್ದು. ಹಿಂದಾದರೆ

ಕಲಿಯಬೇಕೆಂಬ ಆಸೆಯಿದ್ದವನು ಕಲಿಸುವವನ ಬಳಿ ಹೋಗಿ ಬೇಡಿಕೊಳ್ಳುತ್ತಿದ್ದ. ಅಂದರೆ ಆಗ ವಿದ್ಯಾರ್ಥಿಗೆ ತನಗೆ ಉಪಾಧ್ಯಾಯರು ಯಾರಾಗಬೇಕು ಎಂಬ ಆಯ್ಕೆಯಿರುತ್ತಿತ್ತು. ಈಗ ಆಯ್ಕೆ ಶಾಲೆಗೆ ಸೀಮಿತವಾದುದೇ ಹೊರತು ಅಧ್ಯಾಪಕನಿಗಲ್ಲ. ಅಂದರೆ ವಿದ್ಯಾರ್ಥಿಯು ತಾನು ಯಾವ ಶಾಲೆಯಲ್ಲಿ ಕಲಿಯಬೇಕೆಂಬುದನ್ನು ನಿರ್ಧರಿಸಿ ಅದಕ್ಕೆ ಸೇರಬಹುದು (ಅದು ಕೂಡ ಅಷ್ಟು ಸುಲಭದ ವಿಷಯವಲ್ಲ); ಆದರೆ ಯಾವ ಪಾಠವನ್ನು ಯಾರು ಮಾಡಬೇಕು ಎಂಬುದು ಅವನಿಗೆ ಬಿಟ್ಟ ವಿಷಯವಲ್ಲ. ಹಾಗೆಯೇ ಕಲಿಕೆಯ ವಿಷಯವೂ. ಎಷ್ಟೋ ವೇಳೆ ವಿದ್ಯಾರ್ಥಿ ತಾನು ಕಲಿಯಬೇಕೆಂದು ಬಯಸಿದ ವಿಷಯವನ್ನು ಕಲಿಯುವ ಅವಕಾಶ ಪಡೆಯುವುದಿಲ್ಲ. ಅದಕ್ಕೆ ನಾನಾ ಕಾರಣಗಳಿರಬಹುದು: ಆಯ್ಕೆಯ ವಿಷಯ ಕಲಿಯಲು ಆಸೆಯಿದ್ದರೂ ಅರ್ಹತೆಯಿರದಿರಬಹುದು; ತಾನು ಆಯ್ಕೆಮಾಡಿಕೊಂಡದ್ದೂ ಸ್ವಂತ ಇಚ್ಛೆಯಿಂದಲ್ಲದೆ, ಬೇರೆಯವರ ಒತ್ತಡದಿಂದಲೋ ಪರಿಸ್ಥಿತಿಯ ಕಾರಣದಿಂದಲೋ ಇರಬಹುದು. ಹಾಗೆಯೇ ಉಪಾಧ್ಯಾಯನ ವಿಚಾರವೂ. ಅವನು ಆಯ್ಕೆಮಾಡಿಕೊಂಡ ಈ ವೃತ್ತಿಯ ಆಯ್ಕೆ ಎಷ್ಟೋ ವೇಳೆ ಸ್ವಂತದ್ದಲ್ಲದಿರಬಹುದು.

ಯಾವುದನ್ನೋ ಅನಿವಾರ್ಯವಾಗಿ ಕಲಿಯಬೇಕಾದ ವಿದ್ಯಾರ್ಥಿ ಒಂದು ತುದಿಯಲ್ಲಿ, ಕಲಿಸುವುದು ತನಗೆ ತುಂಬ ಆಪ್ಯಾಯಮಾನವೇನೂ ಆಗಿರದೆ ಒತ್ತಡದಿಂದ ಆ ವೃತ್ತಿಯನ್ನು ಆರಿಸಿದ ಅಧ್ಯಾಪಕ ಇವರಿಬ್ಬರ ನಡುವಣ ಸಂಬಂಧ ಹೇಗಿರಬಹುದು? (ಬಸವಣ್ಣ ಹೇಳುವ ಹಾಗೆ) ಗಂಡನ ಬಗ್ಗೆ ನಿಷ್ಠೆಯಿಲ್ಲದ ಹೆಂಡತಿ; (ಬಸವಣ್ಣ ಹೇಳದ ಆದರೆ ಊಹಿಸಿಕೊಳ್ಳಬಹುದಾದ) ಹೆಂಡತಿಯ ಬಗ್ಗೆ ಬಗ್ಗೆ ಆದರವಿಲ್ಲದ ಗಂಡ ಇವರ ಇಜ್ಜೋಡು ದಾಂಪತ್ಯದಂತೆ ತಾನೇ? ಆಗ ಕಲಿಕೆಯ ಪ್ರಕ್ರಿಯೆ ಹೇಗೆ ಸಾಗಬಹುದು? ಕಲಿಸಲು ಆಸೆಯಿಲ್ಲದ ಅಧ್ಯಾಪಕ-ಕಲಿಯಲು ಆಸಕ್ತಿಯಿಲ್ಲದ ವಿದ್ಯಾರ್ಥಿ - ಇವರದೂ ಇಜ್ಜೋಡು ಆಗಿಬಿಡುತ್ತದೆ, ಅಲ್ಲವೇ?

ನನ್ನ ವೃತ್ತಿ ಜೀವನದಲ್ಲಿ ಕೆಲವು ಸನ್ನಿವೇಶಗಳು ಎದುರಾಗುತ್ತಿದ್ದವು; ಪಾಠ ಮಾಡಲು ಉತ್ಸಾಹ ತುಂಬಿಕೊಂಡಿದ್ದ ಹೊತ್ತಿನಲ್ಲಿ ಏನೋ ಸಂಭವಿಸಿ ಅದಕ್ಕೆ ಅವಕಾಶ ಸಿಕ್ಕದಿರುವುದು, ಹುರುಪೆಲ್ಲ ಇಂಗಿಹೋದ ಸನ್ನಿವೇಶದಲ್ಲಿ ಕ್ಲಾಸ್ ತೆಗೆದುಕೊಳ್ಳಬೇಕಾದುದು - ಇಂತಹುದು. ಒಳ್ಳೆಯ ಪಾಠವೊಂದಕ್ಕೆ ಸಿದ್ಧತೆಯನ್ನು ಮಾಡಿಕೊಂಡು ಕ್ಲಾಸ್ ತೆಗೆದುಕೊಳ್ಳಬೇಕೆಂದಿದ್ದರೆ ಯಾವುದೋ ಕಾರಣದಿಂದ ಅದು ಮುಂದಕ್ಕೆ ಹೋಯಿತೆಂದುಕೊಳ್ಳಿ, ಆ ಮುಂದೆ ಹೋದ ವೇಳೆಯ ಹೊತ್ತಿಗೆ ಉತ್ಸಾಹ ಹೋಗಿಬಿಡುವ ಸಂಭವ. ಹಾಗೆಯೇ ಯಾವುದೋ ತರಗತಿಗೆ ಸಿದ್ಧರಾಗಿ ಬಂದ ವಿದ್ಯಾರ್ಥಿಗಳಿಗೆ, ನಡುವೆ ಬಿಡುವು ಸಿಕ್ಕು ಕಾದು ಕಾದು ತರಗತಿಯ ವೇಳೆ ಬರುವ ಹೊತ್ತಿಗೆ ತೂಕಡಿಕೆ ಆರಂಭವಾಗುವ ಪರಿಸ್ಥಿತಿ - ಇಂತಹವು ಬಂದಾಗ ಕಲಿಯುವ-ಕಲಿಸುವ ಪ್ರಕ್ರಿಯೆ ಹೇಗೆ ಸಾಂಗವಾಗಿ ಸಾಗಿತು!

ಪ್ರತಿವರ್ಷ ಮೊದಮೊದಲು ಇಂಥ ಸನ್ನಿವೇಶಗಳು ಹೆಚ್ಚಾಗಿ ಕಾಣುತ್ತಿದ್ದವು.

ರಜೆ ಕಳೆದು ಆರಂಭಗೊಂಡ ಕಾಲೇಜಿಗೆ ವಿದ್ಯಾರ್ಥಿಗಳು ಬಹಳ ಹುರುಪಿನಿಂದ ಬರುವುದು ಸಹಜ; ದೀರ್ಘ ರಜೆಯನ್ನು ಕಳೆಯುವುದೆಂದರೆ ಏಕತಾನತೆಯ ಕಿರಿಕಿರಿ. ಕಾಲೇಜಿನಲ್ಲಾದರೆ ಗೆಳೆಯರ ಒಡನಾಟ, ಲವಲವಿಕೆಯ ವಾತಾವರಣ. ಹುಡುಗರಿಗೆ ಹೇಗೋ ಅಧ್ಯಾಪಕರಿಗೂ ಹಾಗೆಯೇ. ಕೆಲವೇಳೆ ವಿದ್ಯಾರ್ಥಿಗಳು ಮೇಷ್ಟರನ್ನು ನಿರೀಕ್ಷಿಸುತ್ತಿದ್ದರೆ, ಅವರು ರಜೆಯ ಅಥವಾ ಇನ್ನಾವುದೋ ಕಾರಣದಿಂದ ಬಾರದೇ ಹೋದಾಗ ಆ ಗಂಟೆ ಸುಮ್ಮನೆ ಕಾಲ ಕಳೆಯಬೇಕು. ಆಗ ಉಂಟಾಗುವ ಪಾಲುಮಾರಿಕೆ ಜಾಸ್ತಿಯಾಗಿ ಲವಲವಿಕೆ ಮಸುಕಾದಾಗ ತರಗತಿಯಲ್ಲಿ ಕುಳಿತಿರಲು ಬೇಸರ. ಹೀಗಾಗಿ ಕೇಳಲು ಸಿದ್ಧರಿರುವಾಗ ಮೇಷ್ಟರಿಲ್ಲ; ಬೋರು ಎನಿಸಿದಾಗ ತರಗತಿ! ಇದೇ ವಿಪರ್ಯಾಸ.

ಪರಸ್ಪರ ಆಸಕ್ತಿ, ಉತ್ಸಾಹ ತುಂಬಿದ ಸನ್ನಿವೇಶ, ಅನುಕೂಲಕರ ವಾತಾವರಣ – ಇವೆಲ್ಲ ಸೇರಿದಾಗ ಕಲಿಕೆಯ ಪ್ರಕ್ರಿಯೆ ಸಲೀಸು. ಇವುಗಳಲ್ಲಿ ಏರುಪೇರಾದರೆ ಅದಕ್ಕನುಗುಣವಾಗಿ ವೈಫಲ್ಯ. ಹೀಗಾಗಿ ಪ್ರಕ್ರಿಯೆ ಸಾರ್ಥಕವಾಗುವ ಸಂದರ್ಭಗಳು ಅಪರೂಪ. ಬಹುಕಾಲ ನಡೆಯುವುದು ಯಾಂತ್ರಿಕ ಪ್ರಕ್ರಿಯೆ. ಅದು ನಡೆದಿರುತ್ತದೆಯೇ ಹೊರತು ಸಾರ್ಥಕವಾಗಿರುವುದಿಲ್ಲ.

ಜೋಡಿಯ ಸಾರ್ಥಕತೆಯ ಬಗ್ಗೆ ಆಲೋಚಿಸಿದಾಗ ಒಂದು ಸಾಲು ನೆನಪಿಗೆ ಬರುತ್ತದೆ: ಒಬ್ಬ ಕವಿ ಹೇಳುತ್ತಾನಂತೆ "ಇತರ ಕರ್ಮಫಲಾನಿ ಯದೃಚ್ಛಯಾ ವಿತರ ತಾನಿ ಸಹೇ ಚತುರಾನನಾ, ಅರಸಿಕೇಷು ಕವಿತ್ವ ನಿವೇದನಂ ಶಿರಸಿ ಮಾಲಿಖ ಮಾಲಿಖ ಮಾಲಿಖ!" ಎಷ್ಟೇ ಕರ್ಮಫಲವನ್ನು ಅನುಭವಿಸುವ ಶಿಕ್ಷೆಯನ್ನಾದರೂ ನನಗೆ ಕೊಡು, ಆದರೆ ಆಸಕ್ತನಲ್ಲದವನ ಮುಂದೆ ನನ್ನ ಕಾವ್ಯ ಹೇಳುವುದನ್ನು ಮಾತ್ರ ಕೊಡಬೇಡ ಎಂಬುದು ಬ್ರಹ್ಮನಲ್ಲಿ ಕವಿಯ ಪ್ರಾರ್ಥನೆ. ಎರಡು ತುದಿಗಳು ಪರಸ್ಪರ ಪೂರಕವಾಗಿದ್ದಾಗ ಆಗುವ ಕೆಲಸದ ಗುಣಮಟ್ಟ ಏರುಪೇರಾದರೆ ಇರುತ್ತದೆಯೇ? ಅದೇ ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತಹ ಸನ್ನಿವೇಶ!

☆ – ☆ – ☆

# ಮೀಸಲಾತಿಯ ಪ್ರಶ್ನೆ

ದೇಶದ ಅನೇಕ ನಗರಗಳಲ್ಲಿ ಈಗ ಉನ್ನತ ಶಿಕ್ಷಣದಲ್ಲಿ ಮೀಸಲಾತಿಯ ವಿರುದ್ಧ ಚಳುವಳಿ ನಡೆಯುತ್ತಿದೆ; ಬೆಂಗಳೂರಿನಲ್ಲಿಯೂ ವೈದ್ಯ ವಿದ್ಯಾರ್ಥಿಗಳು ಇದರಲ್ಲಿ ಸೇರಿದ್ದಾರೆ; ಇಂಜಿನಿಯರಿಂಗ್ ವಿದ್ಯಾರ್ಥಿಗಳು ಅದಕ್ಕೆ ಬೆಂಬಲ ಸೂಚಿಸಿರುವರೆಂದು ಪತ್ರಿಕಾ ವರದಿಗಳು ಹೇಳುತ್ತವೆ. ಪತ್ರಿಕೆಗಳು, ಅದರಲ್ಲಿಯೂ ಕೆಲವು ಇಂಗ್ಲಿಷ್ ಪತ್ರಿಕೆಗಳು ಅದನ್ನು ಭಾರಿ ದೊಡ್ಡ ಸುದ್ದಿಯಾಗಿ ಮಾತ್ರವಲ್ಲದೆ, ಆ ವಿದ್ಯಾರ್ಥಿಗಳಿಗೆ ಭಾರಿ ದೊಡ್ಡ ಅನ್ಯಾಯವಾಗಿದೆಯೆಂದು ಬಿಂಬಿಸುತ್ತಿವೆ. ಖಾಸಗಿ ಉದ್ಯಮಗಳಲ್ಲಿಯೂ ಹಿಂದುಳಿದವರಿಗೆ ಮೀಸಲಾತಿ ಇರಿಸಬೇಕೆಂಬ ಕೂಗು ಎದ್ದಿರುವ ಹಿನ್ನೆಲೆಯಲ್ಲಿಯೇ ಮೀಸಲಾತಿ ವಿರೋಧಿ ಚಳುವಳಿ ಆರಂಭಗೊಂಡಿರುವುದು ಕಾಕತಾಳೀಯದಂತೆ ಕಾಣಿಸುವುದಿಲ್ಲ.

ಖಾಸಗೀಕರಣ-ಜಾಗತೀಕರಣಗಳು ಪ್ರಾರಂಭವಾದಾಗ ಮುಂದುವರಿದ ವರ್ಗಗಳಿಗೆ ಸೇರಿದವರು ಹೇಳಲು ತೊಡಗಿದ ಮಾತೆಂದರೆ, "ನಮ್ಮ ಹುಡುಗರಿಗೆ ಇನ್ನಾದರೂ ಕೆಲಸ ಸಿಕ್ಕುವ ಹಾಗಾಯಿತಲ್ಲ" ಎಂಬುದು. ಎಂದರೆ ಮೀಸಲಾತಿಯಿಂದ ಕೂಡಿದ ಸರ್ಕಾರಿ ಹುದ್ದೆಗಳು ಮೇಲುವರ್ಗದವರಿಗೆ ಸಿಕ್ಕುವುದು ಕಡಿಮೆ, ಹಾಗಾಗಿ ಅದಿಲ್ಲದ ಖಾಸಗೀ ವಲಯದಲ್ಲಿ ಅವಕಾಶಗಳು ಮುಕ್ತವಾಗಿರುತ್ತವೆ ಎಂದು. "ಬ್ರಾಹ್ಮಣರಲ್ಲೂ ಬಡವರಿಲ್ಲವೇ?" ಎಂಬ ಪ್ರಶ್ನೆ ಅವರದು. ಇಲ್ಲ ಎಂದವರಾರು? ಖಂಡಿತ ಇದ್ದಾರೆ, ಆದರೆ ಆ ಅನುಪಾತ ಎಷ್ಟು, ಮತ್ತು ಅದರ ಸ್ವರೂಪ ಎಂತಹುದು? ಅಜೀಗರ್ತ ಎಂಬ ಬ್ರಾಹ್ಮಣ ಬಡತನವನ್ನು ನೀಗಿಸಿಕೊಳ್ಳಲು ತನ್ನ ಮಗನೊಬ್ಬನನ್ನು ಬಲಿಕೊಡಲು ಹರಿಶ್ಚಂದ್ರನಿಗೆ ಮಾರಿದನೆಂದು ಕತೆಯಿದೆ; ಮಗನಿಗೆ ಹಾಲು ಕೊಡಲಾರದೆ ದ್ರುಪದನ ಬಳಿ ಹೋಗಿ ದ್ರೋಣ ಅವಮಾನಿತನಾದ ಪ್ರಸಂಗ ಮಹಾಭಾರತದಲ್ಲಿದೆ. ಅಂದರೆ ಆಗಲೂ ಬಡತನ ಬ್ರಾಹ್ಮಣರಲ್ಲಿಯೂ ಇತ್ತು.; ಈಗಲೂ ಇದೆ. ಆದರೆ ಅಲೆಮಾರಿ ಜನಾಂಗಗಳು ಮತ್ತು ಅತಿ ಕೆಳವರ್ಗದವರಲ್ಲಿ ಕೆಲವರು ಅನುಭವಿಸುವ ದಾರಿದ್ರ್ಯದ ಪ್ರಮಾಣ ಮತ್ತು ಸಂಖ್ಯೆ ಬಹು ದೊಡ್ಡದು.

ಅರ್ಹತೆಯ ಆಧಾರದ ಮೇಲೆ ಮಾತ್ರ ಶಿಕ್ಷಣ ಅಥವಾ ಉದ್ಯೋಗ (ಕಾನೂನಿಲ್ಲದೆಯೇ) ಈ ಹಿಂದೆ ಇದ್ದುದರಿಂದಲೇ ಕೆಲವು ವರ್ಗಗಳವರು ಮಾತ್ರ

ಶಿಕ್ಷಣವನ್ನೂ ಪಡೆದರು, ಉದ್ಯೋಗವನ್ನೂ ಪಡೆದರು. ಆ ದಾರಿಯಲ್ಲಿಯೇ ಅವರು ಮುಂದುವರಿದರು. ಅಂತಹವರೇ ಮೀಸಲಾತಿಗೆ ವಿರುದ್ಧವಾಗಿರುವವರು. ಬಹು ಸಂಖ್ಯಾತ ಜನ ಕೈಕಸುಬನ್ನು ನಂಬಿದವರಾಗಿದ್ದುದರಿಂದ ಈ ಕ್ಷೇತ್ರಕ್ಕೆ ಬರಲಿಲ್ಲ. ಮೂಲಭೂತ ಪ್ರಶ್ನೆಯೆಂದರೆ ಅರ್ಹತೆ ಎಂದರೆ ಯಾವುದು? ಪುಸ್ತಕದ ಓದಿನಲ್ಲಿ ಮುಂದಿರುವುದೇ ಅರ್ಹತೆಯೇ? ಅಂತಹ ಓದಿನಲ್ಲಿ ಮುಂದಿರುವುದೇ ಪ್ರತಿಭೆಯ ಕುರುಹು ಎಂಬ ತಪ್ಪು ಕಲ್ಪನೆ ನೆಲೆಯೂರಿ ಅರ್ಹತೆಯ ಪ್ರಶ್ನೆ ಬಂದಾಗ ಅದನ್ನೇ ಮಾನದಂಡವನ್ನಾಗಿ ಮಾಡಿಕೊಳ್ಳುವ ಪರಿಪಾಟ ಬೆಳೆದಿದೆ. ಒಬ್ಬ ಒಳ್ಳೆಯ ಆಡಳಿತಗಾರನಾಗಬೇಕಾದವನು ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ಪಡೆದಿದ್ದರೆ ಸಾಕೇ? ಕೃಷಿ ವಿಷಯದಲ್ಲಿಯೂ ಅಂಕಗಳನ್ನೇ ಆಧರಿಸಿ ಸೀಟು ಕೊಟ್ಟರೆ, ಅಕ್ಕಿ ಮಿಲ್ಲಿನಲ್ಲಿ ತಯಾರಾಗುತ್ತದೆ ಎಂದು ಭಾವಿಸುವ ಹಳ್ಳಿಯನ್ನೇ ಕಾಣದ ವಿದ್ಯಾರ್ಥಿಗಳು, ಹೆಚ್ಚು ಸಂಖ್ಯೆಯಲ್ಲಿ ಆಯ್ಕೆಯಾಗುತ್ತಾರೆ. ಅರ್ಹತೆ ಎಂಬುದು ಒಂದೇ ನಿಟ್ಟಿನಿಂದ ನಿರ್ಧರಿಸುವಂತಹುದೇ? ಇಂಥ ಬುದ್ಧಿವಂತಿಕೆಯಿಂದ ಮಾತ್ರವೇ ಕೆಲಸಗಳು ಸಮರ್ಪಕವಾಗಿ ನಡೆಯುತ್ತವೆಯೇ? ಕೇವಲ ತನ್ನ ಬಗ್ಗೆ ಮಾತ್ರ ಆಲೋಚಿಸದೆ ಇಡೀ ಸಮಾಜದ ಹಿನ್ನೆಲೆಯಲ್ಲಿ ವಿಷಯವನ್ನು ಪರಿಶೀಲಿಸುವ ಮನೋಭಾವ ಹಿಂದೆ ಇದ್ದಷ್ಟು ಪ್ರಮಾಣದಲ್ಲಿ ಈಗ ಇಲ್ಲದಿರಲು ಕಾರಣ 'ತ್ರಿಕರಣ'ಗಳೇ (ಉದಾರೀಕರಣ, ಖಾಸಗೀಕರಣ, ಜಾಗತೀಕರಣ) ಎಂಬುದು ನಿರ್ವಿವಾದ.

ಈ ಮೊದಲು ಬಿಳಿ ಕಾಲರ್ ಕೆಲಸ ಮಾಡುವವರೇ ಬುದ್ಧಿವಂತರು ಎಂಬ ಭಾವನೆಯಿತ್ತು; ಈಗ ಐಟಿಬಿಟಿಗಳಿಂದ ಅದು ಮತ್ತಷ್ಟು ಹೆಚ್ಚಾಗಿದೆ. ಏಕೆಂದರೆ ಅಲ್ಲಿ ಎಲ್ಲರಿಗಿಂತ ಹೆಚ್ಚು ಹಣ ಸಿಕ್ಕುತ್ತದೆ. ಅಲ್ಲದೆ ಅಲ್ಲಿ ಅಮೆರಿಕನ್ ಮಾದರಿಯ ಜೀವನಶೈಲಿಗೆ ಒತ್ತು ಇದೆ; ಅದೇ ಗ್ಲಾಮರ್ ಯುವಕರನ್ನು ಆಕರ್ಷಿಸುವುದು. ಅವುಗಳ ಜೊತೆಗೆ ಮ್ಯಾನೇಜ್‌ಮೆಂಟ್ ಈಗ ಮುಂದಾಗುತ್ತಿದೆ. ಐಐಎಮ್‌ನಲ್ಲಿ ಪಾಸಾದವನಿಗೆ ಅಮೆರಿಕದ ಯಾವುದೋ ಕಂಪನಿ ಲಕ್ಷಾಂತರ ಡಾಲರ್ ಸಂಬಳ ನೀಡಲು ಮುಂದಾಗುತ್ತದೆ. ಹೀಗಾಗಿ ಅದೇ ಜೀವನದ ಪರಮಧ್ಯೇಯ ಅನ್ನಿಸಿಬಿಟ್ಟಿದೆ. ಈ ವಲಯದಲ್ಲಿ ಮೇಲುಸ್ತರದಲ್ಲಿರುವವರು ಎಲ್ಲದಕ್ಕೂ 'ಮೆರಿಟ್' ಎಂದು ಸಾರುತ್ತಿದ್ದಾರೆ; ಇಂಗ್ಲಿಷ್‌ನಲ್ಲಿ ಓದಿದವರು ಮಾತ್ರ ಮೆರಿಟೆಡ್ ಎಂದು ಸೂಚಿಸುತ್ತಿದ್ದಾರೆ. ಇದರಿಂದ ಮೆರಿಟ್-ಇಂಗ್ಲಿಷ್‌ಗಳು ಸಮಾನಾರ್ಥಕಗಳಾಗಿವೆ. ವಿಶ್ವಸುಂದರಿ ಸ್ಪರ್ಧೆಗೆ ಭಾರತೀಯ ಯುವತಿಯನ್ನು ಆರಿಸಿ, ಆ ಮೂಲಕ ಭಾರತದ ಅಲಂಕರಣಸಾಮಗ್ರಿಗಳ ಮಾರ್ಕೆಟ್ ವಶಪಡಿಸಿಕೊಳ್ಳುವ ಹುನ್ನಾರದಂತೆಯೇ ಹೊರಗುತ್ತಿಗೆ ಪದ್ಧತಿಯ ಸಾಫ್ಟ್‌ವೇರ್, ಕಾಲ್ ಸೆಂಟರ್, ಮ್ಯಾನೇಜ್‌ಮೆಂಟ್ ಮುಂತಾದ ವಲಯಗಳಲ್ಲಿಯೂ ನಡೆಯುತ್ತಿರುವಂತೆ ಕಾಣುವುದಿಲ್ಲವೇ?

ದೇಶಕ್ಕೆ ಸ್ವಾತಂತ್ರ್ಯ ಬಂದು ಐವತ್ತು ವರ್ಷಗಳಿಗಿಂತ ಹೆಚ್ಚಾಗಿ ಆಗಿದೆ; ಇನ್ನೆಷ್ಟು ದಿನ ಈ ಮೀಸಲಾತಿ ಎಂಬುದು ಕೆಲವರ ಪ್ರಶ್ನೆ. ಸಾವಿರಾರು ವರ್ಷಗಳಿಂದ

ನಡೆದುಬಂದ ತಾರತಮ್ಯವನ್ನು ಹೋಗಲಾಡಿಸಲು ಐವತ್ತು ವರ್ಷ ಯಾಕೆ ಸಾಕು? ದೇಶದ ಅರ್ಧಭಾಗದಷ್ಟು ಮಂದಿ ಈಗಲೂ ಅನಕ್ಷರಸ್ಥರಾಗಿಯೇ ಇದ್ದಾರೆ. ಅವರೆಲ್ಲ ಅತ್ಯಂತ ಕೆಳವರ್ಗದವರೇ. ಅವರೂ ಸ್ವಲ್ಪ ಮುಂದುವರಿಯಲು ಪ್ರೋತ್ಸಾಹ ಅಗತ್ಯವಿಲ್ಲವೇ? ಜೊತೆಗೆ ಮೀಸಲಾತಿಯ ಲಾಭ ಪಡೆದವರು ಮುಂದೆಯೂ ಅದನ್ನು ಕೊಳ್ಳೆ ಹೊಡೆಯುವ ತರಾತುರಿಯೂ ಇದೆ. ಹಾಗಾಗಿ ಅವರು ತಮ್ಮ ಪೂರ್ವನೆಲೆಯನ್ನು ಮರೆತು ಎಲೀಟ್‌ಗಳಾಗಿ ತೋರಿಸಿಕೊಳ್ಳುತ್ತ ಆವಶ್ಯಕತೆ ಯಿದ್ದವರಿಗೆ ಸಿಗಬೇಕಾದ ಅವಕಾಶಗಳನ್ನು ತಾವೇ ಕಬಳಿಸುತ್ತಾರೆ. ಇದರಿಂದ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿದೆ. ಜೊತೆಗೆ ಖೋಟಾ ಜಾತಿಪ್ರಮಾಣಪತ್ರ ಪಡೆದು ಸರ್ಕಾರದ ಹುದ್ದೆಗಳಲ್ಲಿ ಮೀಸಲಾತಿ ವರ್ಗದವರ ಜಾಗಗಳನ್ನು ಆಕ್ರಮಿಸಿಕೊಂಡಿರು ವವರ ಸಂಖ್ಯೆಯೂ ಕಡಿಮೆಯದಲ್ಲ. ಎಲ್ಲದಕ್ಕೂ ಹಣ ಕೊಡುವ, ಪುಸ್ತಕದ ಓದಿಗೇ ಮಹತ್ವ ನೀಡುವ ನಮ್ಮ ಕಲ್ಪನೆಯೇ ಬದಲಾಗಬೇಕಿದೆ. ಹಾಗಾಗಿ ಮೀಸಲಾತಿಯನ್ನು ನಿಲ್ಲಿಸಿ, ಅಮೆರಿಕನ್ ಮಾದರಿಯ ಮುಕ್ತತೆಗೆ ನಾವು ತೆರೆದುಕೊಳ್ಳುವ ಕಾಲ ಬಂದಿಲ್ಲ. ಇಷ್ಟಕ್ಕೂ ಅಮೆರಿಕನ್ ಶೈಲಿ ನಮಗೇಕೆ ಮಾದರಿಯಾಗಬೇಕು?

ದೇಶಕ್ಕೆ ಸ್ವಾತಂತ್ರ್ಯ ಬಂದು ಐವತ್ತು ವರ್ಷಗಳಾಗಿರುವ ಈ ಸನ್ನಿವೇಶದಲ್ಲಿ ನಮ್ಮ ಮೀಸಲಾತಿ ನೀತಿಯನ್ನು ಪುನರ್ಪರಿಶೀಲಿಸುವ, ಪುನಸ್ಸಂಯೋಜಿಸುವ ಕಾಲ ಬಂದಿರಬಹುದು; ಆದರೆ ಅದನ್ನು ಕಿತ್ತೆಸೆಯುವ ಕಾಲ ಖಂಡಿತ ಬಂದಿಲ್ಲ. ಖಾಸಗಿ ವಲಯವು ದೇಶದ ಒಟ್ಟು ವರಮಾನದಲ್ಲಿ ಬಹು ದೊಡ್ಡ ಪ್ರಮಾಣವನ್ನು ಹೊಂದಿದೆ ಎಂಬ ಕಾರಣಕ್ಕಾಗಿ ಅದು ಜನತೆಗಿಂತ ದೊಡ್ಡದಲ್ಲ, ಜನತೆಗೆ ಅದು ಸಲ್ಲಿಸಬೇಕಾದ ಕರ್ತವ್ಯವೂ ಇದೆ. ಹೀಗಾಗಿ ಖಾಸಗಿ ವಲಯವನ್ನೂ ಒಳಗೊಂಡಂತೆ ಮೀಸಲಾತಿ ಯನ್ನು ಹೇಗೆ ಅರ್ಥಪೂರ್ಣವಾಗಿ ಜಾರಿಗೊಳಿಸಬೇಕೆಂಬುದರ ಬಗ್ಗೆ ಪ್ರಜ್ಞಾವಂತರು ಆಲೋಚಿಸಬೇಕಾಗಿದೆ; ಸರ್ಕಾರ ತೀರ್ಮಾನಿಸಬೇಕಾಗಿದೆ.

☆ – ☆ – ☆

# ಬದುಕ ಕಟ್ಟುವ ಬದಲು...

ಕಳೆದ ಕೆಲವು ದಿನಗಳು ಎಸ್‌ಎಸ್‌ಎಲ್‌ಸಿ ಮತ್ತು ಪಿಯು ಪರೀಕ್ಷಾ ಫಲಿತಾಂಶಗಳು ಹೊರಬಿದ್ದ ಕಾಲ. ಫಲಿತಾಂಶಗಳು ಹೊರಬಿದ್ದು, ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳ ಚಿತ್ರಗಳು ಪತ್ರಿಕೆಗಳಲ್ಲಿ ಪ್ರಕಟವಾಗುವ ಜೊತೆಜೊತೆಯಲ್ಲೇ ನಪಾಸಾದ ಕೆಲವರು ಆತ್ಮಹತ್ಯೆ ಮಾಡಿಕೊಂಡ ವರದಿಗಳು ಪ್ರಕಟವಾಗಿವೆ. ಪ್ರತಿ ವರ್ಷ ಇದು ಹೀಗೆಯೇ. ಯಾಕೆ ಹೀಗೆ? ಬದುಕಬೇಕಾದವರು ಸಾಯಲು ಮುಂದಾಗುವರಲ್ಲ, ಕಾರಣವೇನು? ಆ ವಯಸ್ಸಿನ ಹುಡುಗರು ಎಂದರೆ ಇನ್ನೂ ರೆಕ್ಕೆ ಬಲಿಯದ ಹಕ್ಕಿಗಳು, ಮೈಯ ಎಳೆತನ ಮಾಸದ ಚಿಗರೆಗಳು. ಇಂಥವರು ಸಾಯುವ ಕಲ್ಪನೆಯನ್ನು ಮಾಡಿಕೊಳ್ಳುವುದಾದರೂ ಹೇಗೆ?

ಸಾವು ಬದುಕಿಗೆ ಎಂದೂ ಪರ್ಯಾಯವಲ್ಲ; ಅದು ಬದುಕಿನ ಕೊನೆಯ ಘಟ್ಟ. ಹುಟ್ಟಿದ ಮೇಲೆ ಸಾವು ನಿರ್ಧರಿತವಾದರೂ ಅದು ತಾನಾಗಿ ಬರುವಂತಹುದು. ತಾನಾಗಿ ಬರುವುದು ಸಹಜ, ತಂದುಕೊಳ್ಳುವುದು ಅಸಹಜ. ಕೊನೆಗೆ ಬರಬೇಕಾದುದನ್ನು ಬಹು ಮೊದಲೇ ಬರಮಾಡಿಕೊಳುವುದರ ಹಿಂದಿನ ಮನೋಭಾವವೆಂತಹುದು? ಬದುಕು ಎಷ್ಟು ಅದಮ್ಯ ಎಂದರೆ ಸಾಯುವುದು ಸುಲಭವೇ ಅಲ್ಲ. ಮರವನ್ನು ಬುಡಕ್ಕೆ ಕತ್ತರಿಸಿ ಹಾಕಿದರೂ, ಕೆಲವು ದಿನಗಳಾದ ಮೇಲೆ, ಒಂದೆಡೆ ಅದು ಚಿಗುರಿರುತ್ತದೆ. ಸಾವು ಬದುಕಿನ ನಡುವೆ ಹೋರಾಡುವ ತೀವ್ರ ರೋಗಿಯನ್ನು ಗಮನಿಸಿ; ಅವನ ದೇಹ ಸಾವನ್ನು ಮಣಿಸಲು ಸತತ ಹೋರಾಟ ನಡೆಸುತ್ತಿರುತ್ತದೆ. ಎಂತಹುದೇ ಪರಿಸ್ಥಿತಿಯಲ್ಲೂ ಬದುಕಲು ಜೀವ ಸೆಣೆಸಾಡುತ್ತದೆ. ಅಂದರೆ ಬದುಕು ಇನ್ನೂ ಪೂರ್ತಿ ಅರಳುವ ಮೊದಲೇ ಸಾವನ್ನು ಇಷ್ಟಪಡುವುದು ಪ್ರಕೃತಿವಿರುದ್ಧವೇ ಸರಿ.

ಇದಕ್ಕೇನು ಕಾರಣ? ಇದರಲ್ಲಿ ಎರಡು ಬದಿಗಳಿವೆ: ಒಂದು, ಸಾಯುವ ವ್ಯಕ್ತಿಯ ಸ್ಥೈರ್ಯದ ಪ್ರಮಾಣ, ಮತ್ತು, ಎರಡನೆಯದು, ಸುತ್ತಲಿನ ಪರಿಸರದ ಒತ್ತಡ. ಸಾಯಲು ನಿರ್ಧರಿಸುವ ವಿದ್ಯಾರ್ಥಿಗಳಲ್ಲಿ ಕೆಲವರು ದುರ್ಬಲ ಮನಸ್ಸಿನವರು ಎಂದು ಅಂದುಕೊಳ್ಳೋಣ. ಆದರೆ ಈ ದೌರ್ಬಲ್ಯವೂ ಹುಟ್ಟಿನಿಂದ ಬಂದುದಿರಲಾರದು. ಯಾಕೆಂದರೆ ಜೀವ ಮೈದಳೆಯುವುದೇ ಬದುಕಲು. ಅಂದರೆ

ಸಾಯುವ ಮಾತೆಲ್ಲಿಂದ ಬಂತು! ಮನಸ್ಸು ಪ್ರಕೃತಿಗೆ ವಿರುದ್ಧವಾಗಿ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗುವುದಾದರೂ ಹೇಗೆ? ಅಂದರೆ ಆ ದೌರ್ಬಲ್ಯವೂ ಹೊರಗಿನಿಂದಲೇ ಬಂದುದಾಗಿರಬೇಕು. ಎಲ್ಲ ವ್ಯಕ್ತಿಗಳ ಮನೋಭಾವವೂ ಒಂದೇ ಬಗೆಯದಲ್ಲ ಎಂಬುದು ನಿಜ. ಕೆಲವರದಕ್ಕೆ ಗಟ್ಟಿತನವಿಲ್ಲದಿರಬಹುದು. ವಂಶವಾಹಿಗಳಲ್ಲೇ ಇಂತಹ ಗುಣಗಳಿರಲು ಸಾಧ್ಯ. ಆದರೆ ಇದು ಮೂಲಭೂತವಾದ ಇರುವಿಕೆಯನ್ನೇ ನಿರಾಕರಿಸುವ ಮಟ್ಟಕ್ಕೆ ಹೋಗುವುದು ಸಹಜವಲ್ಲ.

ಪ್ರತಿ ವ್ಯಕ್ತಿಯ ಮನಸ್ಸಿನಲ್ಲಿ ಸೂಪರ್ ಈಗೋ ಎಂಬ ಭಾಗವೊಂದಿರುತ್ತದಂತೆ; ಪ್ರತಿಯೊಂದು ನಿರ್ಧಾರವನ್ನೂ ತೆಗೆದುಕೊಳ್ಳಲು ಮನಸ್ಸಿಗೆ ಪ್ರೇರಿಸುವ ಘಟಕವಿದು. ಯಾವುದೇ ನಿರ್ಧಾರ ಕೈಗೊಳ್ಳಲು, ಮತ್ತು ಅದನ್ನು ಕಾರ್ಯಗತಗೊಳಿಸುವ ಮುಂಚೆ ಇದು ಅದರ ಪೂರ್ವಾಪರಗಳನ್ನೆಲ್ಲ ಅಳೆದೂ ಸುರಿದೂ ನೋಡಿ ಅಂತಿಮ ನಿಲವಿಗೆ ತಲುಪಿರುತ್ತದೆ. ಅಂದರೆ ಸಾಯುವ ವ್ಯಕ್ತಿಯ ಸೂಪರ್ ಈಗೋ ಅದರೆಡೆಗೆ ನುಗ್ಗುವ ಮುಂಚೆ ಹಿಂದುಮುಂದಿನದನ್ನೆಲ್ಲ ವಿವೇಚನೆ ನಡೆಸಿರುತ್ತದೆ. ಇಷ್ಟಾದ ಮೇಲೂ ಪ್ರಕೃತಿ ವಿರುದ್ಧವಾದ ನಿರ್ಧಾರ ಕೈಗೊಳ್ಳಲು ಅದಕ್ಕೆ ಸಾಧ್ಯವಾಯಿತೆಂದರೆ ಅದು ಅಸಹಜ ಕಾರಣದಿಂದ ಆದುದು ಎಂದೇ ಅರ್ಥ. ಪ್ರಕೃತಿಗೆ ವಿರುದ್ಧವಾದುದೇ ಅಸಹಜತೆ. ಅಂದರೆ ಆ ಕ್ಷಣದಲ್ಲಿ ಪ್ರಕೃತಿವಿರುದ್ಧ ಪರಿಸ್ಥಿತಿ ಮೇಲುಗೈ ಸಾಧಿಸಿತು ಎಂದರ್ಥ.

ಆತ್ಮಹತ್ಯೆಗೆ ಕೈಹಾಕುವ ಮುಂಚೆ ವ್ಯಕ್ತಿಯ ಮನಸ್ಸಿನಲ್ಲಿ ಸಾಯುವ ಕುರಿತು ನಡೆಯುವ ತೊಳಲಾಟದಲ್ಲಿ, ಅದೆಷ್ಟೇ ಕಡಿಮೆ ಕಾಲದ್ದಾಗಿರಲಿ, ಅಸಹಜತೆ ಮೇಲುಗೈ ಸಾಧಿಸಿತೆಂದರೆ, ವ್ಯಕ್ತಿಯ ಆವರೆಗಿನ ಬದುಕಿನ ಹಿನ್ನೆಲೆಯಲ್ಲಿ ಅದಕ್ಕೇ ಪ್ರಾಧಾನ್ಯ ಸಿಕ್ಕಿತ್ತು ಎಂದಂತಾಯಿತು. ಅಂದರೆ ತನ್ನ ಪರಿಸ್ಥಿತಿಯಲ್ಲಿ ಸಾಯುವ ತೀರ್ಮಾನ ಕೈಗೊಳ್ಳಲು ಹಿನ್ನೆಲೆಗಿರುವ ಕಾರಣಗಳು ಸರಿ ಎಂದು ವ್ಯಕ್ತಿ ನಿರ್ಧರಿಸಿರುತ್ತಾನೆ. ಅಂದರೆ ಫೇಲಾಗಿರುವುದು ಅಸಹಜ, ಆ ಹಿನ್ನೆಲೆಯಲ್ಲಿ ತನ್ನ ಬದುಕಿಗೆ ಸಾರ್ಥಕ್ಯವಿಲ್ಲ ಎಂಬುದು ಆ ತೀರ್ಮಾನ. ಇಂತಹುದೊಂದು ನಿಲವಿಗೆ ಆ ಕಿರು ವಯಸ್ಸಿನ ವ್ಯಕ್ತಿ ಬರಲು ಆ ಕಿರುಬಾಳಿನಲ್ಲಿ ಆ ಬಗ್ಗೆ ಅವನ ಮೇಲೆ ಆಗಿರಬಹುದಾದ ಪ್ರಭಾವದ ತೀವ್ರತೆ ಎಂತಹುದು! ಫೇಲಾದರೂ ಬದುಕುವುದು ಸರಿ ಎಂಬುದಕ್ಕಿಂತಲೂ, ಬದುಕಿರಬಾರದು ಎಂಬುದರ ಕಡೆಗೆ, ಬದುಕಬೇಕೆಂಬ ಅದಮ್ಯ ಆಸೆಯ ವಿರುದ್ಧ, ತೀವ್ರ ಸೆಳೆತ ಇರಬೇಕಾದರೆ ಸುತ್ತಮುತ್ತಲಿನವರು ಎಂತಹ ಒತ್ತಡಕ್ಕೆ ಆ ವ್ಯಕ್ತಿಯನ್ನು ಸಿಲುಕಿಸುತ್ತಲೇ ಬಂದಿದ್ದಾರೆ ಎಂಬುದರ ಅರಿವಾಗಬಹುದು. ಅಂದರೆ ವ್ಯಕ್ತಿಯ ಸುತ್ತಲಿನ ಒತ್ತಡ ತೀವ್ರ ಅಸಹಜತೆಯ ಕಡೆಗೇ ತುಡಿದಿರುತ್ತದೆ.

ಎರಡನೆಯ ಕಾರಣ ಪರಿಸ್ಥಿತಿ ಎಂಬುದು. ಆದರೆ ಈಗಾಗಲೇ ವಿವರಿಸಿರುವಂತೆ ಯಾವುದು ವ್ಯಕ್ತಿಯ ಸ್ವಭಾವವೋ ಅದನ್ನು ರೂಪಿಸಿರುವುದೂ ಈ ಪರಿಸ್ಥಿತಿಯೇ. ಇದು ಅಸಹಜವಾದುದನ್ನು ಪ್ರೇರಿಸುವ ರೀತಿಯದು ಎಂಬುದರಿಂದ

ಅದರ ಸ್ವರೂಪವೂ ಅಸಹಜವಾದುದು, ಪ್ರಕೃತಿವಿರುದ್ಧವಾದುದು ಎಂದು ತಿಳಿಯುವುದಿಲ್ಲವೇ? ಎಂದರೆ ವ್ಯಕ್ತಿಯ ಅಸಹಜ ಸಾವಿಗೆ, ತನ್ನ ಸಾವನ್ನು ತಾನೇ ತಂದುಕೊಳ್ಳುವುದಕ್ಕೆ, ಇರುವುದು ಒಂದೇ ಕಾರಣ, ಅದು ಸುತ್ತಲಿನ ಪರಿಸರ ಎಂಬುದು ನಿರ್ಧಾರಿತವಾಯಿತು. ನಮ್ಮ ಸಮಾಜ, ಅದರ ಭಾಗವಾದ ಕುಟುಂಬ, ಅಸಹಜತೆಯ ಕಡೆಗೆ ಹೆಚ್ಚು ತುಯ್ಯುತ್ತಿದೆಯೇನೋ ಅನ್ನಿಸುತ್ತದೆ. ಮೊದಲು ಬದುಕು, ಆಮೇಲೆ ಹೇಗೆ ಬದುಕುವುದು ಎಂಬುದು ನಿರ್ಧಾರಿತವಾಗಬೇಕು. ಅದು ಬಿಟ್ಟು, ಹೀಗೆ ಬದುಕಲು ಆಗದಿದ್ದರೆ ಸಾವೇ ಸರಿ ಎಂಬ ಭಾವನೆ ಬರುವಂತೆ ಮಾಡುವ ನಮ್ಮ ಸಮಾಜದ ಆದರ್ಶಗಳ ಬಗ್ಗೆಯೇ ನಮಗೆ ಅಸಮಾಧಾನ ವುಂಟಾಗುತ್ತದೆ. ಬದುಕಿನ ಆದರ್ಶ ಯಾವುದಾಗಿರಬೇಕು? ಮಾನವ ಸಮಾಜಜೀವಿ ಯಾಗಿರುವುದರಿಂದ, ತನ್ನ ಸುರಕ್ಷತೆಗೆ ಸಮಾಜ ಸಹಾಯಕವಾಗುವುದರಿಂದ, ಅದಕ್ಕೆ ಅನ್ಯಾಯವೆಸಗದ ರೀತಿಯಲ್ಲಿ ವ್ಯಕ್ತಿಯು ಯಾವ ಮಾರ್ಗವನ್ನು ಅನುಸರಿಸಿ ಬಾಳ್ವೆ ಮಾಡಿದರೂ ಸರಿಯೇ. ಅಲ್ಲದೆ ಸಮಾಜದಂತಹ ಅತ್ಯಂತ ಸಂಕೀರ್ಣ ಜಾಲದಲ್ಲಿ ಬದುಕಿನ ಅಸಂಖ್ಯ ಪರಿಗಳಿರುತ್ತವೆ, ಅವೆಲ್ಲವೂ ಅನಿವಾರ್ಯ. ಆದ್ದರಿಂದ ಆ ಯಾವ ಮಾರ್ಗದಲ್ಲಿ ಬದುಕಿದರೂ ಸರಿಯೇ, ನ್ಯಾಯಯುತವೇ. ಅದರ ಬದಲು ಹೀಗೇ ಇರಬೇಕು, ಇಂತ ಕೆಲಸವನ್ನೇ ಮಾಡಿ ಬದುಕಬೇಕು ಎಂದು ಒತ್ತಡ ಹೇರುವುದು ಅನ್ಯೆತಿಕತೆಯ ಪರಮಾವಧಿ. ಅದರಿಂದಲೇ ಬದುಕಲು ಆರಂಭಿಸುವ ಮಂದಿಯೇ ಅದನ್ನು ಮುರಿದುಕೊಳ್ಳಲು ಮುಂದಾಗುವುದು.

ಹಿರಿಯರು ಮಕ್ಕಳ ಮೇಲೆ, ಅವರ ಇಷ್ಟಕ್ಕೆ ವಿರುದ್ಧವಾದ ಒತ್ತಡ ಹೇರು ವುದನ್ನು ನಿಲ್ಲಿಸಬೇಕು. ಪ್ರತಿಯೊಬ್ಬನೂ ಒಂದಲ್ಲ ಒಂದು ಬಗೆಯಲ್ಲಿ ಉಪಯುಕ್ತನೇ. ತನಗೆ ಯಾವುದು ಸಾಧ್ಯವೋ ಅದನ್ನು ಅವನು ಮಾಡುವಷ್ಟು ಸಮರ್ಪಕವಾಗಿ ಬೇರೆಯದನ್ನು ಮಾಡಲಾರ. ಅಂದರೆ ವ್ಯಕ್ತಿಯ ಗರಿಷ್ಠ ಉಪಯುಕ್ತತೆ ತನಗೆ ಇಷ್ಟ ಬಂದುದನ್ನು ಮಾಡಿದಾಗ ಮಾತ್ರ. ತಮಗೆ ಬೇಕಾದುದನ್ನು ಹಿರಿಯರು ಮಕ್ಕಳ ಮೇಲೆ ಹೇರುವುದನ್ನು ನಿಲ್ಲಿಸಿದರೆ ಕಿರಿಯರ ಆತ್ಮಹತ್ಯೆಯಂತಹ ದುರಂತಗಳು ಕಡಿಮೆಯಾದಾವು. ಅವರು ಮಕ್ಕಳಿಂದ ನಿರೀಕ್ಷಿಸಬೇಕಾದುದು ಪ್ರಾಮಾಣಿಕತೆ, ವೃತ್ತಿನಿಷ್ಠೆ, ಋಜುಮಾರ್ಗ ಇಂತಹ ಮೌಲ್ಯಗಳ ಪಾಲನೆಯನ್ನೇ ಹೊರತು ಬದುಕಿನ ಹೊರ ರೀತಿಯನ್ನಲ್ಲ.

☆ – ☆ – ☆

# ಸಂದ ಕಾಲಗುಣವೋ ನಿಂದ ನೆಲದ ಗುಣವೋ

ಸುಮಾರು ನಲವತ್ತು ವರ್ಷಗಳ ಹಿಂದೆ ನಾನು ಜೆ.ಎಂ. ಬ್ಯಾರಿ ಎಂಬ ಲೇಖಕನ 'ದಿ ಅಡ್ಮಿರಬಲ್ ಕ್ರೈಟನ್' ಎಂಬ ನಾಟಕವನ್ನು ಪಠ್ಯವಾಗಿ ಓದಿದ್ದೆ. ಆ ಪುಸ್ತಕ ನನಗೆ ಈಗ ನೆನಪಿಗೆ ಬರಲು ಕಾರಣ, ಪರಿಸ್ಥಿತಿ ಮನೋಭಾವಗಳನ್ನು ಹಾಗೂ ಆದರ್ಶಗಳನ್ನು ಬದಲಿಸಬಹುದಲ್ಲವೇ ಎಂಬ ಆಲೋಚನೆ ಮನಸ್ಸಿಗೆ ಬಂದದ್ದು. ಎಲ್ಲ ವ್ಯಕ್ತಿಗಳೂ ಮೂಲಭೂತವಾಗಿ ಸಮಾನರು ಎಂಬುದು ತಾತ್ವಿಕವಾಗಿ ನಿಜ; ಆದರೆ ಪರಿಸ್ಥಿತಿಯೇ ಒಬ್ಬನ ಸುಸಂಗತತೆಯನ್ನು ಸ್ಥಾಪಿಸುವುದು ಎಂಬುದು ಸರಿಯಿರಬಹುದೇ ಎಂಬ ಅನುಮಾನ ನನ್ನನ್ನು ಕಾಡತೊಡಗಿದ್ದರಿಂದ ಈ ನಾಟಕದ ನೆನಪು ಬಂದಂತೆ ತೋರುತ್ತದೆ.

ನಾಟಕದ ವಸ್ತು ಸರಳವಾದದ್ದೇ: ಅದರ ಭೂಮಿಕೆ ಸ್ವಲ್ಪ ಹಿಂದಿನ ಕಾಲದ ಇಂಗ್ಲಂಡ್; ಅದರಲ್ಲೂ ಲಂಡನ್. ಅಲ್ಲೊಬ್ಬ ಶ್ರೀಮಂತ ನೈಟ್. ಪರಂಪರಾನುಗತವಾಗಿ ಬಂದ ನೈಟ್‌ಹುಡ್ ಜೊತೆಗೇ ಬಂದ ಅಪಾರ ಆಸ್ತಿ. ಹೀಗಾಗಿ ಅವನ ಮನೆಯಲ್ಲಿ ಲಕ್ಷ್ಮಿ ತಾಂಡವವಾಡುತ್ತಾಳೆ. ಮನೆಯ ತುಂಬ ಆಳುಕಾಳುಗಳು. ಮನೆಯ ಯಜಮಾನ ನೈಟ್ ಆದರೂ, ಇಂಗ್ಲಂಡ್‌ನ ಪದ್ಧತಿಯಂತೆ ಅವನ ಹುದ್ದೆ ಆನುವಂಶಿಕವಾದರೂ, ಅವನು ಆಧುನಿಕ ಮನೋಭಾವದವನು. ಆಗಿನ ಕೆಲವರಲ್ಲಿದ್ದಂತೆ ಈ ನೈಟ್‌ನ ಮೇಲೂ ಸಮಾಜವಾದದ ಪ್ರಭಾವ ಆಗಿದೆ. ವರ್ಗಪದ್ಧತಿ ದೈವ ನಿರ್ಮಿತವಾದುದು ಎಂದು ಸಾಂಪ್ರದಾಯಿಕ ನಂಬಿಕೆಗೆ ಅವನು ಜೋತುಬಿದ್ದವನಲ್ಲ; ಬದಲಾಗಿ ಎಲ್ಲ ಮನುಷ್ಯರೂ ಮೂಲತಃ ಸಮಾನರು ಎಂಬ ಸಿದ್ಧಾಂತವನ್ನು ರೂಢಿಸಿಕೊಂಡಿದ್ದವನು. ಆದರೆ ಹಿಂದಿನದನ್ನು ಸಂಪೂರ್ಣವಾಗಿ ಧಿಕ್ಕರಿಸಿ ಹೊಸತನ್ನು ಅಂಗೀಕರಿಸುವ ಕ್ರಾಂತಿಪುರುಷನೇನಲ್ಲ ಈ ನಮ್ಮ ನೈಟ್. ಆದರೆ ಸಾಂಕೇತಿಕವಾಗಿ ತನ್ನ ನಂಬಿಕೆಯನ್ನು ತೋರಿಸಲು ವರ್ಷದಲ್ಲಿ ಒಂದು ದಿನ ಎಲ್ಲ ನೌಕರರಿಗೂ ಒಂದು ಔತಣಕೂಟವನ್ನೇರ್ಪಡಿಸುತ್ತಾನೆ; ಅವರ ಜೊತೆಯಲ್ಲಿ ತಾನೂ ಸಹಪಂಕ್ತಿಭೋಜನ ಮಾಡುತ್ತಾನೆ. ಅವತ್ತಾದರೂ ಯಜಮಾನ-ಸೇವಕ ತಾರತಮ್ಯವನ್ನು ತೊಡೆದುಹಾಕುವುದು ಅವನ ಉದ್ದೇಶ.

ನೈಟ್‌ನ ಹೆಂಡತಿ ಈಗ ಬದುಕಿದ್ದಂತೆ ತೋರದು; ಆದರೆ ಅವನಿಗೆ ಮೂರು

ಮಂದಿ ಮುದ್ದುಕುವರಿಯರು. ಅಪರೂಪದ ಚೆಲುವೆಯರು; ಜೊತೆಗೆ ಶ್ರೀಮಂತ ಕುಟುಂಬದವರಾದ್ದರಿಂದ ಡೌಲು ಆವರಿಸಿಕೊಂಡಿದೆ. ತಂದೆ ಸೇವಕರ ಜೊತೆಯಲ್ಲಿ ಕುಳಿತು, ವರ್ಷಕ್ಕೆ ಒಂದು ದಿನವಾದರೂ, ಊಟಮಾಡುವುದು ಅವರಿಗೆ ಸರಿಬೀಳದು. ಆದರೆ ತಂದೆಗೆ ವಿರೋಧವಾಗಿ ನಡೆದುಕೊಳ್ಳದೆ ಅಂದಿನ ಮುಜುಗರ ವನ್ನು ಹೇಗೋ ಸಹಿಸಿಕೊಳ್ಳುತ್ತಾರೆ. ಒಂದು ದಿನ ತಾನೇ, ಮಾರನೇ ದಿನದಿಂದ ಮತ್ತೆ ಎಲ್ಲ ಯಥಾಪ್ರಕಾರ. ಹೀಗೆ ಸಾಕಷ್ಟು ಕಾಲ ನಡೆದುಬರುತ್ತದೆ. ವರ್ಷಂಪ್ರತಿಯ ಈ ಆಚರಣೆಗೆ ಅವರು ಒಗ್ಗಿಕೊಂಡಿದ್ದಾರೆ.

ಒಂದು ಸಲ ನೈಟ್ ತನ್ನ ಮೂವರು ಮಗಳಂದಿರ ಜೊತೆಯಲ್ಲಿ ದೋಣಿಯಲ್ಲಿ ಸಮುದ್ರಸಂಚಾರ ಹೊರಡುತ್ತಾನೆ. ಜೊತೆಗೆ ಸಹಾಯಕ್ಕೆ ಇರಲಿ ಎಂದು, ಹೋದೆಡೆಯಲ್ಲೆಲ್ಲ ರುಚಿಕರವಾಗಿ ಅಡುಗೆ ಮಾಡಿ ಬಡಿಸಲಿ ಎಂದು, ತಮ್ಮ ಕುಟುಂಬದ ಅಡುಗೆಯವನನ್ನು ಕರೆದೊಯ್ಯುತ್ತಾರೆ. ಅವನ ಹೆಸರು ಕ್ರೈಟನ್; ದೀರ್ಘಕಾಲದಿಂದ ಈ ಮನೆಯ ಸೇವೆ ಮಾಡಿದ ನಂಬಿಕಸ್ಥ; ತುಂಬ ಚೆನ್ನಾಗಿ, ಯಜಮಾನರ ಮನವರಿತು, ಬೇಕಾದುದನ್ನು ಅಟ್ಟಬಲ್ಲ ನಿಪುಣ. ಸರಿ, ಈ ಐವರೂ ಒಂದು ಸುಸಜ್ಜಿತವಾದ ದೋಣಿಯಲ್ಲಿ, ತಮ್ಮ ಯಾತ್ರೆಯ ಅವಧಿಗೆ ಬೇಕಾದಷ್ಟು ವಸ್ತುಗಳನ್ನು ಆವಶ್ಯಕವಾದ ಪ್ರಮಾಣದಲ್ಲಿ ತುಂಬಿಕೊಂಡು, ಹೊರಡುತ್ತಾರೆ.

ದೂರದೂರದ ದೇಶಗಳಿಗೆಲ್ಲ ಅವರು ಹೋಗಿ ಸುಂದರ ಸ್ಥಳಗಳನ್ನೆಲ್ಲ ನೋಡಿ ಸಂತೋಷದಿಂದ ಯಾತ್ರೆ ನಡೆಸುತ್ತಿರುತ್ತಾರೆ. ಆದರೆ ಕೊನೆಗೊಮ್ಮೆ ಅವರಿಗೆ ಕಷ್ಟ ಒದಗುತ್ತದೆ. ಯಾವುದೋ ದೂರದ ಅಪರಿಚಿತ ಜಾಗದಲ್ಲಿ, ದೋಣಿ ಸಮುದ್ರದ ಮೇಲೆ ತೇಲುತ್ತಿರುವಾಗ, ಬಿರುಗಾಳಿಗೆ ಸಿಕ್ಕಿ ದಡಕ್ಕೆ ಹೊಡೆದುಕೊಂಡು ಬಂದು ಬಂಡೆಗೆ ಅಪ್ಪಳಿಸಿಬಿಡುತ್ತದೆ. ಕ್ರೈಟನ್ ಯಜಮಾನ ಹಾಗೂ ಅವನ ಮಕ್ಕಳನ್ನು ಆ ತೀರದ ದ್ವೀಪಕ್ಕೆ ಕರೆದು ತರುತ್ತಾನೆ. ತಾವು ಎಲ್ಲಿದ್ದೇವೆಂಬುದೇ ಅವರಿಗೆ ತಿಳಿಯದು; ಜೊತೆಗೆ ಅದು ನಿರ್ಜನವಾದ ದ್ವೀಪ, ಯಾರ ಸುಳಿವೂ ಇಲ್ಲ. ಹೀಗಾಗಿ ಈ ಐವರೇ ಅಲ್ಲಿ ಸಮಸ್ತರು. ಸಿಕ್ಕಿದುದನ್ನೇ ತಂದು ತಿಂದು ಬದುಕಬೇಕಾದ ಪರಿಸ್ಥಿತಿ. ನೈಟ್ ಆಗಲಿ ಅವನ ಮಕ್ಕಳಾಗಲೀ ದೇಹಶ್ರಮಕ್ಕೆ ಒಗ್ಗಿದವರಲ್ಲ; ಆದರೆ ಅಲ್ಲಿ ಎಲ್ಲವನ್ನೂ ಕಷ್ಟಪಟ್ಟು ಸಂಪಾದಿಸಬೇಕು. ಅವರ ವಿಧೇಯ ಸೇವಕನಾದ ಕ್ರೈಟನ್ ಅವರಿಗಾಗಿ ಎಲ್ಲ ದೇಹಶ್ರಮವನ್ನೂ ಹೊತ್ತುಕೊಳ್ಳುತ್ತಾನೆ. ಬಲಾಢ್ಯನಾದ ಅವನು ಹೀಗೆ ತನ್ನ ಯಜಮಾನನ ಕುಟುಂಬವನ್ನು ಕಾಪಾಡುವ ಅನಿಮಿತ್ತಬಂಧುವಾಗುತ್ತಾನೆ. ಗುಡಿಸಲು ನಿರ್ಮಾಣ, ಹಣ್ಣುಕಾಯಿಗಳಿಗಾಗಿ ಮರ ಹತ್ತುವುದು, ಕುಡಿಯುವ ನೀರು ಹೊತ್ತು ತರುವುದು, ಅಡಿಗೆ ಮಾಡುವುದು – ಎಲ್ಲ ಅವನದೇ.

ಕ್ರೈಟನ್‌ನ ಶ್ರಮ ಅವರನ್ನೆಲ್ಲ ಸಲಹುತ್ತದೆ. ಅನಿವಾರ್ಯವಾಗಿ ಅವರು ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳಬೇಕು. ಕಾಲಕ್ರಮೇಣ ಅದು ಒಗ್ಗಿಹೋಗಿ ತಾವು ಮೊದಲಿನಿಂದ ಹೀಗೇ ಇದ್ದದ್ದು ಎಂಬಂತಾಗುತ್ತದೆ. ಅವರೆಲ್ಲ ಕ್ರೈಟನ್‌ನ

ಮರ್ಜಿಯನ್ನು ಅನುಸರಿಸಬೇಕು; ಅವನೊಬ್ಬನೇ ಮಿಕ್ಕ ನಾಲ್ವರ ಬೇಕುಬೇಡಗಳನ್ನು ಗಮನಿಸಬಹುದಾದವನು. ಹೀಗಾಗಿ ಬರಬರುತ್ತ ಅವನು ಅವರ ಆರಾಧ್ಯನಾಗಿ ಬಿಡುತ್ತಾನೆ. ಮೂವರು ಹೆಣ್ಣುಮಕ್ಕಳಿಗಂತೂ ಅವನ ಮೇಲೆ ಒಳಗೇ ಕೃತಜ್ಞತಾ ಮೂಲದ ಪ್ರೀತಿ ಬೆಳೆಯುತ್ತದೆ. ಬರಬರುತ್ತ ಅವನ ಮನಸ್ಸನ್ನು ಗೆಲ್ಲಬೇಕೆಂಬ ಪೈಪೋಟಿ ಅವರ ನಡುವೆ ಏರ್ಪಡುತ್ತದೆ. ಇನ್ನೂ ಕಾಲ ಸರಿದಂತೆ ಅದು ಬಹಿರಂಗಗೊಳ್ಳುವಷ್ಟರ ಮಟ್ಟಿಗೆ ಉಲ್ಬಣವಾಗುತ್ತದೆ.

ಆದರೆ ಈ ಹಂತದಲ್ಲಿ ಒಂದು ತಿರುವು; ಲಂಡನ್ನಿನಲ್ಲಿ ನೈಟ್‌ನ ದೋಣಿ ನಾಪತ್ತೆಯಾದುದು ಸುದ್ದಿಯಾಗಿ ಸರ್ಕಾರ ಅವರ ಪತ್ತೆಗಾಗಿ ಒಂದು ರಕ್ಷಣಾ ದೋಣಿಯನ್ನು ಕಳಿಸಿ ಅದು ಎಲ್ಲಡೆ ತಿರುಗಾಡಿಕೊಂಡು ಇವರಿದ್ದ ದ್ವೀಪದ ಬಳಿ ಬಂದಾಗ, ದಡದಲ್ಲಿದ್ದ ಕ್ರೈಟನ್ ಕೈಬೀಸಿ ಅನ್ನು ಬಳಿ ಕರೆದು ಬರಮಾಡಿಕೊಳ್ಳುತ್ತಾನೆ. ಮತ್ತೆ ಎಲ್ಲರೂ ಅದರಲ್ಲಿ ಲಂಡನ್ ಸೇರಿಕೊಳ್ಳುತ್ತಾರೆ. ಈಗ ನೈಟ್ ಯಜಮಾನ; ಕ್ರೈಟನ್ ಅವರ ಮನೆಯ ಬಾಣಸಿಗ; ಮಕ್ಕಳು ಯಜಮಾನರ ಮಕ್ಕಳು. ಹೀಗಾಗಿ ಪ್ರಯಾಣ ಹೊರಟಾಗಿನ ಸನ್ನಿವೇಶವೇ ಪುನಃ ಒದಗುತ್ತದೆ. ದೇಹಶ್ರಮದ ಆವಶ್ಯಕತೆ ಯಿದ್ದಾಗ ಕ್ರೈಟನ್ ನಾಯಕನಾಗುತ್ತಾನೆ; ಮಿಕ್ಕವರು ಅವನನ್ನು ನಂಬಿಕೊಂಡಿರಬೇಕು. ಆದರೆ ಈಗ ಅವನು ಒಬ್ಬ ಅಡುಗೆಯವನು, ಯಜಮಾನನ ಮರ್ಜಿ ಅನುಸರಿಸ ಬೇಕಾದವನು.

ಸಮಾಜವಾದಿ ನೈಟ್ ವರ್ಷದಲ್ಲಿ ಒಂದು ದಿನ ಸೇವಕರನ್ನು ಸಮಾನನಂತೆ ಕಾಣಬಹುದೇ ಹೊರತು, ಆ ಹಿಂದುಮುಂದಿನ ದಿನಗಳಲ್ಲಿ ಅವರಲ್ಲಿನ ಭೇದ ಮುಂದುವರಿಯುವಂತೆ, ದೀರ್ಘವೆನ್ನಿಸುವ ಕಾಲಾವಧಿಯಲ್ಲಿ ಆದುದೂ ಅದೇ. ಅಂದರೆ ಯಾವುದೋ ಒಂದು ಪರಿಸ್ಥಿತಿಯಲ್ಲಿ ಅದಕ್ಕೆ ಹೊಂದಿಕೊಳ್ಳಬಲ್ಲವನು ಮುಂದಾಳಾಗುತ್ತಾನೆ, ಮಿಕ್ಕವರು ಹಿಂಬಾಲಕರು. ಆದ್ದರಿಂದ ನಾಯಕತ್ವ ಎಂಬುದು ಪರಿಸ್ಥಿತಿಗೆ ಅನುಗುಣವಾದುದೇ ಹೊರತು ಮೂಲಭೂತವಾದುದಲ್ಲ ಹಾಗೂ ಸಾರ್ವತ್ರಿಕವಲ್ಲ ಎಂಬುದು ನಾಟಕಕಾರನ ನಂಬಿಕೆಯಿದ್ದಂತೆ ತೋರುತ್ತದೆ. ಇದು ನಿಜವಲ್ಲವೇ ಎಂದು ನನಗೆ ಎಷ್ಟೋ ವೇಳೆ ಅನ್ನಿಸುತ್ತದ. ಮನುಷ್ಯ ಪ್ರಜ್ಞಾವಂತನಾದ ಕ್ಷಣದಿಂದ ಅವನಲ್ಲಿ ಏನೆಲ್ಲ ಆದರ್ಶಗಳು ಮೂಡಿವೆ, "ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು" ಎಂಬ ಕನಸು ಸುಳಿದಿದೆ. ಆದರೆ ಅದು ಯಾಕೆ ಇನ್ನೂ ಸಾಕಾರವಾಗಿಲ್ಲ?

☆ – ☆ – ☆

# ನಾಯಕತ್ವದ ಮೂರು ಬಗೆಗಳು

ನಾನಿಲ್ಲಿ ಪ್ರಸ್ತಾಪಿಸುತ್ತಿರುವುದು ನಮ್ಮ ದೇಶದ ರಾಜಕೀಯ ನಾಯಕರುಗಳ ಬಗ್ಗೆ. ನಾಯಕನಾಗಲು ಕೆಲವು ವಿಶಿಷ್ಟ ಗುಣಗಳಿರಬೇಕೆಂದು ಹಲವಾರು ಮಂದಿ ಹಲವಾರು ಬಗೆಯಲ್ಲಿ ವಿಶ್ಲೇಷಿಸುತ್ತಾರೆ. ಅಲ್ಲದೆ ಪರಿಸ್ಥಿತಿಯೂ ನಾಯಕನನ್ನು ರೂಪಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುವುದೆಂದು ಹೇಳುವುದೂ ಉಂಟು. ಆದರೆ ಅಂತಹ ಆಳವೂ ವಿದ್ವತ್ಪೂರ್ಣವೂ ಆದ ಪ್ರಯತ್ನವನ್ನಿಲ್ಲಿ ನಾನು ಮಾಡುವುದಿಲ್ಲ. ನಮ್ಮ ದೇಶದ ನಾಯಕರುಗಳು ಹೊರನೋಟಕ್ಕೆ ನನಗೆ ಹೇಗೆ ಕಾಣಿಸುತ್ತಾರೆಂಬುದನ್ನು ಹೇಳಲು ಹೊರಟಿದ್ದೇನೆ.

ಹಿಂದೆ ಎಲ್ಲ ಕಡೆ ಇದ್ದಿರುವಂತೆಯೇ ನಮ್ಮ ದೇಶದಲ್ಲಿಯೂ ರಾಜತ್ವವು ಆನುವಂಶಿಕವಾಗಿ ಬರುತ್ತಿತ್ತು; ಕೆಲವೇಳೆ ಮಂತ್ರಿಪದವಿ ಕೂಡ. ಕೆಲವೇಳೆ ಸಾಮರ್ಥ್ಯದ ಕಾರಣದಿಂದ ಒಬ್ಬನನ್ನು ಓಡಿಸಿ ಮತ್ತೊಬ್ಬ ರಾಜನಾಗುತ್ತಿದ್ದುದು ಅಪರೂಪವೇನಲ್ಲ. ಬೇಗ ರಾಜನಾಗಿಬಿಡಬೇಕೆಂಬ ಅವಸರದಿಂದ ಕೆಲವರು ತಮ್ಮ ತಂದೆಯನ್ನೋ ಅಣ್ಣನನ್ನೋ ಕೊಂದು ಸಿಂಹಾಸನವನ್ನು ಆಕ್ರಮಿಸಿಕೊಂಡಿರುವ ಪ್ರಸಂಗಗಳು ಅಪರೂಪವೇನಲ್ಲ. ಆದರೆ ಈಗಿರುವುದು ಪ್ರಜಾಪ್ರಭುತ್ವ. ಜನರಿಂದ ಚುನಾಯಿತರಾಗಿ ನಾಯಕತ್ವವನ್ನು ಪಡೆಯಬೇಕಾದ ಪರಿಸ್ಥಿತಿ. ಆದರೂ ಪೂರ್ತಿಯಾಗಿ ಆನುವಂಶಿಕತೆ ಹೋಗಿದೆಯೇ? ಎಲ್ಲಿ ಹೋಗಿದೆ? ತಂದೆ ತನ್ನ ಮಗನನ್ನೋ ಮಗಳನ್ನೋ ತನ್ನ ಉತ್ತರಾಧಿಕಾರಿಯಾಗಿ ಜನರು ಆರಿಸುವ ರೀತಿಯಲ್ಲಿ ಭೂಮಿಕೆಯನ್ನು ಸಿದ್ಧಮಾಡಿದಂತಹ ಕಣ್ಣಿಗೆ ರಾಚುವ ನಿದರ್ಶನಗಳಿಲ್ಲವೇ? ಕೆಲವು ವಂಶಗಳು ಆಳುವುದಕ್ಕೇ ಇರುವಂತೆ ತೋರುತ್ತವೆ. ಆ ಕಾರಣಕ್ಕಾಗಿ ಒಂದು ವಂಶದ ಹೆಸರನ್ನು, ಅದರೊಡನೆ ಸಂಬಂಧವನ್ನು ಕಳೆದುಕೊಂಡರೂ, ತನ್ನ ವ್ಯಕ್ತಿ ಹೆಸರಿನೊಡನೆ ಉಳಿಸಿಕೊಳ್ಳುವ ಪ್ರಯತ್ನ ನಡೆದಿಲ್ಲವೇ? ಜನರ ಮನಸ್ಸನ್ನು ಅವರು ತಮ್ಮ ಹಿಡಿತಕ್ಕೆ ತೆಗೆದುಕೊಂಡು ತಮ್ಮ ವಂಶದವರನ್ನೇ ಚುನಾಯಿಸುವಂತೆ ಮಾಡುವ ಚಾಕಚಕ್ಯತೆ ಅವರದು.

ಇದರಲ್ಲಿ ಇನ್ನೊಂದು ಉಪಪ್ರಭೇದವಿದೆ. ಹಿರಿಯ ನಾಯಕ ಸತ್ತರೆ ಅವನ ಪರವಾದ ಜನಸಹಾನುಭೂತಿ ಉಕ್ಕಿ ಹರಿಯುವುದರಿಂದ ಅವನ ಮಗನ/ಳನ್ನು

ಅಥವಾ ಹೆಂಡತಿಯನ್ನು ಚುನಾವಣಣೆಯಲ್ಲಿ ನಿಲ್ಲಿಸಿ ಗೆಲ್ಲಿಸುವುದನ್ನು ಎಲ್ಲ ಪಕ್ಷಗಳೂ ಅನುಸರಿಸುತ್ತವೆ. ದುರಂತ ಮುಂತಾದವುಗಳಿಂದ ಸತ್ತರಂತೂ ಜನರ ಕಣ್ಣೀರು ಓಟಾಗಿ ಪ್ರವಾಹದಂತೆ ಹರಿಯುತ್ತದೆ. ಸತ್ತವನ ಸ್ಥಾನಕ್ಕೆ ಆದಷ್ಟು ಬೇಗನೇ ಆ ಮನೆಯ ಕಿರಿಯನನ್ನು ಅಥವಾ ಸತ್ತವನ ಹೆಂಡತಿಯನ್ನು ಗೆಲ್ಲಿಸಲು ತರಾತುರಿ ಯುಂಟಾಗುತ್ತದೆ. ಹೀಗಾಗಿ ನಾಯಕನ ಸಾವಿನಿಂದ ಅವನ ಮನೆಯವರಿಗೂ ಲಾಭ, ಪಕ್ಷಕ್ಕೂ ಲಾಭ. 'ಆನೆ ಇದ್ದರೂ ಸಾವಿರ, ಸತ್ತರೂ ಸಾವಿರ' ಎಂಬ ಗಾದೆ ಆನೆಗಿಂತ ಹೆಚ್ಚಾಗಿ ಇಂಥ ಪ್ರಸಂಗದಲ್ಲಿ ಹೆಚ್ಚು ಸೂಕ್ತವಾಗಿ ಅನ್ವಯಗೊಳ್ಳುತ್ತದೆ. ಆದ್ದರಿಂದ ಇಂಥ ನಾಯಕನ ಸಾವಿಗೆ ಸಂಬಂಧಿಸಿದವರು ಒಳಗೊಳಗೇ ಹಂಬಲಿಸಲೂ ಬಹುದೇನೋ! ನಮ್ಮ ಜನರು ಓಟು ಮಾಡುವುದು ಎರಡು ರೀತಿಯಲ್ಲಿ ಎಂದು ಕಾಣುತ್ತದೆ: ಆಡಳಿತ ವಿರೋಧಿ ಓಟು ಮತ್ತು ದುಃಖದ ಓಟು. ಜನಪ್ರಿಯತೆ ಕಳೆದುಕೊಂಡ ಒಂದು ಪಕ್ಷ ಮತ್ತೆ ಬೇಗ ಚೇತರಿಸಿಕೊಳ್ಳಬೇಕಾದರೆ ಅದರ ಮುಖ್ಯ ನಾಯಕ ಸತ್ತರೆ ಸಾಕು, ಪಕ್ಷ ಬೇರೆ ಸಾಧನೆ ಮಾಡಬೇಕಿಲ್ಲ! ಹೀಗೆ ಹುಟ್ಟಿನ ಆಧಾರದ ಮೇಲೆ ರೂಪುಗೊಳ್ಳುವ ಈ ಎರಡೂ ಪ್ರಭೇದಗಳ ನಾಯಕರನ್ನು 'ಹುಟ್ಟುನಾಯಕ'ರೆಂದೇ ಕರೆಯಬಹುದೇನೋ.

ಎರಡನೆಯ ಗುಂಪಿನವರು ಬೇರೊಂದು ಸ್ವಭಾವದವರು. ಇವರು ಸದಾ ನಾಯಕರಾಗಿಯೇ ಇರಬೇಕು; ಅಥವಾ ಇವರನ್ನು ಅತ್ಯುನ್ನತ ಸ್ಥಾನದಲ್ಲಿಯೇ ಮುಂದುವರೆಸಬೇಕು, ಇಲ್ಲದಿದ್ದರೆ ಅವರು ಅಲ್ಲಿರುವುದೇ ಇಲ್ಲ. ಮೇಲಿರದಿದ್ದರೆ ಅಲ್ಲಿ ಯಾಕಾದರೂ ಇರಬೇಕು ಎಂಬ ನೀತಿಯವರಿವರು. ಯಾವುದೋ ಪರಿಗಣನೆಯಿಂದ ಒಮ್ಮೆ ಮೇಲೆ ಬಂದರೆ ಅಲ್ಲಿಂದ ಕದಲಲು ಇವರಿಗೆ ಮನಸ್ಸು ಬಾರದು. ಹಾಗಾಗಿ ತಮ್ಮ ಸ್ಥಾನಚ್ಯುತಿಯ ಕಾಲ ಬಂದರೆ ಒಳಗೊಳಗೇ ಹೊಸ ಮುಖಂಡನ ವಿರುದ್ಧ ಪಿತೂರಿ ಮಾಡುತ್ತಾರೆ; ಗುಂಪು ಕಟ್ಟುತ್ತಾರೆ. ಇದನ್ನೇ ನಮ್ಮಲ್ಲಿ ಬಂಡಾಯ ಎನ್ನುವುದು. ಕೆಲವರು ಜಾಗವನ್ನೇ ಬದಲಿಸುತ್ತಾರೆ. ಆ ಪಕ್ಷವನ್ನೇ ಬಿಟ್ಟು ಹೊರ ಬಂದು; ತಮ್ಮದೇ ಪಕ್ಷವನ್ನೂ ಕಟ್ಟಬಹುದು. ಅಲ್ಲಿಯವರೆಗೂ ಯಾರನ್ನು ಹೊಗಳುತ್ತಿರುತ್ತಾರೋ ಅವರನ್ನೇ ಬೈಯುವುದು ಇವರ ಮುಂದಿನ ಕೆಲಸವಾಗುತ್ತದೆ. ಅಲ್ಲದೆ ತನ್ನ ಹಿಂದಿನ ಪಕ್ಷದ ತತ್ವಗಳಲ್ಲಿ ಕೊರತೆ ಕಂಡು ಮೌಲ್ಯಾಧಾರಿತ ರಾಜಕಾರಣಕ್ಕಾಗಿ ಹೊಸ ಪಕ್ಷ ಕಟ್ಟಿರುತ್ತಾರೆ. ದುರದೃಷ್ಟವಶಾತ್ ಸ್ವತಂತ್ರವಾಗಿ ಏನನ್ನೂ ಸಾಧನೆ ಮಾಡಲು ಸಾಧ್ಯವಾಗದಾದಾಗ ಮತ್ತೆ ಹಳೆಯ ಪಕ್ಷದ ತತ್ವಗಳಲ್ಲಿಯೇ ಇವರಿಗೆ ನಂಬಿಕೆ ಮರುಕಳಿಸಿ ಅದೇ ಪಕ್ಷಕ್ಕೆ ವಾಪಸಾಗುತ್ತಾರೆ. 'ಇಲ್ಲಿರಲಾರೆ, ಅಲ್ಲಿಗೆ ಹೋಗ ಲಾರೆ' ಎಂಬ ಹಪಹಪಿಕೆ ಇವರದು. ಹನ್ನೆರಡನೇ ಶತಮಾನದಲ್ಲಿ ಬ್ರಹ್ಮಶಿವ ಎಂಬ ಒಬ್ಬ ಕನ್ನಡದ 'ಕವಿ'ಯಿದ್ದ. ಅವನು ಜೈನ; ಅದರಲ್ಲಿ ಸಮಾಧಾನ ಸಿಕ್ಕದೆ ಶೈವನಾದ; ಅಲ್ಲಿಯೂ ಶಾಂತಿ ಸಿಕ್ಕದೆ ಮತ್ತೆ ಜೈನಕ್ಕೆ ಮರಳಿದ. ಎಲ್ಲಿದ್ದರೂ ಅಶಾಂತಿ ಇಂಥವರ ಮನಃಸ್ಥಿತಿ. ಹಾಗಾಗಿ ಇಂಥವರನ್ನು 'ಅಶಾಂತ ನಾಯಕ' ಎನ್ನಬಹುದೇನೋ.

ಮೂರನೆಯ ಗುಂಪಿನ ನಾಯಕರು ಎಂಥ ಕಾಲದಲ್ಲೂ ಬೇರೊಬ್ಬರ ನಾಯಕತ್ವವನ್ನು ಅನುಸರಿಸಲಾಗದವರು; ಎಂದೆಂದೂ ತಾವೇ ನಾಯಕರು. ಇಂಥವರು ಯಾರೂ ಮಾಡದೆಯೇ ತಾವಾಗಿ ನಾಯಕರಾದವರು; ಸ್ವಯಂ ಘೋಷಿತ ನಾಯಕರು. ಅವರಿಗೆ ಎಷ್ಟು ಮಂದಿ ಹಿಂಬಾಲಕರಿದ್ದಾರೆ ಎಂಬುದು ಮುಖ್ಯವಲ್ಲ; ಯಾವ ಸ್ಥಾನವನ್ನು ಪಡೆಯಬೇಕು ಎಂಬುದೂ ಅಲ್ಲ. ಆದರೆ ಎಂದೆಂದಿಗೂ ತಾವೇ ನಾಯಕರಾಗಿರಬೇಕು. ಇನ್ನೊಬ್ಬರ ನಾಯಕತ್ವವನ್ನು ಒಪ್ಪಿ ದೊಡ್ಡ ಹುದ್ದೆ ಪಡೆಯುವುದಕ್ಕಿಂತ ಹುದ್ದೆಯಿಲ್ಲದೆಯೆ ತಾನು ಸದಾಕಾಲವೂ ನಾಯಕನಾಗಿ ಮುಂದುವರಿಯುವುದು ಮುಖ್ಯ. ಹೀಗಾಗಿ ಇವರು ಕೆಲವೊಮ್ಮೆ ಲಾಭದಿಂದ ವಂಚಿತರೂ ಆಗಬೇಕಾಗಬಹುದು. ಆದರೆ ಒಂದು ಜಾಗದ ಅಥವಾ ಗುಂಪಿನ ಮೇಲೆ ತಕ್ಕಮಟ್ಟಿಗಿನ ಹಿಡಿತವನ್ನು ಸಾಧಿಸಿರುವುದರಿಂದ ಇವರನ್ನು ಇತರರು ಕಡೆಗಣಿಸಲು ಆಗುವುದಿಲ್ಲ. ಒಂದು ಓಟಿನಲ್ಲಿ ಕೆಲಸ ಆಗುವುದಾದರೆ, ಅಥವಾ ಒಂದು ಓಟಿಗೂ ಬೆಲೆ ಇರುವ ಸನ್ನಿವೇಶವಾದರೆ ಇವರನ್ನು ಬೇರೆಯ ಹಿರಿಹುದ್ದೆಯವರೂ ಅನುಸರಿಸಬೇಕು. ಸೊನ್ನೆಗೆ ಹೇಗೆ ಮತ್ತೊಂದು ಸಂಖ್ಯೆಯ ಮುಂದೆ ಬೆಲೆ ಬರುವುದೋ ಹಾಗೆ ಸಂದಿಗ್ಧ ಸಂದರ್ಭದಲ್ಲಿ ಇವರಿಗೆ ಮಾನ್ಯತೆ ಬಂದು ಬಿಡುತ್ತದೆ. ಹೀಗಾಗಿ ಇತರರು ಇವರನ್ನು ನಾಜೂಕಿನಿಂದ ಕಾಣುತ್ತಾರೆ. ಇಂಥವರದನ್ನು ರಾಜಿಯಾಗದ ಮನೋಭಾವವೆಂದು ವರ್ಣಿಸಬೇಕೋ ಶಠತ್ವವೆಂದು ಕರೆಯಬೇಕೋ ತಿಳಿಯದು. ಆದರೆ ಇವರು ಬಹಳ ಜನಕ್ಕೆ ಬೇಡದಿದ್ದರೂ ಎಲ್ಲರಿಗೂ ಬೇಕಾದವರು, ಯಾರ ಹಿಡಿತಕ್ಕೂ ಸಿಕ್ಕದವರು. ಇವರು 'ಸರ್ವ ತಂತ್ರಸ್ವತಂತ್ರ ನಾಯಕರು'.

ಈ ಮೂರು ವರ್ಗವಲ್ಲದೆ ಬೇರೆ ತರಹದವರೂ ಇರಬಹುದು. ಅಲ್ಲದೆ ನಾಯಕಸಮುದಾಯವನ್ನು ನಾನಾ ರೀತಿಯಲ್ಲಿ ವರ್ಗೀಕರಿಸಿ ವಿಶ್ಲೇಷಿಸಬಹುದು. ಪ್ರಜಾಪ್ರಭುತ್ವ ಪದ್ಧತಿ ನಮ್ಮಲ್ಲಿದ್ದರೇನು, ನಾಯಕರು ಜನರ ನಡುವಿನಿಂದ ಮೂಡುವುದು ಕಷ್ಟವೆಂದು ಕಾಣುತ್ತದೆ. ಹಾಗೆ ನಿರ್ಮಿತಿಗೊಳ್ಳುವವರು ಅಪರೂಪ. ಯಾವುದೋ ಕಾರಣ-ಸನ್ನಿವೇಶಗಳಲ್ಲಿ ಮುಂದಾಳಾದರೆ, ಅದನ್ನು ಮುಂದು ವರೆಸಿಕೊಳ್ಳುವ ಪ್ರಯತ್ನ ಸಾಗಿರುತ್ತದೆ. ಒಳ್ಳೆ ಶಿಕ್ಷಣ ಸಿಕ್ಕುವುದು ಬಡವರಿಗೆ ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಈ ಪಾವನ ಭೂಮಿಯಲ್ಲಿ ಬಡವ ಮುಂದಾಳಾಗಲಾರ. ಯಾಕಂದರೆ, ಅವನಿಗೆ ಮಾತು ಬಾರದು; ಆದರೆ ಹಣ ಇರುವವನಿಗಾದರೆ ಮಾತು ಬಾರದಿದ್ದರೂ, ಜೇಬು ಅವನ ಪರವಾಗಿ ಉಲಿಯುತ್ತದೆ. ಅದರದಕ್ಕಿಂತ ಇಂಪಾದ ಧ್ವನಿ ಎಲ್ಲಿದೆ?

☆ - ☆ - ☆

# ಸಾವ ಗೆಲ್ಲುವ ತವಕ

ಹುಟ್ಟಿದ ಮೇಲೆ ಸಾವು ಅನಿವಾರ್ಯ ಮತ್ತು ನಿಶ್ಚಿತ ಎಂಬುದು ಎಲ್ಲರಿಗೂ ಗೊತ್ತಿದೆ. ಆದರೆ ಸಾವು ಎಂದರೇನೆಂದು ಮಾತ್ರ ಯಾರೂ ಹೇಳಲಾರರು; ಯಾಕೆಂದರೆ ಅದನ್ನು ಕಂಡವರು(?) ಅದು ಹೇಗಿದೆ ಎಂದು ಹೇಳಲು ಇರುವುದಿಲ್ಲ; ಇರುವವರು ಅದನ್ನು ಕಾಣಲಾಗುವುದಿಲ್ಲ. ಹೀಗಾಗಿ ಅದರ ಬಗ್ಗೆ ಎಲ್ಲರಿಗೂ ಕೌತುಕ, ಭಯ. ಹುಟ್ಟಿನಂತೆಯೇ ಅದೂ ಒಂದು ಅನುಭವ ಎಂಬುವವರಿದ್ದಾರೆ. ಎಲ್ಲರೂ ಹುಟ್ಟಿರುತ್ತಾರೆ; ಆದರೆ ಅದರ ಅನುಭವ ಮರೆತುಹೋಗಿರುತ್ತದೆ. ಸಾವು ಎಲ್ಲರಿಗೂ ಒದಗುತ್ತದೆ; ಆದರೆ ಅದು ಅನುಭವಕ್ಕೇ ಬರದೇನೋ! ಆ ಕಾರಣದಿಂದಲೇ ಭಯ. ಅಪರಿಚಿತವಾದದ್ದರ ಬಗ್ಗೆ ತಾನೇ ಭಯ. ಅದು ಆತ್ಯಂತಿಕ ಭಯ; ಅದರ ನೆರಳಲ್ಲೇ ಬದುಕಿನ ಸಮಸ್ತ ಭಯವೈವಿಧ್ಯವೂ ಸುಳಿದಾಡುವುದು.

ಸಾವಿನ ಬಗ್ಗೆ ಭಯವಿರುವುದರಿಂದಲೇ ಅದನ್ನು ಗೆಲ್ಲುವ ತವಕ; ಅದೆಲ್ಲಿ ನಮ್ಮನ್ನು ಗೆದ್ದುಬಿಡುವುದೋ ಎಂಬ ಭಯ. ನಮಗೆ ಭಯ ಇರುವುದು ನಮಗಿಂತ ಹೆಚ್ಚು ಬಲಿಷ್ಠರಾದವರ ಬಗ್ಗೆ ತಾನೇ? ಅದಕ್ಕಿಂತ ನಾವೇ ಹೆಚ್ಚು ಬಲಿಷ್ಠರಾಗಿಬಿಟ್ಟರೆ ಅದರ ಭಯ ಇರುವುದಿಲ್ಲ. ಗೆಲ್ಲುವುದೆಂದರೆ ಅದರ ಬಗೆಗಿನ ಭಯವನ್ನು ಹೋಗಲಾಡಿಸಿಕೊಳ್ಳುವುದು ಎಂದೇ ತಾನೇ? ಆದರೆ ಸಮಸ್ಯೆ ಇರುವುದು ಅದಕ್ಕಿಂತ ನಾವು ಹೆಚ್ಚು ಬಲಿಷ್ಠರಾಗುವುದು ಹೇಗೆ ಎಂಬುದರಲ್ಲಿ. ಅಲ್ಲದೆ ಸಾವು ಎಂದರೆ ಏನು ಎಂದೇ ಗೊತ್ತಿಲ್ಲದ ನಮಗೆ ಅದು ಎಷ್ಟು ಬಲಿಷ್ಠ ಎಂಬುದೂ ತಿಳಿಯದು; ಆದ್ದರಿಂದ ಅದಕ್ಕಿಂತ ಹೆಚ್ಚು ಬಲವನ್ನು ಪಡೆಯುವುದು ಅಂದರೆ ಎಷ್ಟು ಮತ್ತು ಎಂತಹ ಬಲ ಎಂಬುದೂ ಗೊತ್ತಾಗಲು ಸಾಧ್ಯವಿಲ್ಲ. ಅದು ನಮ್ಮನ್ನು ಆವರಿಸಿದರೂ ಅದಕ್ಕಿಂತ ಬಲಿಷ್ಠ ಶಕ್ತಿಯ ಬೆಂಬಲ ಇದ್ದರೆ ಸಾವನ್ನು ಗೆದ್ದಂತೆ ಎಂದು ಭಾವಿಸಿದ ಮಾನವ ಪ್ರಾಯಶಃ ದೇವರನ್ನು ಸೃಷ್ಟಿಸಿರಬೇಕು. ದೇವರು ಸಾವನ್ನೂ ಸೃಷ್ಟಿಸಿದವನು, ಅದನ್ನೂ ನಿರ್ಮೂಲ ಮಾಡಬಲ್ಲವನು ಎಂಬ ಕಲ್ಪನೆ ಬೆಳೆದಿರಬೇಕು. ಶಿವ ಯಮನನ್ನು ಕೊಂದನಂತಲ್ಲ, ನಮ್ಮ ಪುರಾಣಗಳ ಪ್ರಕಾರ. ಅದೂ ತನ್ನ ಭಕ್ತನಾದ ಮಾರ್ಕಂಡೇಯನನ್ನು ರಕ್ಷಿಸಲು. ಅಂದರೆ ದೇವರು ನಮ್ಮನ್ನು ಸಾವಿನಿಂದ ಪಾರುಮಾಡುತ್ತಾನೆ ಎಂದಂತಾಯಿತು. ಆದರೆ ಶಿವ ಮಾರ್ಕಂಡೇಯನ ಅಕಾಲ ಮರಣವನ್ನಷ್ಟೇ ತಪ್ಪಿಸಿದ್ದು, ಪೂರ್ತಿ ಸಾವಿನಿಂದಲ್ಲ. ಅಂದರೆ ಭಕ್ತರ ದೃಷ್ಟಿಯಲ್ಲೂ

ಸಾವನ್ನು ಮುಂದೂಡಬಹುದೇ ಹೊರತು ಅದರಿಂದ ಪೂರ್ತಿ ನಿವಾರಣೆ ಹೊಂದುವಂತಿಲ್ಲ.

ಇದು ಒಂದು ನೆಲೆಯಾಯಿತು. ಮತ್ತೊಂದು ನೆಲೆ ಎಂದರೆ ಸಾವಿನ ಕಾರಣ ದಿಂದ ಈ ಬದುಕು ಅಲ್ಪಕಾಲದ್ದಾಗಿಬಿಡುತ್ತದೆ; ಆ ಅಲ್ಪಕಾಲಿಕತೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಇರಬಹುದೇ ಹೊರತು ಬದುಕನ್ನು ಸರ್ವಕಾಲದ್ದಾಗಿ ಮಾಡುವುದೂ ಸಾಧ್ಯವಿಲ್ಲ; ಬಹಳ ವ್ಯತ್ಯಾಸ ಇರುವಂತೆಯೂ ಮಾಡಲಾಗುವುದಿಲ್ಲ. ಆದ್ದರಿಂದ ಬದುಕು ನಶ್ವರ; ಅದರ ನಶ್ವರತೆಯನ್ನು ಹೋಗಲಾಡಿಸಿಕೊಳ್ಳುವುದು ಅದಕ್ಕಿಂತ ದೀರ್ಘವಾದ ಇರವನ್ನು ಕಂಡುಕೊಳ್ಳುವುದರ ಮೂಲಕ; ಅಥವಾ ಶಾಶ್ವತ ವಾದುದನ್ನು ಅನ್ವೇಷಿಸುವುದರ ಮುಖಾಂತರ. ಬದುಕಿನ ನಶ್ವರತೆಗಿಂತ ಭಿನ್ನವಾದ ಅಥವಾ ಅಂತಹ ನಶ್ವರತೆಯನ್ನು ಹೊಂದಿರದ ಎರಡು ನೆಲೆಗಳು ಮಾನವ ಕಲ್ಪನೆಗೆ ಕಾಣಿಸಿಕೊಂಡವು; ಬದುಕಿಗೆ ಹೋಲಿಸಿದರೆ ತುಂಬ ತುಂಬ ದೀರ್ಘವಾದುದು ಒಂದಾದರೆ; ಎಂದೂ ಕೊನೆಯೇ ಇರದ ಸ್ಥಿತಿ ಇನ್ನೊಂದು. ಇವುಗಳಲ್ಲಿ ಮೊದಲನೆಯದು ಸಾವಿನನಂತರ ಸ್ವರ್ಗ ಮುಂತಾದವುಗಳಲ್ಲಿನ ಇರುವಿಕೆ; ಎರಡನೆಯದು ಮೋಕ್ಷಸ್ಥಿತಿ. ಆದರೆ ಸ್ವರ್ಗವನ್ನು ಕಂಡವರೂ ನಮ್ಮೆದುರಿಗಿಲ್ಲ, ಮೋಕ್ಷವನ್ನು ಹೊಂದಿದವರೂ ಇಲ್ಲ. ಇವುಗಳನ್ನು ಪಡೆಯುವುದಾದರೂ ಹೇಗೆ ಎಂಬುದೂ ಪ್ರಶ್ನೆ. ಅದಕ್ಕೇ ಪುಣ್ಯಪಾಪಗಳ ಕಲ್ಪನೆ ಒದಗಿ ಬಂದು ಪುಣ್ಯವಂತ ಸ್ವರ್ಗ ಪಡೆಯುತ್ತಾನೆ; ಆದರೆ ಅದರ ಪ್ರಮಾಣಕ್ಕನುಗುಣವಾಗಿ ಅಲ್ಲಿ ನೆಲಸಿ ಮತ್ತೆ ಹುಟ್ಟುತ್ತಾನೆ; ಆದರೆ ಅಸೀಮ ಪುಣ್ಯ ಮಾಡಿದವನು ಶಾಶ್ವತವಾದ ಮೋಕ್ಷಸುಖ ಪಡೆಯುತ್ತಾನೆ ಎಂಬ ನೆಲೆಗೆ ಬಂದು ಮುಟ್ಟುವಂತಾಯಿತು.

ಆದರೆ ಪುಣ್ಯ–ಪಾಪ ಎಂದರೇನೆಂಬುದೂ ವಿವಾದಾಸ್ಪದವೇ. ಅವುಗಳ ಸ್ವರೂಪ ಕಾಲಕಾಲಕ್ಕೆ ದೇಶದೇಶಕ್ಕೆ ಮತಮತಕ್ಕೆ ವ್ಯತ್ಯಾಸವಾಗುತ್ತವೆ. ಅಷ್ಟೇಕೆ ಒಂದೇ ಮತದಲ್ಲಿಯೂ ವ್ಯತ್ಯಸ್ತ ಕಲ್ಪನೆಗಳಿವೆ. ಮಾಂಸ ತಿನ್ನದವರಿಗೆ ಪ್ರಾಣಿಹಿಂಸೆ ಮಹಾಪಾಪ; ಆದರೆ ಬೇಡನಿಗೆ ಅದೇ ಬದುಕು. ಬದುಕಿನಲ್ಲಿ ಯಾವುದೂ ಕೇವಲ (absolute) ಎಂಬುವುದಿಲ್ಲ, ಎಲ್ಲ ಸಾಪೇಕ್ಷವೇ. ಆದರೆ ಸಾಮಾನ್ಯ ಭಾವುಕರು ಇದನ್ನೆಲ್ಲ ಆಲೋಚಿಸ ಹೋಗುವುದಿಲ್ಲ; ತಮಗಿಂತ ಬುದ್ಧವಂತರೆನ್ನಿಸಿಕೊಂಡವರು ಹೇಳಿದ್ದು ಅವರಿಗೆ ಸತ್ಯ. ಅವರೆಂದರೆ ಧಾರ್ಮಿಕ ನಾಯಕರು, ತಮಗೆ ಸರಿದಾರಿ ತೋರಿಸುವ ಮಾರ್ಗದರ್ಶಕರು. ಅವರು ನಿಗದಿಪಡಿಸಿದ್ದೇ ಮಾರ್ಗ ಎಂಬಂತಾಯಿತು. ಆದರೆ ಇರುವುದು ಎಷ್ಟೊಂದು ಮಾರ್ಗಗಳು! ಯಾವುದು ಸರಿಯಾದ ಮಾರ್ಗ? ಎಲ್ಲ ಮತಧರ್ಮಗಳೂ ತಮ್ಮದೇ ಸರಿದಾರಿ ಎಂದು ಹೇಳುತ್ತವೆ; ತಮ್ಮ ಮತಾನುಯಾಯಿಗಳಿಗೆ ಮಾತ್ರ ಮೋಕ್ಷ, ಅಂದರೆ ಸಾವನ್ನು ಗೆಲ್ಲುವ ಶಕ್ತಿ ಎನ್ನುತ್ತವೆ. ಎಷ್ಟೋ ವೇಳೆ ಅವುಗಳು ಅನುಸರಿಸ ಹೇಳುವ ಮಾರ್ಗ ಗಳು ಪರಸ್ಪರ ವಿರುದ್ಧವೇ ಆಗಿರಬಹುದು!

ಕೆಲವೇಳೆ ಬದುಕಿನ ನಶ್ವರತೆಯನ್ನು ಹೋಗಲಾಡಿಸಿಕೊಳ್ಳಲು, ಅಂದರೆ ಅದಕ್ಕಿಂತ ತುಂಬ ದೀರ್ಘವೋ ಅಥವಾ ಶಾಶ್ವತವೋ ಆದ ಸ್ಥಿತಿಯನ್ನು ಹೊಂದಲು ಬದುಕಿನ ಅಲ್ಪಕಾಲಿಕತೆಯನ್ನು ಮತ್ತಷ್ಟು ಕಿರಿದುಗೊಳಿಸಿಕೊಳ್ಳುವ ಕಲ್ಪನೆಗಳೂ ಇವೆ. ಸಾವನ್ನು ಗೆಲ್ಲುವ ಗುರಿಯಿಂದಲೇ ಸಾವಿಗೆ ಒಳಗಾಗುವುದು! ಹಿಂದೆ ಕರ್ನಾಟಕದಲ್ಲಿ ವೇಳೆವಾಳಿ ಪದ್ಧತಿ ಇತ್ತು: ಯಾರನ್ನೋ ತನ್ನ ಒಡೆಯನೆಂದು ಒಪ್ಪಿಕೊಂಡು ಅವನಿರುವ ತನಕ ತಾನೂ ಬದುಕಿದ್ದು ಅವನು ಸತ್ತ ತಕ್ಷಣ ತಾನೂ ಸಾಯುವ ಸಂಕಲ್ಪ ಅದು. ಸತ್ತ ವೀರನೊಡನೆ ಸತಿ ಹೋಗುವ ಪದ್ಧತಿಯೂ ಇತ್ತಲ್ಲ. ಅಂದರೆ ದೊಡ್ಡ ಗುರಿಸಾಧನೆಗಾಗಿ ಸಾಯುವುದು ಸಾವನ್ನು ಗೆಲ್ಲುವ ಒಂದು ರೀತಿ ಎನಿಸಿಕೊಂಡಿತು. ನಮ್ಮಲ್ಲಿ ಸಾವಿರಾರು ವೀರಗಲ್ಲುಗಳು ಸಿಕ್ಕಿವೆ; ಅವೆಲ್ಲ ಹೀಗೆ ನಾನಾ ಆದರ್ಶಗಳಿಗಾಗಿ ಸತ್ತ ವೀರರ ಸ್ಮಾರಕಶಿಲೆಗಳು.

ಹೀಗೆ ತನ್ನ ಸಾವನ್ನು ತಾನೇ ತಂದುಕೊಳ್ಳುವ ದೃಢತೆಯನ್ನು ಪಡೆಯಬಲ್ಲ ವ್ಯಕ್ತಿಗೆ ಸಾವಿನ ಬಗ್ಗೆ ಭಯ ಹೋಗಬಹುದು. ಈ ಮನಸ್ಥಿತಿಯನ್ನು ಸ್ವಾರ್ಥಕ್ಕೆ ಬಳಸಿಕೊಳ್ಳುವುದೂ ನಡೆಯಿತು. ಯುದ್ಧದಲ್ಲಿ ಮಡಿದರೆ ವೀರಸ್ವರ್ಗ ಸಿಗುತ್ತದೆ ಅಲ್ಲವೇ? ಇಂತಹ ವೀರಸ್ವರ್ಗ ಹೇಗಿರುತ್ತದೆ? ಅದರ ಬಗ್ಗೆ ರಂಜಕ ಕಲ್ಪನೆಗಳು. ಯುದ್ಧ ಎಂಬುದು ಒಮ್ಮೆಗೇ ಬಹುಜನರ ಸಾವಿಗೆ ಕಾರಣವಾಗುವ ಸನ್ನಿವೇಶ. ಪಂಪ ವರ್ಣಿಸಿದ ಹಾಗೆ ರಾಜ್ಯಾಧಿಕಾರ ಭಟರ ಖಡ್ಗಗಳೆಂಬ ಉತ್ಪಲವನದಲ್ಲಿ ಹಾರಾಡುವ ದುಂಬಿ. ಅದಕ್ಕೆ ಯೋಧರು ಬೇಕು; ಅವರು ಯುವಕರೇ ಆಗಿರಬೇಕಲ್ಲ. ಹಾಗಾಗಿ ಅವರನ್ನು ಸಾವನ್ನು ಬರಮಾಡಿಕೊಳ್ಳುವ ಮನಸ್ಥಿತಿಗೆ ಸಿದ್ಧಪಡಿಸಲು ನಂಬಿಕೆಯನ್ನು ಬಳಸಿಕೊಳ್ಳಲಾಯಿತು. ವೀರಗಲ್ಲುಗಳ ಮೊದಲಲ್ಲಿ ಸಾಮಾನ್ಯವಾಗಿ ಕಾಣುವ ಒಂದು ಶ್ಲೋಕ ಹೀಗಿರುತ್ತದೆ: "ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ; ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ" (ಯುದ್ಧದಲ್ಲಿ ಗೆದ್ದರೆ ಜಯಲಕ್ಷ್ಮಿ; ಸತ್ತರೆ ಸುರಾಂಗನೆಯರು – ರಂಭೆ, ಊರ್ವಶಿ, ಮೇನಕೆ, ತಿಲೋತ್ತಮೆ – ಸಿಗುತ್ತಾರೆ. ಆದ್ದರಿಂದ ಸಾಯುವುದಕ್ಕಾಗಲೀ ಯುದ್ಧದಲ್ಲಿ ಮರಣಿಸುವುದಕ್ಕಾಗಲೀ ಯಾಕೆ ಚಿಂತಿಸಬೇಕು?) ಕಾಲ ಸ್ವಲ್ಪ ಬದಲಾಗಿದೆ; ಈಗ ದೇಶಕ್ಕಾಗಿ ಸತ್ತರೆ ವೀರಮರಣ.

ಸಾಯುವುದು ನಿಶ್ಚಿತ; ಸಾವಿನ ಭಯ ಎಲ್ಲರಿಗೂ ಇದೆ. ಭಯಪಟ್ಟರೂ ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದು. ಸಾವು ಎಂಬುದು ಅತ್ಯಂತ ಸಾರ್ವತ್ರಿಕ ವಿಷಯ; ಯಮನನ್ನು ನಮ್ಮಲ್ಲಿ 'ಸಮದರ್ಶಿ' ಎಂದೇ ಕರೆಯುತ್ತಾರೆ; ಇಂಗ್ಲಿಷಿನಲ್ಲಿ "death the leveller" ಎನ್ನುತ್ತಾರೆ. ಇಂತಹುದರ ಬಗ್ಗೆ ಯಾರು ಯಾರೋ ಹೇಳುವುದನ್ನು ಕೇಳಿ ಗಲಿಬಿಲಿಗೊಳ್ಳುವುದಕ್ಕಿಂತ ಅದು ಪ್ರಕೃತಿಸಹಜ ಮತ್ತು ಅನಿವಾರ್ಯ ಎಂಬ ಪ್ರಜ್ಞೆಯನ್ನಷ್ಟೇ ಹೊಂದುವುದು ಲೇಸಲ್ಲವೇ?

☆ – ☆ – ☆

# ಕನ್ನಡ ಅನಕ್ಷರಸ್ಥ ಸಚಿವ

ತೀರ ಸಣ್ಣಪುಟ್ಟ ನೌಕರಿ ಮಾಡಲೂ ಕನಿಷ್ಠ ಅರ್ಹತೆಗಳನ್ನು ಕೇಳುತ್ತಾರೆ. ತನ್ನ ಕಾರ್ಯನಿರ್ವಹಣೆಯಲ್ಲಿ ಬಳಕೆಗೊಳ್ಳುವ ಸಂಕೇತಗಳನ್ನು ಗುರುತಿಸುವ ಶಕ್ತಿಯನ್ನು ನಿರೀಕ್ಷಿಸುತ್ತಾರೆ. ಆದರೆ ಮಂತ್ರಿಯಾಗಲು ಮಾತ್ರ ಯಾವುದೇ ಬಗೆಯ ಅರ್ಹತೆಗಳನ್ನು ನಿರೀಕ್ಷಿಸುವುದಿಲ್ಲ ಎಂಬುದು ಬಹು ಹಿಂದಿನ ಮಾತು. ಅಂದರೆ ಮಂತ್ರಿಗಳು ಮತ್ತಿತರ ರಾಜಕಾರಣಿಗಳಿಂದ ಯಾವುದೇ ನಿರ್ದಿಷ್ಟ ಕರ್ತವ್ಯವನ್ನು ನಿರೀಕ್ಷಿಸಲಾಗುವುದಿಲ್ಲ ಎಂಬುದು ಇದರ ಅರ್ಥವೇ?

ಮೊನ್ನೆ ಝಮೀರ್ ಅಹಮದ್ ಎಂಬುವವರು ಕರ್ನಾಟಕದ ಮಂತ್ರಿಯಾಗಿ ಇಂಗ್ಲಿಷಿನಲ್ಲಿ ಪ್ರಮಾಣವಚನ ಸ್ವೀಕರಿಸಿದರು. ಇದು ವಿಧಾನಸಭೆಯ ಸದನಗಳಲ್ಲಿ ಕೆಲವು ಸದಸ್ಯರ ಆಕ್ಷೇಪಣೆ-ಆಕ್ರೋಶಗಳಿಗೆ ಕಾರಣವಾಯಿತು. ಆ ಮಂತ್ರಿ ಅತ್ಯಂತ ದೈನ್ಯದಿಂದ ಕ್ಷಮೆ ಯಾಚನೆ ಮಾಡಿದರು. ತಾನು ಡಾಕ್ಟರೋ ಇಂಜಿನಿಯರೋ ಆಗಬೇಕೆಂದು ತನ್ನ ತಾಯಿತಂದೆಯರು ತನ್ನನ್ನು ಕಾನ್ವೆಂಟಿನಲ್ಲಿ ಓದಿಸಿದರು ಅದಕ್ಕೇ ತನಗೆ ಕನ್ನಡ ಬಾರದು, ಇನ್ನು ಒಂದು ವರ್ಷದಲ್ಲಿ ಕನ್ನಡವನ್ನು ಓದಲು ಬರೆಯಲು ಕಲಿಯುತ್ತೇನೆ ಎಂದು ವಿಧಾನಸಭೆಯಲ್ಲಿ ಆತ ಹೇಳಿದ ಮಾತು ನಿನ್ನೆ ಪತ್ರಿಕೆಯಲ್ಲಿ ವರದಿಯಾಗಿದೆ. ಕಾನ್ವೆಂಟಿನ ಇಂಗ್ಲಿಷಿನಲ್ಲಿ ಓದಿದರೆ ಮಾತ್ರ ಡಾಕ್ಟರು ಅಥವಾ ಇಂಜಿನಿಯರಾಗಲು ಸಾಧ್ಯ ಎಂಬ ಅವರ ತಾಯ್ತಂದೆಯರ ನಂಬಿಕೆ ಈ ಸಚಿವರಿಗೂ ಇದ್ದರೆ ಇಂತಹವರಿಂದ ಯಾವ ಶಿಕ್ಷಣನೀತಿಯನ್ನು ನಾವು ನಿರೀಕ್ಷಿಸ ಬಹುದು? ಇಂತವರು ಸಚಿವಸಂಪುಟದಲ್ಲಿ ತುಂಬಿಬಿಟ್ಟು ಇದೇ ಅಭಿಪ್ರಾಯಕ್ಕೆ ಬಹುಮತ ದೊರೆತರೆ ಕನ್ನಡದ ಗತಿ ಏನು ಎಂಬ ಯೋಚನೆ ಬರುತ್ತದೆ.

ಅಲ್ಲದೆ, ಕನ್ನಡವನ್ನು ಬರಿ ಓದಲು ಬರೆಯಲು ಕಲಿತುಬಿಟ್ಟರೆ ಸಾಕು ಎಂದು ಆ ಸಚಿವರ ಭಾವನೆಯೇ? ಇಷ್ಟಾದರೆ ಸಾಕು ಎಂದು ಆಕ್ಷೇಪಣೆ ಮಾಡಿದ ಸದಸ್ಯರೂ ಅಂದುಕೊಂಡಿದ್ದಾರೆಯೇ? ಸಚಿವನಾಗಿ ಆತ ಕಡತಗಳನ್ನು ಓದಬೇಕು, ಅಧಿಕಾರಿಗಳು ಕನ್ನಡದಲ್ಲಿ ಬರೆದಿರುವ (ಕರ್ನಾಟಕದ ಆಡಳಿತಭಾಷೆ ಕನ್ನಡವಾದ್ದ ರಿಂದ ಇದು ನಮ್ಮ ನಿರೀಕ್ಷೆ) ಟಿಪ್ಪಣಿಗಳನ್ನು ಓದಬೇಕು. ಅದು ಸರಿಯೋ ತಪ್ಪೋ ನಿರ್ಧರಿಸಿ ತನ್ನ ಒಪ್ಪಿಗೆ ಕೊಡಬೇಕು ತಾನೇ? ಅಥವಾ ಇದನ್ನೆಲ್ಲ ಅಧಿಕಾರಿಗಳೇ

ಮಾಡಿಬಿಡುವ ಭರವಸೆಯೋ! ಕೋರ್ಟುಗಳಲ್ಲಿ ಕೆಲವು ಆಜ್ಞೆಗಳನ್ನು ಪ್ರಶ್ನಿಸಿದಾಗ ಎಷ್ಟೋ ಸಲ ಈ ಮಾತುಗಳನ್ನು ವ್ಯಾಖ್ಯಾನಿಸಿಯೇ ನಿರ್ಧಾರಕ್ಕೆ ಬರುವುದೂ ಇದೆಯಲ್ಲವೇ? ಎರಡನೆಯ ಮಹಾಯುದ್ಧದ ಕಾಲದಲ್ಲಿ ಜಪಾನಿ ಸರ್ಕಾರ ಅಮೆರಿಕ ಸರ್ಕಾರಕ್ಕೆ ಕಳಿಸಿದ ಸಂದೇಶವೊಂದರಲ್ಲಿ ಬಳಕೆಯಾಗಿದ್ದ ಯಾವುದೋ ಒಂದು ಜಪಾನಿ ಪದಕ್ಕೆ ಎರಡು ಅರ್ಥ ಇದ್ದು, ಅದನ್ನು ಅಮೆರಿಕನ್ ಜಪಾನೀ ಭಾಷಾತಜ್ಞರು ಅನುವಾದಿಸಿದಾಗ ಉಂಟಾದ ಅರ್ಥಸಂದಿಗ್ಧತೆಯಿಂದಾಗಿ ಅಮೆರಿಕನ್ ವಿದೇಶ ಸಚಿವಾಲಯ ತಪ್ಪು ಅರ್ಥ ಗ್ರಹಿಸಿ ಕಳುಹಿಸಿದ ಉತ್ತರದ ಕಾರಣದಿಂದಲೇ ಪರ್ಲ್ ಹಾರ್ಬರ್ ಮೇಲೆ ಜಪಾನ್ ದಾಳಿ ನಡೆಸಲು ಕಾರಣವಾಯಿತು ಎಂದು ಹೇಳುತ್ತಾರೆ. ಅಂದರೆ ಜವಾಬ್ದಾರಿ ಸ್ಥಾನದಲ್ಲಿರುವ ವ್ಯಕ್ತಿ ಕಡತದಲ್ಲಿರುವುದನ್ನು ಅರ್ಥಮಾಡಿಕೊಳ್ಳುವ ಶಕ್ತಿಯುಳ್ಳವನಾಗಿರಬೇಕಲ್ಲವೇ? ಸಚಿವಸ್ಥಾನವನ್ನು ಸರಿಯಾಗಿ ನಿಭಾಯಿಸಲು ಸೂಕ್ಷ್ಮಗ್ರಾಹಿತ್ವದೊಂದಿಗೆ ತಕ್ಕಮಟ್ಟಿಗಿನ ಭಾಷಾಪ್ರಭುತ್ವವೂ ಇರಬೇಕಲ್ಲವೇ? ಕನ್ನಡ ಆಡಳಿತಭಾಷೆಯಾಗಿರುವ ನಾಡಿನ ಸರ್ಕಾರದ ಸಚಿವನೊಬ್ಬ ಕನ್ನಡ ಬಾರದವನೆಂದರೆ ಆತ ಆಡಳಿತಭಾಷೆಯ ಮಟ್ಟಿಗೆ ಅನಕ್ಷರಸ್ಥ ಎಂದೇ ಅರ್ಥವಲ್ಲವೇ? ಮಾತು ಬಾರದವನನ್ನು ಸ್ಪೀಕರ್ ಮಾಡಿದಂತೆ, ಕುರುಡನನ್ನು ನೃತ್ಯದ ತೀರ್ಪುಗಾರನಾಗಿರುವಂತೆ ಮಾಡಿದಷ್ಟೇ ಆಭಾಸಕರ ಇದು. ಎಂಥ ದುರ್ದೈವ!

ರಾಜಕಾರಣ ಒಂದು ವೃತ್ತಿಯಲ್ಲ ಎಂದು ಹೇಳುವುದುಂಟು. ಹಾಗಾಗಿ ರಾಜಕಾರಣಿಯಾಗಲು ವಿದ್ಯಾರ್ಹತೆಗಳನ್ನು ನಿಗದಿಗೊಳಿಸಲು ಸಾಧ್ಯವಿಲ್ಲ ಎಂಬ ಮಾತುಗಳನ್ನು ಹೇಳುತ್ತಾರೆ ಅದು ವೃತ್ತಿಯಲ್ಲದಿದ್ದರೆ ಮತ್ತೇನು? ಸಚಿವನಿಗೆ, ಸದನ ಸದಸ್ಯರಿಗೆ ವೇತನ ಕೊಡುವರಲ್ಲ, ಯಾಕೆ? ಮಠಾಧಿಪತಿಯಾಗುವುದೂ ವೃತ್ತಿಯಲ್ಲ. ಯಾರು ಬೇಕಾದರೂ ರಾಜಕಾರಣಿಯಾಗಬಹುದು, ಮಠಾಧಿಪತಿಯಾಗಬಹುದು. ಅಥವಾ ಯಾವ ಕೆಲಸವನ್ನೂ ಸಮರ್ಪಕವಾಗಿ ಮಾಡಲು ಸಾಧ್ಯವಿಲ್ಲದವನು ಇವೆರಡರಲ್ಲಿ ಒಂದು ಆಗಬಹುದು ಎಂಬುದು ಅರ್ಥವಿರಬಹುದು. ಯಾವ ಕೆಲಸವನ್ನೂ ಮಾಡದೆ ಕೋಟ್ಯಂತರ ಸಂಪಾದಿಸುವ, ಅಧಿಕಾರ ಚಲಾಯಿಸುವ ಅವಕಾಶ ದೊರೆಯುತ್ತದಲ್ಲ. ಅಥವಾ ಹೀಗೆ ವ್ಯಾಖ್ಯಾನಿಸಬಹುದೇ: ನಿರ್ದಿಷ್ಟ ಅರ್ಹತೆಗಳನ್ನು ಪಡೆದು, ನಿಯತವಾಗಿ ತಿಂಗಳಿಗಿಷ್ಟು ಎಂದು ಸಂಬಳ ಪಡೆಯುವ, ಕೆಲಸದಲ್ಲಿದ್ದಾಗ ಮಾಡಿದ ಕೆಲಸಕ್ಕೆ ನಿವೃತ್ತಿಗೊಂಡ ಮೇಲೆ ನೀಡುವ ಕೆಲವು ಸವಲತ್ತುಗಳನ್ನು ಒಳಗೊಂಡದ್ದು ವೃತ್ತಿ; ಹೀಗಲ್ಲದೆ, ಯಾವ ಅರ್ಹತೆಗಳನ್ನೂ ಹೊಂದದೆ, ಅನಿರ್ದಿಷ್ಟವಾದ ವಿಧಾನ ಮತ್ತು ಪ್ರಮಾಣಗಳಲ್ಲಿ ಹಣ ಸಂಪಾದಿಸಿ, ತಾನು ಮಾಡಿದ ಕಾರ್ಯಕ್ಕೆ, ನಿವೃತ್ತಿಯ ನಂತರ ಮಾತ್ರವಲ್ಲ, ತಲೆತಲಾಂತರದವರೆಲ್ಲ ತಿಂದು ತೇಗುವಷ್ಟನ್ನು ಪಡೆಯುವವನು ರಾಜಕಾರಣಿ!

ರಾಜಕಾರಣಿಯ ಕೆಲಸ ಅಮೂರ್ತವಾದದ್ದು ಎಂದ ಹಾಗಾಯಿತು. ಹಾಗಾಗಿಯೇ ಅವರಿಗೆ ಯಾವ ನಿರ್ದಿಷ್ಟ ಅರ್ಹತೆಗಳನ್ನು ನಿಗದಿಪಡಿಸಲಾಗದು.

ಆದರೆ ಸಚಿವನಾಗಿಯೋ ಸದಸ್ಯರುಗಳಾಗಿಯೋ ಒಂದಷ್ಟು ನಿರ್ದಿಷ್ಟ ಕೆಲಸವನ್ನೂ ಅವರು ಮಾಡಬೇಕಲ್ಲವೇ? ಸದಸ್ಯರು ಕೇಳಿದ ಪ್ರಶ್ನೆಗಳಿಗೆ ತನ್ನ ಇಲಾಖೆಯ ಅಧಿಕಾರಿಗಳು ತಯಾರಿಸಿದ ಉತ್ತರಗಳನ್ನು ಓದುವಷ್ಟಾದರೂ ಅವರಿಗೆ ಆಡಳಿತ ಭಾಷೆಯ ಪರಿಜ್ಞಾನ ಬೇಡವೇ? ಕನ್ನಡ ಆಡಳಿತಭಾಷೆಯಾಗಲು ಮುಖ್ಯ ಅಡ್ಡಿ ಎಂದರೆ ಐಎಎಸ್ ಅಧಿಕಾರಿಗಳು ಎಂದು ನಾವು ಹಲವು ಬಾರಿ ದೂರುತ್ತೇವೆ. ಅದು ನಿಜ. ಆದರೆ ಅವರು ಈ ನಾಡಿನ ಸೇವೆಗೆ ಬರುವವೇಳೆಗೆ ಕನ್ನಡವನ್ನು ಕಲಿತಿರಬೇಕಾಗುತ್ತದೆ. ಆಡಳಿತದಲ್ಲಿ ಬಳಸಲು ಬೇಕಾಗುವಷ್ಟು ಕನ್ನಡ ತಮಗೆ ಬಂದರೂ ಅವರು ವ್ಯಾಮೋಹದಿಂದಲೋ ಗತ್ತು ತೊರಿಸಿಕೊಳ್ಳಲೋ ಇಂಗ್ಲಿಷಿನಲ್ಲಿ ವ್ಯವಹರಿಸಬಹುದು. ಆದರೆ ಒತ್ತಡ ತಂದರೆ, ಭಯ ಹುಟ್ಟಿಸಿದರೆ ಅವರು ಕನ್ನಡದಲ್ಲಿ ವ್ಯವಹರಿಸುವ ಶಕ್ತಿ ಹೊಂದಿದವರೇ. ಬೇರೆಡೆಯಿಂದ ಬಂದ ಅನೇಕ ಅಧಿಕಾರಿಗಳು ಕನ್ನಡವನ್ನು ಸೊಗಸಾಗಿಯೇ ಬಳಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಯಾವುದೋ ಕಾರಣದಿಂದ ನೇಮಕಗೊಂಡವರಿಗೆ ಸೂಕ್ತ ಅರ್ಹತೆಗಳನ್ನು ಪಡೆಯಲು ಸರ್ಕಾರ ಅವಧಿಯನ್ನು ನಿಯಮಿಸುತ್ತದೆ. ಸರ್ಕಾರದ ಕೆಲಸ ನಡೆಸುವವನು ಕನ್ನಡದಲ್ಲಿ ನಿರ್ದಿಷ್ಟ ಮಟ್ಟದ ತಿಳಿವಳಿಕೆಯನ್ನು ಪಡೆದಿರಬೇಕು; ಅದನ್ನು ಪಡೆಯದಿದ್ದರೆ, ಪಡೆದು ಬರಲು ಹೇಳಬೇಕು. ಕನ್ನಡ ತಿಳಿಯದವನಾದರೆ ಅವನಿಗಾಗಿ, ಅಧಿಕಾರದ ಭಯದಿಂದ, ಕೆಳ ಹಂತದವರೂ ಕನ್ನಡವನ್ನು ಅವಗಣಿಸುತ್ತಾರೆ.

ಸಚಿವನಾಗಲು ಕನ್ನಡದಲ್ಲಿ ಆಡಳಿತ ನಡೆಸುವ ಶಕ್ತಿಯನ್ನು ಹೊಂದಿರಬೇಕು ಎಂದಾದರೂ ಮಾಡಲು ಸಾಧ್ಯವಿಲ್ಲವೇ? ಪಂಚಾಯಿತಿ ಸದಸ್ಯನಾಗಲು ಅವನ ಮನೆಯಲ್ಲಿ ಶೌಚಾಲಯವಿರಬೇಕು ಎಂದೇನೋ ನಿಯಮವಿದೆಯಲ್ಲ; ಹಾಗೆಯೇ ಸಚಿವನಾಗುವವನು, ವಿಧಾನಮಂಡಲದ ಸದಸ್ಯನಾಗುವವನು ಕನ್ನಡದಲ್ಲಿ ಓದು ಬರೆಹದ ಸಾಮರ್ಥ್ಯವನ್ನು ಪಡೆದಿರಬೇಕೆಂದು ನಿಗದಿಪಡಿಸಬೇಕು. ಝಮೀರ್ ಅಹಮದ್ ಇಂಗ್ಲಿಷಿನಲ್ಲಿ ಪ್ರಮಾಣವಚನ ಸ್ವೀಕರಿಸಿದ್ದನ್ನು ಪ್ರತಿಭಟಿಸಿದ ಸದಸ್ಯರೇ ವಿಧಾನಮಂಡಲದಲ್ಲಿ ಇಂಥ್ಯೊಂದು ಖಾಸಗಿ ನಿರ್ಣಯವನ್ನು ಮಂಡಿಸಲಿ; ಈ ಬಗ್ಗೆ ಒಂದಷ್ಟು ಚರ್ಚೆಯಾಗಲಿ, ಧೂಳೇಳಲಿ.

☆ – ☆ – ☆

# ಮೌಢ್ಯಜಾಲ

ಈಗ ಎಲ್ಲಡೆ ಜಯಮಾಲ ಅವರ ಸುದ್ದಿ. ಯಾವುದೋ ಒಬ್ಬ ಜ್ಯೋತಿಷಿ ಆಕೆ ಒಂದು ತಪ್ಪು ಮಾಡಿರುವುದಾಗಿ ಹೇಳಿದ್ದರಿಂದ ಇಪ್ಪತ್ತು ವರ್ಷಗಳ ಹಿಂದೆ ತಾನು ಆಕಸ್ಮಿಕವಾಗಿ ಶಬರಿಮಲೆ ಅಯ್ಯಪ್ಪನ ಪಾದಸ್ಪರ್ಶ ಮಾಡಿದ್ದೇ ಆ ಅಪರಾಧ ಎಂದು ಪಾಪಪ್ರಜ್ಞೆಯಿಂದ ಕೂಡಿ ಹೇಳಿಕೆಯಿತ್ತಿರುವುದೇ ಈ ಸುದ್ದಿಸ್ಫೋಟದ ಮೂಲ. ಹೆಂಗಸು ದೇವಸ್ಥಾನದ ಒಳಗೆ ಬಂದಿರುವುದು ಸಾಧ್ಯವೇ ಇಲ್ಲ ಎಂದು ದೇವಾಲಯ ಸಮಿತಿಯ ಹೇಳಿಕೆ. ಇದು ಕೇರಳ ಅಸೆಂಬ್ಲಿಯಲ್ಲೂ ಪ್ರತಿಧ್ವನಿಸಿದೆ; ಕೋರ್ಟು ಮೆಟ್ಟಿಲನ್ನೂ ಹತ್ತಿದೆ; ಎಲ್ಲಡೆ ಕೋಲಾಹಲಕ್ಕೆ ಕಾರಣವಾಗಿದೆ.

ಅಯ್ಯಪ್ಪನ ದೇವಸ್ಥಾನಕ್ಕೆ ಹತ್ತರಿಂದ ಐವತ್ತು ವರ್ಷಗಳವರೆಗಿನ ಹೆಂಗಸರಿಗೆ ಪ್ರವೇಶ ನಿಷಿದ್ಧವಂತೆ. ಅಂದರೆ ಪ್ರಾಕೃತಿಕವಾಗಿ ತನ್ನ ಬದುಕನ್ನು ಸಾರ್ಥಕ ಮಾಡಿಕೊಳ್ಳುವ ಹೆಂಗಸಿಗೆ ಪ್ರವೇಶ ಇಲ್ಲ. ಹೆಣ್ಣಿನ ಇರವು ಮಕ್ಕಳನ್ನು ಹೆತ್ತು, ಕಾಪಾಡಿ ಸಂತಾನ ಮುಂದುವರಿಯುವಂತೆ ಮಾಡುವುದಕ್ಕೆ ತಾನೇ? ಅದು ಸಾಧ್ಯವಾಗುವುದು ಹೆಣ್ಣು ಮುಟ್ಟಾಗುವ ಅವಧಿಯಲ್ಲಿ. "ಹೊಲೆಗಂಡಲ್ಲದೆ ಪಿಂಡದ ನೆಲೆಗೆ ಆಶ್ರಯವಿಲ್ಲ" ಎಂದು ಬಸವಣ್ಣ ಹೇಳುತ್ತಾನೆ. ಹತ್ತು ವರ್ಷದ ಹುಡುಗಿ ಋತುಮತಿಯಾಗಿರುವುದಿಲ್ಲ; ಐವತ್ತು ವರ್ಷದವಳ ಮುಟ್ಟು ನಿಂತು ಅವಳ ನಿಜವಾದ ಅರ್ಥದ ಹೆಣ್ತನ ಕೊನೆಗಂಡಿರುತ್ತದೆ, ಒಬ್ಬಳು ಹುಡುಗಿ; ಇನ್ನೊಬ್ಬಳು ಮುದುಕಿ. ಒಬ್ಬಳ ಹೆಣ್ತನ ಇನ್ನೂ ಅರಳಿರುವುದಿಲ್ಲ; ಮತ್ತೊಬ್ಬಳದು ಮುದುಡಿ ಹೋಗಿರುತ್ತದೆ. ಇವೆರಡರ ನಡುವಣ ವಯಸ್ಸೇ ಹೆಣ್ಣಿನ ಫಲವಂತಿಕೆಯ ಕಾಲ. ಮುಟ್ಟನ್ನು ಮೈಲಿಗೆ ಎಂದು ಪರಿಗಣಿಸಿ ಮುಟ್ಟಾಗುವ ಹೆಂಗಸೂ ಮೈಲಿಗೆಯವಳು ಎಂಬುದು ಬಹು ಹಿಂದಿನಿಂದ ಮಾಡಿರುವ ತೀರ್ಮಾನ. ರಜಸ್ಸು ಹೊಂದಿದ ಹೆಣ್ಣು ಮೈಲಿಗೆಯಾದರೆ ಸಂತಾನಕ್ಕೆ ಕಾರಣವಾಗುವ ರೇತಸ್ಸನ್ನು ಪಡೆದ ಗಂಡಸೇಕೆ ಮೈಲಿಗೆಯಲ್ಲ? "ಜಲ ಬಿಂದುಗಳ ವ್ಯವಹಾರ"ದಿಂದಾಗಿ ಅಲ್ಲವೇ ಪಿಂಡೋತ್ಪತ್ತಿ. ಇದು ಪ್ರಕೃತಿ ನಿಯಮ ಎಂಬ ಕನಿಷ್ಠ ಜ್ಞಾನ ಇವರಿಗಿಲ್ಲವೇ! ನಾವೆಲ್ಲ ಈ ಜಗತ್ತಿನಲ್ಲಿ ಇರಲು ಸಾಧ್ಯವಾಗಿರುವುದು ಹೆಣ್ಣಿನ ಈ ಫಲವಂತಿಕೆಯ ಕಾರಣದಿಂದಲ್ಲವೇ? ಹೆಣ್ಣನ್ನು ಅಪವಿತ್ರ ಎಂದು ಭಾವಿಸುವ ಗಂಡಿನ ಅಹಂಕಾರವೇ ಈ ತಾರತಮ್ಯಕ್ಕೆ ಕಾರಣವಾಗಿದ್ದರೂ,

ಈ ವೈಜ್ಞಾನಿಕ ಯುಗದಲ್ಲಿಯೂ ಅದನ್ನು ಮಾನ್ಯಮಾಡುತ್ತ ಹೋಗುವುದು ಅಜ್ಞಾನದ ಪರಮಾವಧಿ.

ತಾಯಿಯ ಕಾರಣದಿಂದಲೇ ದೇವರ ಕಲ್ಪನೆಯೂ ಮೂಡಿರುವುದು. ನಮ್ಮ ಜನ್ಮಕ್ಕೆ ಕಾರಣವಾಗಿ, ನಮ್ಮ ಅತ್ಯಂತ ಅಸಹಾಯಕ ಸ್ಥಿತಿಯಲ್ಲಿ ನಮ್ಮನ್ನು ಕಾಪಾಡಿ, ತನ್ನ ಜೀವದ್ರವ್ಯವನ್ನೆಲ್ಲ ನಮ್ಮ ಬಲವರ್ಧನೆಗೆ ಮುಡಿಪಿಡುವ ತಾಯಿಯಂತೆಯೇ ದೇವರೂ ಕಾಪಾಡುತ್ತಾನೆ ಎಂಬ ಭಾವನೆ ಈ ಕಲ್ಪನೆಗೆ ಆಧಾರ. ಅಂಥವಳನ್ನು ಈ ದೇವರು ಮುಟ್ಟಬಾರದು! ಶಬರಿಮಲೆಯ ಅಯ್ಯಪ್ಪನ ಜೊತೆಗೆ, ಧರ್ಮಸ್ಥಳದ ಅಣ್ಣಪ್ಪ ಎಂಬ ದೈವವೂ ಈ ಜಾತಿಯ ದೈವವೇ. ದೇವರು ಒಬ್ಬನೇ ಎಂದು ಇವರೆಲ್ಲ ಬೊಬ್ಬಿಡುತ್ತಾರೆ. ದೇವರು ಎಂದರೆ ಈ ಜ್ಞಾನಿಗಳ ಪ್ರಕಾರವೂ ಇಡೀ ಪ್ರಕೃತಿಯ ಹಿಂದಿನ ಶಕ್ತಿಯೇ ತಾನೇ? ಅಂದರೆ ಪ್ರಕೃತಿಯೇ ದೇವರು ಎಂಬುದು ಮೂಲವಾದ, ಸರಿಯಾದ ಕಲ್ಪನೆ. ಜಗತ್ತಿನ ಅತ್ಯಂತ ಪ್ರಾಚೀನ ಸಾಹಿತ್ಯವಾದ ವೇದಗಳಲ್ಲಿ(ಪ್ರಾಚೀನತಮವಾದ ಋಗ್ವೇದದಲ್ಲಿ)ರುವುದು ಪಾಕೃತಿಕ ಸಂಗತಿಗಳಾದ ಸೂರ್ಯ, ಮಳೆ, ಭೂಮಿ, ಆಕಾಶ ಇಂಥವನ್ನೇ ದೇವರೆಂದು ಭಾವಿಸುವ ಕಲ್ಪನೆಯಲ್ಲವೇ? ಆದರೆ ಆ ದೇವರೇ ಈ ದೇವಸ್ಥಾನ ಸಮಿತಿಯ ದೃಷ್ಟಿಯಲ್ಲಿ ಸ್ತ್ರೀದ್ವೇಷಿ! "ಕೂಟಕ್ಕೆ ಸತಿಪತಿಯೆಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ?" ಎಂದು ಆಯ್ದಕ್ಕಿ ಲಕ್ಕಮ್ಮನೆಂಬ ಸಾಮಾನ್ಯ ವಚನಕಾರ್ತಿ ಕೇಳುತ್ತಾಳೆ. ದೇವರಿಗಾದರೂ ಈ ಸಮಾನ ದೃಷ್ಟಿ ಬರಬಾರದೇ!

ಜಾತಿ ಲಿಂಗ ತಾರತಮ್ಯಗಳನ್ನು ದೇವಸ್ಥಾನಗಳು ಅನುಸರಿಸುವುದನ್ನು ಎಲ್ಲ ಸೂಕ್ಷ್ಮಚೇತಸ ಧಾರ್ಮಿಕ ನಾಯಕರೂ ಖಂಡಿಸಿದ್ದಾರೆ. ಆ ಕಾರಣದಿಂಲೇ ಹೊಸ ಹೊಸ ಮತಗಳು ಹುಟ್ಟಿಕೊಂಡಿರುವುದು. ಆದರೆ ಕಾಲ ಸರಿದಂತೆ ಅಂತಹ ಕ್ರಾಂತಿಕಾರಿಗಳ ಅನುಯಾಯಿಗಳು ಮತ್ತೆ ಹಳೆಯ ಚಾಳಿಯನ್ನೇ ಧರ್ಮವೆಂದು ಹೇಳಿಕೊಂಡು ಜನರನ್ನು ಮೇಲುಕೀಲುಗಳಾಗಿ ಕಾಣುವುದಕ್ಕೆ ಧಾರ್ಮಿಕ ಒಪ್ಪಿಗೆಯೂ ದೊರಕುವಂತೆ ಮಾಡಿಬಿಡುತ್ತಾರೆ. ಜಾತಿಪದ್ಧತಿಯ ವಿರುದ್ಧ ಹೋರಾಡಿದ ಪಂಗಡಗಳು ಬರಬರುತ್ತ ಹೊಸ ಜಾತಿಗಳಾಗಿ ಬಿಡುವುದು ಎಂಥ ವಿಪರ್ಯಾಸ! ಹೆಣ್ಣಿನ ಬಗೆಗಿನ ಕೀಳು ಭಾವನೆಯಂತೂ ಎಲ್ಲ ಮತಧರ್ಮಗಳಲ್ಲಿಯೂ ಇದೆ. ಮಠಮಾನ್ಯಗಳು ಈ ತಾರತಮ್ಯವನ್ನು ಪೋಷಿಸಿಕೊಂಡು ಹೋಗುವುದನ್ನೇ ತಮ್ಮ ಮುಖ್ಯ ಆಶಯವಾಗಿ ಉಳ್ಳವು. ಹೆಣ್ಣನ್ನು ಪೂಜ್ಯಳು ಎಂದು ಕರೆಯುತ್ತಲೇ ಅವಳನ್ನು ಮೈಲಿಗೆಯೆಂದು ಹೇಳುತ್ತ ಅವಳ ಸಹಜ ಭಾವನಾಸ್ವಾತಂತ್ರ್ಯಕ್ಕೆ ಕೊಡಲಿಪೆಟ್ಟನ್ನು ಇವು ಕೊಡುತ್ತಲೇ ಬಂದಿವೆ. ಅಂಗವಿಕಲರ ಬಗ್ಗೆ ಹೇಳುವಾಗ ಪದೇ ಪದೇ ಒಂದು ಮಾತನ್ನು ಕೇಳುತ್ತೇವೆ: 'ಅವರಿಗೆ ಬೇಕಾಗಿರುವುದು ಕರುಣೆಯಲ್ಲ, ಸಮಾನ ಅವಕಾಶ' ಎಂಬುದು. ಹಾಗೆಯೇ ಹೆಣ್ಣಿನ ಬಗ್ಗೆ ಪೂಜ್ಯಭಾವನೆಯೋ, ಕರುಣೆಯೋ ಬೇಕಿಲ್ಲ; ಅವಳನ್ನೂ ಸಮಾನವೆಂದು ಭಾವಿಸಿದರೆ ಸಾಕು.

ಇನ್ನೊಂದು ಮಾತು. ಸೂರ್ಯಸ್ಪಷ್ಟವಾಗಿ ಅವೈಜ್ಞಾನಿಕ ಅವೈಚಾರಿಕ ಮಾರ್ಗಗಳನ್ನು ಅನುಸರಿಸುತ್ತ ಬರುವ ಸಂಸ್ಥೆಗಳನ್ನು ನಾವಾದರೂ ಏಕೆ ಮಾನ್ಯ ಮಾಡಬೇಕು? ಪ್ರಕೃತಿವಿರುದ್ಧವಾದ ನಿಯಮಗಳನ್ನು ಅನುಸರಿಸುವ ದೇವಸ್ಥಾನಗಳನ್ನೇ ಪ್ರಜ್ಞಾವಂತರು ಬಹಿಷ್ಕರಿಸಬೇಕು. ದೇವರು ಎಲ್ಲೆಡೆಯಲ್ಲಿಯೂ, "ಅಣುರೇಣುತೃಣಕಾಷ್ಠ"ಗಳಲ್ಲಿಯೂ ಇರುವನೆಂದು ನಂಬುವ ಭಾವುಕರು ದೇವಸ್ಥಾನದ ದೇವರುಗಳನ್ನು ತಾವೇ ದೂರ ಇಡುವುದು ಸಮಂಜಸವಲ್ಲವೇ? ಯಾವ ಸೂಕ್ಷ್ಮಜ್ಞಾನಿಯೂ ದೇವಸ್ಥಾನಕ್ಕೆ ತನ್ನನ್ನು ಸೀಮಿತಗೊಳಿಸಿಕೊಳ್ಳಲಿಲ್ಲ; ಇಡೀ ವಿಶ್ವದಲ್ಲಿಯೇ ದೈವಸಾಕ್ಷಾತ್ಕಾರವನ್ನು ಮಾಡಿಕೊಳ್ಳಲು ಹೆಣಗಿದರು. "ಖಂಡಿತವಿಲ್ಲದ ಅಖಂಡಿತ ನೀನೆ. ನಿನ್ನ ಕಂಡವರುಂಟೆ ಹೇಳಯ್ಯ. ಕಂಡನೆಂಬವರೆಲ್ಲ ಬಂಜೆಯ ಮಕ್ಕಳು. ನೀನಿಂದ ಹೆಜ್ಜೆಯ ಕೆಳಗೆ ಒಂದು ಬಿಂದು ಹುಟ್ಟಿ ಬೆಳಗುವ ಚಂದವ ಕಂಡು ಕಣ್ತೆರೆದೆ ಕಾಣಾ, ರಾಮನಾಥಾ" ಎಂಬ ಜೇಡರ ದಾಸಿಮಯ್ಯನ ವಚನ ಪ್ರಕೃತಿ ಮೂಲಕ ಮಾತ್ರವೇ ದೇವರನ್ನು ಕಾಣಲು ಸಾಧ್ಯ ಎಂದು ಪ್ರತಿಪಾದಿಸುತ್ತದೆ. ದೇವಸ್ಥಾನ ಎಂಬ ಸಂಸ್ಥೆಯು ಸಾಂಸ್ಕೃತಿಕ ಕೇಂದ್ರಗಳಾಗಿದ್ದರಬಹುದಾದರೂ ಅನ್ಯಾಯದ ಅನಾಚಾರದ ನೆಲೆಗಳಾಗಿ ಎಲ್ಲ ಕಾಲಗಳಲ್ಲಿಯೂ ಇದ್ದುದು ಸ್ಪಷ್ಟ. ಆದ್ದರಿಂದಲೇ ಅಲ್ಲಮಪ್ರಭುವಿನಂತಹವರು "ಲಿಂಗಪ್ರತಿಷ್ಠೆ ನಾಯಕ ನರಕ" ಎಂದು ಹೇಳಿದ್ದು. ಭಕ್ತಿ ಎಂಬುದು ವೈಯಕ್ತಿಕ ತುರ್ತು. ಒಂದು ಬೊಂಬೆಯಲ್ಲಿ ದೇವರನ್ನು ಕಾಣುವುದನ್ನು ಬಿಟ್ಟು ಪ್ರಕೃತಿಯಲ್ಲಿ ಅದನ್ನು ಕಾಣುವ ಮನೋಭಾವವನ್ನು ಹೊಂದುವುದೇ ಸರಿ. 'ನಾನು ಯಾರಿಗೆ ಬೇಕಿಲ್ಲವೋ ಅವರು ನನಗೂ ಬೇಕಿಲ್ಲ' ಎಂಬ ನಿಲವನ್ನು ಹೊಂದಿ ತಮ್ಮನ್ನು ಒಳಕ್ಕೆ ಬಿಟ್ಟುಕೊಳ್ಳದ ದೇವಸ್ಥಾನಗಳನ್ನು ಒಳಕ್ಕೆ ಹೋಗಲಾಗದವರೂ ನಿರಾಕರಿಸಬೇಕು. ಹಾಗೆಯೇ ಹೆಣ್ಣನ್ನು ನಿರಾಕರಿಸುವ ದೇವರನ್ನು ಹೆಂಗಸರೂ ನಿರಾಕರಿಸಬೇಕು.

☆ – ☆ – ☆

# ಸದ್ದಿನ ಗುದ್ದು

ಇತ್ತೀಚಿನವರೆಗೆ ಟೆಲಿಫೋನ್ ಕರೆ ಬಂದಾಗಲೆಲ್ಲ ರಿಸೀವರನ್ನು ನಾನು ಎಡಕಿವಿಯ ಬಳಿ ಇಟ್ಟುಕೊಂಡು ಸಂಭಾಷಣೆ ಮಾಡುತ್ತಿದ್ದೆ. ಆದರೆ ಏನಾಯಿತೋ ಏನೋ, ಕೆಲವು ತಿಂಗಳ ಹಿಂದೆ ಚೆನ್ನಾಗಿ ಕೇಳಿಸುತ್ತಿಲ್ಲವಲ್ಲ ಅಂದುಕೊಂಡು, ಕಿವಿಯಲ್ಲಿ ಕೊಳೆಯೇನಾದರೂ ತುಂಬಿಕೊಂಡು ಹೀಗಾಗಿದೆಯೋ ಎನಿಸಿತ್ತು. ಆದರೆ ಕಿವಿಯನ್ನು ಶುದ್ಧಿಗೊಳಿಸಿಕೊಂಡಮೇಲೂ ಹೀಗೇ ಆಗಿತ್ತು; ಆಗ ಟೆಲಿಪೋನ್‌ನ ಧ್ವನಿಶಕ್ತಿ ಕಡಿಮೆಯಾಗಿರಬಹುದೆಂದು ಭಾವಿಸಿದ್ದೆ. ಅಂತಹ ಒಂದು ಸಂದರ್ಭದಲ್ಲಿ ಆಕಸ್ಮಿಕವಾಗಿ ರಿಸೀವರನ್ನು ಬಲಗಿವಿಗಿಟ್ಟುಕೊಂಡಾಗ ಸ್ಪಷ್ಟವಾಗಿ ಕೇಳಿಸಿತ್ತು. ಅಂದರೆ ಎಡಗಿವಿಗೇ ಏನೋ ಆಗಿದೆಯೆಂದು ತಿಳಿದು ಇಎನ್‌ಟಿ ವೈದ್ಯರ ಬಳಿ ಹೋದೆ. ಎರಡೂ ಕಿವಿಗಳಲ್ಲಿ ಕಿಂಚಿತ್ತಾದರೂ ಕೊಳೆಯಿಲ್ಲ; ಏನಾದರೂ ಜೋರಾದ ಸದ್ದು ಇದ್ದಕ್ಕಿದ್ದಂತೆ ಕೇಳಿಸಿತೇ ಎಂದು ಅವರು ವಿಚಾರಿಸಿದರು. ಆಗ ತಾನೇ ದೀಪಾವಳಿ ಮುಗಿದಿತ್ತು; ಪಟಾಕಿಗಳ ಆರ್ಭಟ ಸಾಕಲ್ಲವೇ ಅನ್ನಿಸಿತು. ಹೀಗಾದಾಗ ತಾತ್ಕಾಲಿಕ ವಾಗಿ ಶ್ರವಣಶಕ್ತಿ ಕುಂದುತ್ತದಂತೆ; ಯಾವಯಾವುದೋ ಮಾತ್ರೆಗಳನ್ನು ಹದಿನೈದು ದಿನ ತೆಗೆದುಕೊಳ್ಳುವಂತೆ ಹೇಳಿ ಬರೆದುಕೊಟ್ಟರು. ಎಲ್ಲ ಆದರೂ ಸರಿಹೋಗಲಿಲ್ಲ; ಕಿವಿಯ ನರಗಳ ಪಟುತ್ವವೇ ಕಡಿಮೆಯಾಗಿರಬೇಕೆಂದು ಡಾಕ್ಟರು ಹೇಳಿದರು; ಮತ್ತೇನೂ ಮಾಡಲಾಗುವುದಿಲ್ಲ, ಬೇಕಾದರೆ ಹಿಯರಿಂಗ್ ಏಡ್ ಹಾಕಿಕೊಳ್ಳಬಹು ದೆಂದರು. ನನಗೂ ವಯಸ್ಸಾಗುತ್ತಿದೆಯಲ್ಲವೇ, ಅದಕ್ಕೇ ಹೀಗಾಗಿರಬಹುದು ಅಂದುಕೊಂಡೆ.

ಆದರೆ ಈಚೆಗೆ ಅನ್ನಿಸುತ್ತಾ ಇದೆ: ವಯಸ್ಸಾದಂತೆ ಇಂದ್ರಿಯಪಟುತ್ವ ಕಡಿಮೆಯಾಗಬಹುದು, ಅದು ಸಹಜ; ಆದರೆ ದಾರಿಯಲ್ಲಿ ಹೋಗುತ್ತಿದ್ದರೆ, ಅಷ್ಟೇಕೆ ನಿಮ್ಮ ಪಾಡಿಗೆ ನೀವು ಮನೆಯಲ್ಲಿ ಕೂತಿದ್ದರೂ ಬೀದಿಯಲ್ಲಿನ ಸದ್ದು ಇಂತಹ ದೋಷಗಳು ಬೇಗ ಉಂಟಾಗಲು, ಅಥವಾ ತೀವ್ರಗೊಳ್ಳಲು ಕಾರಣವಲ್ಲವೇ ಎಂದು. ಹನ್ನೊಂದನೇ ಶತಮಾನದ 'ಕರ್ನಾಟಕ ಕಾದಂಬರಿ' ಕಾವ್ಯದಲ್ಲಿ ಒಂದು ವರ್ಣನೆ ಬರುತ್ತದೆ: ಚಂದ್ರಾಪೀಡ ಎಂಬ ರಾಜಕುಮಾರ ಬೇಟೆಯಾಡಿಕೊಂಡು ಬರುವಾಗ ಒಂದೆಡೆ ಕಾಡಿನಲ್ಲಿ ಅಚ್ಛೋದ ಸರೋವರವನ್ನು ನೋಡುತ್ತಾನೆ; ಅದರಲ್ಲಿ ವಿಹರಿಸುವ ಹಂಸಗಳ ಕಲರವ, ಬೀಸುವ ತಂಪಾದ ಗಾಳಿ, ಪರಿಸರದ ಚೆಲುವು,

ಸ್ಫಟಿಕಸ್ವಚ್ಛ ನೀರನ್ನು ಕುಡಿದಾಗಿನ ರುಚಿ, ಮತ್ತು ಅದರಲ್ಲಿನ ಕಮಲಗಳ ಸುಗಂಧ – ಇವುಗಳಿಂದಾಗಿ ಅವನಿಗೆ "ಪಂಚೇಂದ್ರಿಯಸುಖ"ವುಂಟಾಯಿತಂತೆ. ಇದಕ್ಕೆ ವಿರುದ್ಧವಾಗಿ ಬೆಂಗಳೂರಿನ ಪರಿಸರ ಈಚೆಗೆ ಪಂಚೇಂದ್ರಿಯ ಪೀಡೆಯನ್ನುಂಟು ಮಾಡುತ್ತಿವೆ ಅನ್ನಿಸುವುದಿಲ್ಲವೆ?

ನೀವು ಮನೆಯಲ್ಲಿದ್ದರೂ ರಭಸವಾಗಿ ಓಡುವ ವಾಹನಗಳ ಗದ್ದಲ; ಪಡ್ಡೆ ಹುಡುಗರು ಸೈಲೆನ್ಸರ್ ಕಿತ್ತು ಓಡಿಸುವ ಬೈಕ್‌ನ ಕಿವಿಕೊರೆಯುವ ಸದ್ದು ನಿಮ್ಮನ್ನು ನಿಮ್ಮ ಪಾಡಿಗೆ ಬಿಡುವುದಿಲ್ಲ. ಇನ್ನು ಮನೆ ಬಿಟ್ಟು ಹೊರಟರೆ ದೇವರೇ (ಅವನಿದ್ದರೆ) ಗತಿ! ಪುಟ್‌ಪಾತ್‌ಗಳ ಮೇಲೆ ನೀವು ನಡೆಯುವ ಹಾಗಿಲ್ಲವಲ್ಲ; ಪುಟ್‌ಪಾತ್‌ಗಳೇ ಇಲ್ಲದಿರಬಹುದು; ಇದ್ದರೂ, ರಸ್ತೆ ಬದಿ ವ್ಯಾಪಾರಿಗಳು ಅವುಗಳ ಮೇಲೆ ಸರಕು ಹರಡಿಕೊಂಡು ಕೂತಿರುತ್ತಾರೆ, ಇಲ್ಲವೇ ಮನೆಯಲ್ಲಿ ಜಾಗವಿಲ್ಲದೆ ಕಾರು–ಬೈಕ್ ಮಾಲೀಕರು ಅವುಗಳನ್ನು ಪುಟ್‌ಪಾತ್ ಮೇಲೆ ನಿಲ್ಲಿಸಿರುತ್ತಾರೆ, ಅಥವಾ ಯಾವುದೋ ಇಲಾಖೆಯವರು ಪಕ್ಕದಲ್ಲಿ ಅಗೆದು ಮಣ್ಣನ್ನೆಲ್ಲ ಪುಟ್‌ಪಾತ್ ಮೇಲೆ ತುಂಬಿರುತ್ತಾರೆ. ಹೀಗಾಗಿ ನೀವು ರಸ್ತೆಯ ಮೇಲೇ ಓಡಾಡಬೇಕು. ಪಕ್ಕದಲ್ಲೇ ರೊಂಯ್ ಎಂದು ಜೋರಾಗಿ ಓಡುವ ವಾಹನಗಳು; ಮೈಮೇಲೇ ಹರಿದಂತೆ ಗಾಬರಿ ಹುಟ್ಟಿಸುವುದರ ಜೊತೆಗೆ, ಕಿವಿಯನ್ನು ಮುಚ್ಚುವ ಸದ್ದು. ಸಿಗ್ನಲ್ ಬಳಿ ರಸ್ತೆ ದಾಟಲು ಹೋದರೆ ಜೋರಾಗಿ ಬಂದು, ಸಿಗ್ನಲ್ ಕೆಂಪಿದ್ದರೆ ಧಡಕ್ ಎಂದು ನಿಮ್ಮ ಮುಂದೆ ನಿಲ್ಲುವ ವಾಹನಗಳು. ಮುಂದಿನವನು ಚಲಿಸಲು ಸ್ವಲ್ಪ ತಡಮಾಡಿದರೆ ಎಲ್ಲರೂ ಏಕತಾರಿಯಲ್ಲಿ ತಾರಕದಲ್ಲಿ ಮಾಡುವ ಹಾರನ್‌ಗಳ ಕೂಗು ಬೇರೆ.

ರಸ್ತೆಯಲ್ಲಿ ಆಟೋ ಮತ್ತು ಬೈಕ್‌ಗಳ ಹಾವಳಿಯಿಂದ "ಎನ್ನ ಕಿವುಡನ ಮಾಡಯ್ಯಾ, ತಂದೆ" ಎಂದು ಕೇಳುವ ಹಾಗೆ ಇಲ್ಲ; ಅದೇ ಆಗಿರುತ್ತದೆ. ಜೊತೆಗೆ ಅವು ಉಗುಳುವ ಹೊಗೆ ಬೇರೆ. ನೀವು ಬಸ್ಸಿನಲ್ಲಿ ಸಂಚರಿಸುವವರಾದರೆ, ನಿಮ್ಮ ಪಕ್ಕದಲ್ಲಿ ಕುಳಿತ ಪ್ರಯಾಣಿಕ ಹಿಂದಿನ ಸೀಟಿನಲ್ಲಿ ಕೂತ ತನ್ನ ಸ್ನೇಹಿತನ ಕಡೆ ತಿರುಗಿ ಜೋರಾಗಿ ಸಂಭಾಷಿಸುವಾಗ ಅವನ ಮಾತುಗಳನ್ನು ನೇರವಾಗಿ ನಿಮ್ಮ ಕಿವಿಗೇ ಸುರಿಯುತ್ತಿರುತ್ತಾನೆ. ಇಲ್ಲದಿದ್ದರೆ, ಪ್ರಪಂಚಕ್ಕೇ ತನ್ನ ವಿಷಯ ತಿಳಿಸುವ ಪ್ರಕಟಣೆ ಯಂತೆ ಮೊಬೈಲ್‌ನಲ್ಲಿ ಮಾತನಾಡುವವರು ಇದ್ದೇ ಇರುತ್ತಾರೆ. (ಬಿಎಂಟಿಸಿ ಬಸ್ಸು ಗಳಲ್ಲಿ ಮೊಬೈಲ್ ಬಳಕೆ ನಿಷಿದ್ಧ; ಆದರೆ ಕಾನೂನು ಮಾಡುವುದೇ ಮುರಿಯು ವುದಕ್ಕಲ್ಲವೇ?) ಪುಟ್‌ಪಾತ್‌ಗಳ ಮೇಲೂ ಹಾವಭಾವ ಸಮೇತ, ಆಗಾಗ ಜೋರಾಗಿ ನಗುವ, ಜಗಳವಾಡುವ, ಚರ್ಚೆಮಾಡುವ ಮೊಬೈಲ್ ಮಾತುಗಾರರು! ಅತ್ಯಲ್ಪ ವೆಚ್ಚದಲ್ಲಿ ಕೊನೆಯಿಲ್ಲದಷ್ಟು ಮಾತನಾಡಲು ಮೊಬೈಲ್ ಕಂಪನಿಗಳು ಕೊಟ್ಟಿರುವ ಸವಲತ್ತನ್ನು ಬಳಸಿಕೊಳ್ಳುವ ಛಲ!

ದೇವರುಗಳೂ ಕಿವುಡರೆಂಬಂತೆ ಆಗಾಗ ನಿಮ್ಮ ಬೀದಿಯ ದೇವಸ್ಥಾನ ದಲ್ಲೋ, ಸಮಾರಂಭದಲ್ಲೋ ಹಾಕುವ ರೆಕಾರ್ಡುಗಳ ಕೊರೆತ, ಮಂತ್ರಗಳ ಮೊರೆತ.

ಹಿಂದೆ ಪಟಾಕಿಗಳೆಂದರೆ ದೀಪಾವಳಿ ಅನ್ನಿಸುತ್ತಿತ್ತು. ಆದರೆ ಈಗ ಅದರದ್ದು ಸಾರ್ವತ್ರಿಕ ಚಟುವಟಿಕೆ: ಚುನಾವಣೆಗಳಲ್ಲಿ ಗೆದ್ದಾಗ, ಯಾರಾದರೂ ಸತ್ತಾಗ, ನಮ್ಮ ದೇಶ ಕ್ರಿಕೆಟ್‌ನಲ್ಲಿ ಗೆದ್ದಾಗ, ಹೊಸ ವರ್ಷ ಬರುವಾಗ – ಎಲ್ಲ ಸನ್ನಿವೇಶಗಳಲ್ಲೂ ಆಕಾಶ ತುಂಬುವ ಹೊಗೆ, ಕಿವಿ ತುಂಬುವ ಸದ್ದು. ನಮ್ಮ ಕಿವಿಗಳಿಗೆ ಇಂತಿಷ್ಟು ಡೆಸಿಬಲ್‌ಗಳ ಸದ್ದು ಕೇಳುವ ತಾಳ್ಮೆ ಇರುತ್ತದೆ; ಅದಕ್ಕೂ ಹೆಚ್ಚಿನ ಸದ್ದು ನಮ್ಮ ಒಳಗನ್ನೇ ಹೊಕ್ಕು ಕಿರಿಕಿರಿ ಉಂಟುಮಾಡುತ್ತದೆ. ಗರಿಷ್ಠ ಪ್ರಮಾಣವನ್ನು ಮೀರಿದ ಸದ್ದು ಸದಾ ಕೇಳುತ್ತಿದ್ದರೆ ನಮ್ಮ ಕಿವಿಗಳ ಗತಿಯೇನಾಗಬೇಕು? ಸದ್ದು ಕಿವಿಗಷ್ಟೇ ಸೀಮಿತವಾಗಿದ್ದರೆ ಒಂದು ರೀತಿ; ಆದರೆ ಅದು ಒಳಹೊಕ್ಕು ಮನಸ್ಸಿನ ಮೇಲೆ ವಿಪರೀತ ಪರಿಣಾಮವನ್ನುಂಟುಮಾಡುತ್ತದೆ.

ಅತ್ಯಂತ ಸೂಕ್ಷ್ಮವಾದುದನ್ನು ಗ್ರಹಿಸುವ ಶಕ್ತಿಯನ್ನು ಹೊಂದಿರುವುದು, ಎಲ್ಲದರಲ್ಲೂ ಒಂದು ಹದವನ್ನು ಕಾಪಾಡಿಕೊಳ್ಳುವುದು ಬದುಕಿನಲ್ಲಿ ಆವಶ್ಯಕ. ಇದು ನಮ್ಮ ಪಂಚೇಂದ್ರಿಯಗಳಿಗೂ ಅನ್ವಯಿಸುತ್ತದೆ. ಆದರೆ ಪಟ್ಟಣದ ಜನರಾದ ನಾವು ಎಲ್ಲದರಲ್ಲೂ ಸೂಕ್ಷ್ಮತೆಯನ್ನು ಕಳೆದುಕೊಳ್ಳುತ್ತಿದ್ದೇವೆ; ಹಣ ಸಂಪಾದನೆಯ ಗಡಿಬಿಡಿಯಲ್ಲಿ ಜೀವನದ ಎಲ್ಲ ಮಾಧುರ್ಯವನ್ನೂ ಹಾಳುಮಾಡಿಕೊಳ್ಳುತ್ತಿದ್ದೇವೆ; ಸದ್ದಿನಲ್ಲಿ ನಾವೇ ಕಳೆದುಹೋಗುತ್ತಿದ್ದೇವೆ ಅನ್ನಿಸುತ್ತದೆ. ಎಲ್ಲಾದರೂ ದೂರ ಪ್ರಶಾಂತವಾದ ವಾತಾವರಣಕ್ಕೆ ಹೋಗಬೇಕೆಂಬ ಹಂಬಲ ನನ್ನಂಥವರಿಗೆ ಉಂಟಾಗಬಹುದು. ಆದರೆ ವಾಸ್ತವದಲ್ಲಿ ಅದನ್ನು ಮಾಡಲು ಸಾಧ್ಯವಿಲ್ಲ. ನಾವು ನಮ್ಮ ಸ್ವಂತ ಊರುಗಳ ಸಂಪರ್ಕವನ್ನು ಕಡಿದುಕೊಂಡಿರುತ್ತೇವೆ, ಮಕ್ಕಳು ಇಲ್ಲೇ ಹುಟ್ಟಿ ಬೆಳೆದು ನೆಲೆಗೊಂಡಿರುತ್ತಾರೆ. ಹಾಗಾಗಿ ಬೆಂಗಳೂರನ್ನು ಬಿಟ್ಟು ನಾವೆಲ್ಲೂ ಹೋಗುವಂತಿಲ್ಲವಲ್ಲ ಎಂಬ ವಿಷಾದ ಆವರಿಸುತ್ತದೆ.

☆ – ☆ – ☆

# ಬದುಕಿನ ಹದ

ಈ ವಾರ ನನ್ನ ಮಾತನ್ನು ಒಂದು ವಚನದಿಂದ ಆರಂಭಿಸುತ್ತೇನೆ. ಇದು ಡಕ್ಕೆಯ ಬೊಮ್ಮಣ್ಣ ಎಂಬ ವಚನಕಾರನದು. ಅವನು ಹನ್ನೆರಡನೆಯ ಶತಮಾನದವನು; ವೀರಶೈವಕ್ಕೆ ಬರುವ ಮುಂಚೆ ಮೊರದಲ್ಲಿ ಮಾರಿಯನ್ನಿಟ್ಟುಕೊಂಡು, ಡಕ್ಕೆಯನ್ನು ಬಾರಿಸುತ್ತ ಮನೆಗಳ ಮುಂದೆ ನಿಂತು ಬೇಡುವುದು ಅವನ ಕಾಯಕವಾಗಿತ್ತು. ಅಂದರೆ ಅವನೊಬ್ಬ ಕಾಯಕಜೀವಿ, ಸಾಮಾನ್ಯ ಎನ್ನಿಸಿಕೊಳ್ಳುವ ವ್ಯಕ್ತಿ. ಆದರೆ ಸಾಮಾನ್ಯರಲ್ಲೂ ಎಂತ ವಿವೇಕ ಇರಬಹುದು ಎಂಬುದಕ್ಕೆ ಅವನ ಒಂದು ವಚನ ಸಾಕ್ಷಿ. ಅದು ಹೀಗಿದೆ:

> **"ಸೌಭಾಗ್ಯದಿಂದ ಮಾಡುವರೆಲ್ಲರೂ ಸಂತೋಷಭಾವಿಗಳು;**
> **ಭಕ್ತಿಯಿಂದ ಮಾಡುವರೆಲ್ಲರೂ ತ್ರಿವಿಧಭಾವಿಗಳು;**
> **ಒಂದೆಂದು ಹಿಂಗಿ ಮಾಡುವನ್ನಬರ ರುದ್ರನ ಉರಿಗೊಡಲಾಯಿತ್ತು.**
> **ಬಂದುದ ನೇತಿಗಳೆಯದೆ, ಬಾರದುದಕ್ಕೆ ದೋಟಿಯನಿಕ್ಕದೆ**
> **ಬಂದುದಕ್ಕೆ ಮನಮುಕ್ತವಾಗಿ ಸಂದುದು**
> **ಕಾಲಾಂತಕ ಭೀಮೇಶ್ವರಲಿಂಗಕ್ಕರ್ಪಿತವಾಯಿತ್ತು."**

ವಚನದ ಪೂರ್ತಿ ಅರ್ಥವನ್ನು ನಾನು ವಿವರಿಸಲು ಹೊರಡುವುದಿಲ್ಲ; ಅದು ಅನವಶ್ಯಕ. ನನಗೆ ಮುಖ್ಯವಾದುದು "ಬಂದುದು ನೇತಿಗಳೆಯದೆ, ಬಾರದುದಕ್ಕೆ ದೋಟಿಯನಿಕ್ಕದೆ, ಬಂದುದಕ್ಕೆ ಮನಮುಕ್ತವಾಗಿ ಸಂದುದು" ಎಂಬ ಸಾಲುಗಳು ಮಾತ್ರ. ಬದುಕಿನಲ್ಲಿ ಅನುಸರಿಸಬೇಕಾದ ವಿವೇಕಮಾರ್ಗವನ್ನು ಈ ಮಾತುಗಳು ತುಂಬ ಚೆನ್ನಾಗಿ ಹೇಳುತ್ತವೆ.

ಬದುಕಿನಲ್ಲಿ ಅನುಸರಿಸಬೇಕಾದ ದಾರಿಯ ಮೊದಲ ಮಜಲೆಂದರೆ, ಬಂದುದನ್ನು ತಿರಸ್ಕರಿಸದಿರುವುದು ("ಬಂದುದು ನೇತಿಗಳೆಯದೆ"). ನಾವೆಷ್ಟೇ ಲೆಕ್ಕಾಚಾರ ಹಾಕಿ ಸಾಗಿದರೂ ಬದುಕು ಆಕಸ್ಮಿಕಗಳ ಆಗರ; ಆ ದಾರಿಯಲ್ಲಿ ಏನೇನು ತಿರುವುಗಳು ಬರುವುದೋ ಮುಂಚೆಯೇ ಅರಿಯುವುದು ಅಸಾಧ್ಯ. ಕೆಟ್ಟುದೂ ಬರಬಹುದು; ಒಳ್ಳೆಯದೂ ಬರಬಹುದು. ಕೆಟ್ಟುದಾಗಬಹುದೆಂದು ಭಯಪಟ್ಟಿದ್ದರೆ,

ಕೆಲವೇಳೆ ಅಂಥದ್ದೇನೂ ಆಗದೆ ಸಲೀಸಾಗಬಹುದು. ಹಾಗೆಯೇ ಕೆಲವು ಸಲ, ಒಳ್ಳೆಯದನ್ನು ನಿರೀಕ್ಷಿಸಿ ಏನೇನೋ ಮಾಡಿದರೂ ನಮ್ಮ ಲೆಕ್ಕಾಚಾರವೆಲ್ಲ ತಲೆಕೆಳಗಾಗಿ ಅಧ್ವಾನವಾಗಿಬಿಡಬಹುದು. ನಾವು ಬರುವುದನ್ನು ಎದುರಿಸಬೇಕಾದರೆ ಎಂಥ ಮನಸ್ಥಿತಿಯನ್ನು ಹೊಂದಿರಬೇಕೆಂದರೆ, ಅದನ್ನು ನೇತಿಗಳೆಯದಿರುವುದು, ಅಂದರೆ ಅಲ್ಲಗಳೆಯದಿರುವುದು. ಸುಖವನ್ನು ಅಪೇಕ್ಷಿಸಿ ನೋವು ಬಂದರೆ ಅದನ್ನು ಅಷ್ಟು ಸುಲಭವಾಗಿ ಸ್ವೀಕರಿಸಲು ಸಾಧ್ಯವಿಲ್ಲ ಎಂಬುದು ನಿಜ. ಆದರೆ ಅನಿವಾರ್ಯವೇ ಆದರೆ, ಕೊರಗುತ್ತ ಕೂಡುವುದರ ಬದಲು ಅದನ್ನು ಹಾಗೆಯೇ ಸ್ವೀಕರಿಸುವುದರಿಂದ ಅದರ ತೀವ್ರತೆಯಾದರೂ ಕಡಿಮೆಯಾಗುತ್ತದೆ, ಹೆಚ್ಚು ಸಹನೀಯವಾಗುತ್ತದೆ. ಕಷ್ಟ ಸಹಿಸುವುದೇ ಸುಖದ ಅನುಭವವಲ್ಲವೇ!

ಹಾಗೆಯೇ ನಾವು ಏನೇನೋ ಯೋಜನೆಗಳನ್ನು ಹಾಕಿಕೊಳ್ಳುತ್ತೇವೆ. ಅದು ಹಲವೇಳೆ ಆಗದಿರಬಹುದು. ಹಾಗೆಂದಾಕ್ಷಣ ನಾವು ಯೋಜನೆಯನ್ನು ರೂಪಿಸು ವುದೇ ತಪ್ಪು ಎಂದಲ್ಲ. ಲೆಕ್ಕಾಚಾರ ಇರಬೇಕು; ಆಲೋಚನೆ ಮಾಡಿ ಯೋಜನೆ ಗಳನ್ನು ರೂಪಿಸಬೇಕು. ಆದರೆ ಒಂದು ವಿಷಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡಿರ ಬೇಕು; ಯಾವುದೋ ನಮ್ಮ ಕೈಲಿ ಸಾಧಿಸಲು ಅಸಾಧ್ಯ ಎನ್ನಿಸುವುದೋ, ಯಾವುದು ಬರೀ ಕನಸು ಕಾಣಲು ಆಗಬಹುದೇ ಹೊರತು ಅದು ನನಸಾಗುವುದು ಊಹೆಗೂ ನಿಲುಕದ್ದು ಎನಿಸುವುದೋ, ಅಂತ ಆಲೋಚನೆಗಳನ್ನು ಮಾಡಲೇಬಾರದು ("ಬಾರದುದಕ್ಕೆ ದೋಟಿಯನಿಕ್ಕದೆ"). ಹಾಗೆಂದಾಕ್ಷಣ ನಾವು ಕನಸನ್ನೇ ಕಾಣಬಾರದು ಎಂದಲ್ಲ. ಆದರೆ ಅದರ ಬಗ್ಗೆ ನಮ್ಮದು ಇರ್ಬಾಯ ನಿಲವಾಗಿರಬೇಕು: ಕನಸನ್ನು ಸಾಕಾರಗೊಳಿಸಲು ಆವಶ್ಯಕವಾದ ಪ್ರಯತ್ನಗಳನ್ನು ನಮ್ಮೆಲ್ಲ ಶಕ್ತಿ ಸಂಚಯಿಸಿ ಮಾಡಬೇಕು; ಇನ್ನೊಂದು, ಕನಸು ನನಸಾಗದಿದ್ದರೆ ಅದನ್ನೇ ನೆನೆಯುತ್ತ ಕೊರಗ ಬಾರದು. ಕನಸು ನನಸಾಗದಿದ್ದರೆ ಕೊರಗು ಸಹಜ; ಆದರೆ ಅದಕ್ಕೂ ಮಿತಿಯಿರ ಬೇಕು; ಮುಂದಿನ ಪ್ರಯತ್ನಗಳನ್ನು ಕೈಬಿಡುವಷ್ಟರ ಮಟ್ಟಿಗೆ ಹತಾಶೆ ನಮ್ಮನ್ನಾವರಿಸ ಬಾರದು. ಹಾಗೆಯೇ ಗೆಲವು ದೊರೆತಾಗ ನಮ್ಮ ಮೈಮರೆಸಬಾರದು.

ಹೀಗೆ ನಮ್ಮ ಪ್ರಯತ್ನಗಳ ಕೊನೆಯಲ್ಲಿ ಏನು ಬರುವುದೋ ಅದನ್ನು ಸ್ವೀಕರಿಸುವ ಮುಕ್ತತೆ ನಮ್ಮದಾಗಿರಬೇಕು ("ಬಂದುದಕ್ಕೆ ಮನಮುಕ್ತನಾಗಿ" ಸಲ್ಲು ವುದು). ಇದೇನು ಸನ್ಯಾಸಿಗಳ ಮಾರ್ಗವಾಯಿತಲ್ಲ ಅನ್ನಿಸಬಹುದು. ಆದರೆ ಎಲ್ಲ ಸನ್ಯಾಸಿಗಳು ಜನ ಅಂದುಕೊಂಡ ಹಾಗೇ ಇರುವುದಿಲ್ಲ; ಅವರಲ್ಲಿಯೂ ಬಯಕೆಗಳು, ನೋವುಗಳು ಇದ್ದೇ ಇರುತ್ತವೆ. ಇವೆ ಎಂದರೆ ಜನ ನಂಬುವುದಿಲ್ಲ, ಅಷ್ಟೆ. ಹಾಗೆಯೇ ಬೊಮ್ಮಣ್ಣನಂತಹವರು ತೀರ ಸಾಮಾನ್ಯ ನೆಲೆಯ ವ್ಯಕ್ತಿಗಳಾಗಿರಬಹು ದಾದರೂ, ಅವರದು ಹೇಳಿಕೊಳ್ಳುವ ಸಾಧನೆಯಿಲ್ಲದಿರಬಹುದಾದರೂ, ಈ ಮನೋ ಭಾವ ಅಂತಹವರನ್ನು ಈ ಮನಸ್ಥಿತಿಯಿರದ ಸನ್ಯಾಸಿಗಳಿಗಿಂತ ಉತ್ತಮರನ್ನಾಗಿ ಮಾಡುತ್ತದೆ. ನಾನು ಸನ್ಯಾಸಿ ಮನೋಭಾವವನ್ನು ಪ್ರತಿಪಾದಿಸುತ್ತಿಲ್ಲ. ಬದುಕಿನಲ್ಲಿನ

ಸುಖವನ್ನೂ ಸ್ವೀಕರಿಸುವ ಮುಕ್ತತೆ ಬೇಕು; ಹಾಗೆಯೇ ದುಃಖವನ್ನು ತಡೆದುಕೊಳ್ಳುವ ಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಆಗ ಬದುಕು ಹೆಚ್ಚು ಸಹನೀಯ.

ಆಸೆಗಳು, ಕನಸುಗಳು ನಮ್ಮ ಬದುಕನ್ನು ಮುನ್ನಡೆಸುವ ಶಕ್ತಿಸಾಧನಗಳು; ಅವಿಲ್ಲದಿದ್ದರೆ ನಾವು ಜಡರಾಗುತ್ತೇವೆ. ಆದರೆ ಅದರಲ್ಲೂ ವಾಸ್ತವಪ್ರಜ್ಞೆ ಹಿನ್ನೆಲೆಯಲ್ಲಿ ಕ್ರಿಯಾಶೀಲವಾಗಿರಬೇಕು. ಕನಸು ಇರಬೇಕು, ಹಗಲುಗನಸು ಇರಬಾರದು; ಆಸೆ ಇರಬೇಕು, ಅದು ದುರಾಸೆಯಾಗಬಾರದು. ಬದುಕು ವಿರೋಧಗಳ ತಾಣ: ಇರುವ ಪ್ರತಿಯೊಂದಕ್ಕೂ ವಿರುದ್ಧವಾದುದೂ ಇದ್ದೇ ಇರುತ್ತದೆ. ಅವೆರಡೂ ನಮ್ಮನ್ನು ಸುತ್ತುವರಿದಿರುತ್ತವೆ; ಆದರೆ ಯಾವುದಕ್ಕೂ ಬಲಿಯಾಗುವ ಕುರಿತನ ನಮ್ಮಲ್ಲಿಲ್ಲದಾಗ ನಾವು ಗೆಲ್ಲುತ್ತೇವೆ. ಈ ದೃಷ್ಟಿಯಿಂದಲೇ ಬುದ್ಧ ಆಸೆಯೇ ದುಃಖಕ್ಕೆ ಕಾರಣ ಎಂದನೆನಿಸುತ್ತದೆ. ಯಾವುದು ಅತಿಯಾದರೂ ರೋಗಿಷ್ಠ ಸ್ಥಿತಿಯೇ; ಎಷ್ಟು ತಿಂದರೂ ಹಿಂಗದ ಹಸಿವಾದರೆ ಹೇಗೆ ರೋಗವೋ, ಹಾಗೆಯೇ ಹಸಿವಾಗದಿರುವುದೂ ರೋಗವೇ. ಹಾಗಾಗಿ ಎಲ್ಲ ದ್ವಂದ್ವಗಳನ್ನೂ ಅರಗಿಸಿಕೊಂಡು ಬದುಕುವ ಹದ ನಮ್ಮದಾಗಬೇಕು. ಗೋಪಾಲಕೃಷ್ಣ ಅಡಿಗರ ಒಂದು ಸಾಲು ನೆನಪಾಗಿತ್ತದೆ: "ಕಲಿಸು ಬಾಗದೆ ಸೆಟೆವುದನ್ನು, ಬಾಗುವುದನ್ನು."

☆ – ☆ – ☆

# ವಾರದ ವೈವಿ(ರು)ಧ್ಯ

ಕಳೆದ ವಾರ ಲೇಖನ ಬರೆದ ಕಾಲ ಮತ್ತು ಇದನ್ನು ಬರೆಯುತ್ತಿರುವ ಹೊತ್ತು – ಇವುಗಳ ನಡುವಣ ಒಂದು ವಾರದಲ್ಲಿ ನನಗೆ ಕೆಲವು ಅನುಭವಗಳಾದವು. ಅವುಗಳನ್ನು ನಿರೂಪಿಸುವ ಮೂಲಕ ಇವತ್ತಿನ ನಮ್ಮ ನಾಡಿನ ಸ್ವರೂಪದ ಬಗ್ಗೆ ಹೇಳುತ್ತೇನೆ.

ಹೋದ ವಾರ ಮೈಸೂರಿಗೆ ಹೋಗಿದ್ದೆ, ಕಾಲೇಜು ಕನ್ನಡ ಶಿಕ್ಷಕರ ಪುನರ್ಮನನ ಶಿಬಿರದಲ್ಲಿ ಮಾತನಾಡಲು, ಕನ್ನಡ ಸಾಹಿತ್ಯದ ಬಗ್ಗೆ. ಅದರ ವಿಷಯ ದೊಡ್ಡದೇನಲ್ಲ, ಮೇಷ್ಟರಾದವರಿಗೆ ಪಾಠ ಮಾಡುವುದರಲ್ಲೇನಿದೆ ಹೊಸತು ಅಥವಾ ವಿಶೇಷ! ಆದರೆ ವಾಪಸು ಬರುವಾಗಿನ ಅನಭವ: ಹೇಗಿದ್ದರೂ ಪ್ರಯಾಣ ಭತ್ಯೆ ಕೊಟ್ಟಿದ್ದರಲ್ಲ, ವೋಲ್ವೋ ಬಸ್ಸಿನಲ್ಲಿ ಬಂದೆ. ಬಸ್ಸೇನೋ ಸರಿ, ಆರಾಮದಾಯಕವಾಗಿತ್ತು. ಬಸ್ಸಿನ ಶಬ್ದವಾಗಲೀ, ಎತ್ತಿ ಹಾಕುವುದಾಗಲೀ ಹೆಚ್ಚಿಲ್ಲದೆ ಪ್ರಯಾಣ ಹಿತಕರವೇ ಆಗಿತ್ತು. ಆದರೆ ನನಗೆ ಅಹಿತಕರವಾದುದೆಂದರೆ, ಪ್ರಯಾಣದುದ್ದಕ್ಕೂ ಹಾಕಿದ್ದ ವಿಡಿಯೋ ಚಿತ್ರ. ಎರಡೂವರೆ ಗಂಟೆ ಪ್ರಯಾಣಕಾಲದ ಪೂರ್ತಿ ಒಂದು ಸಿನಿಮಾ, ಮುಂಭಾಗದಲ್ಲಿ ಅಳವಡಿಸಿದ್ದ ಟಿವಿಯಲ್ಲಿ. ಅಬ್ಬರವೇನೂ ಹೆಚ್ಚಿರಲಿಲ್ಲ, ಆದರೆ ಅದು ಹಿಂದಿ ಸಿನಿಮಾ. ಕರ್ನಾಟಕ ಸರ್ಕಾರದ ಬಸ್ಸು, ಕೆಲವು ಬಸ್ಸುಗಳ ಮೇಲೆ 'ಸುವರ್ಣ ಕರ್ನಾಟಕ ಸಾರಿಗೆ' ಎಂಬ ಬರಹ ಬೇರೆ. ಆದರೆ ಒಳಗೆ ಹಿಂದಿ ಸಿನಿಮಾ ಪ್ರದರ್ಶನ. ಇಂಥ ದುಬಾರಿ ಬಸ್ಸಿನಲ್ಲಿ ಪ್ರಯಾಣ ಮಾಡುವವರಿಗೆ ಕನ್ನಡ ಸಿನಿಮಾ ತೋರಿಸುವುದು ಸಮಂಜಸವಲ್ಲ, ಅವರ ಘನತೆಗೆ ಕುಂದು ಎಂದು ಸಾರಿಗೆ ಸಂಸ್ಥೆಯ ಭಾವನೆಯೇನೋ. ಬಸ್ ಡ್ರೈವರ್‌ನನ್ನು ಕೇಳಲೇ ಎಂದುಕೊಂಡೆ. ಆದರೆ ಎಲ್ಲ ಕನ್ನಡಗರಿಗಿರುವ ಹಿಂಜರಿತವೋ ಪಾಲುಮಾರಿಕೆಯೋ, ಇಳಿಯುವಾಗ ಕೇಳೋಣ ಎಂದು ಸುಮ್ಮನಾದೆ. ಇಳಿಯುವಾಗಲೂ ಕೇಳಲಿಲ್ಲ. ಆದರೆ ಪ್ರಶ್ನೆ ಮಾತ್ರ ಈಗಲೂ ಕೊರೆಯುತ್ತಿದೆ: ಕರ್ನಾಟಕ ಸರ್ಕಾರದ ಬಸ್ಸಿನಲ್ಲೇ ಹೀಗಾದರೆ ಗತಿಯೇನು ಎಂದು.

ಆಮೇಲೆ 'ಸುವರ್ಣ ಕರ್ನಾಟಕ ಸಂಭ್ರಮ' ಎಂಬ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದೆ, ಭಾಷಣಕಾರನಾಗಿ. ಎಂದಿನಂತೆ ನಮ್ಮ ಪರಿಸ್ಥಿತಿಯ ಬಗ್ಗೆ

ಮಾತನಾಡಿದೆ, ಆವೇಶದಿಂದ. ಕೆಲವು ದಿನಗಳ ಹಿಂದೆ ಕನ್ನಡದ ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ಭಾರತೀಯ ರೈಲ್ವೆ ಇಲಾಖೆಯ ದೊಡ್ಡ ಹಿಂದಿ ಜಾಹೀರಾತು ನನ್ನ ಮನಸ್ಸಿನಲ್ಲಿ ಕುದಿಯುತ್ತಿತ್ತು. ರೈಲ್ವೆ ಕೇಂದ್ರ ಸರ್ಕಾರದ ವ್ಯಾಪ್ತಿಯದು. ಅದರ ಮಂತ್ರಿ ಲಾಲೂ ಪ್ರಸಾದ್ ಯಾದವ್. ಅದಕ್ಕೇ ಇಂಡಿಯಾದ ಎಲ್ಲರೂ ಹಿಂದಿಯನ್ನು ಓದಬೇಕು ಅಂಬ ನಿರೀಕ್ಷೆಯಿಂದ ಕನ್ನಡ ಪತ್ರಿಕೆಯಲ್ಲೂ ಹಿಂದಿಯಲ್ಲೇ ಜನರಿಗೆ ತಿಳಿಸಬೇಕಾದ ವಿಷಯದ ಜಾಹೀರಾತು ಹಾಕಿಸಿದ್ದಾರೆ ಎಂದು ಕಿಡಿಕಾರಿ, ಹಿಂದಿ ರಾಷ್ಟ್ರಭಾಷೆ ಎಂಬ ಸುಳ್ಳನ್ನು ಸಾಧಾರವಾಗಿ ವಿವರಿಸಿ ನಮಗೆ ಸಂಭ್ರಮ ಎಲ್ಲಿಯದು ಎಂದು ಪ್ರಶ್ನಿಸಿದೆ.

ಒಂದು ಬೆಳಿಗ್ಗೆ. ಏನೋ ಬರೆಯುತ್ತ ಕುಳಿತಿದ್ದೆ. ಫೋನ್ ಧ್ವನಿಸಿತು; ಹೋಗಿ ತೆಗೆದುಕೊಂಡೆ. ಯಾರೋ ನನ್ನ ಮಗನ ಬಗ್ಗೆ ವಿಚಾರಿಸಿದರು, ಹಿಂದಿಯಲ್ಲಿ. ನಾನು 'ಯಾರು ಮಾತಾಡ್ತಾ ಇರೊದು' ಅಂತ ಕನ್ನಡದಲ್ಲಿ ಕೇಳಿದೆ. ಆ ಹೆಣ್ಣು ಧ್ವನಿ ಯಾವುದೋ ಕಂಪೆನಿಯ ಕಸ್ಟಮರ್ ಕೇರ್ ವಿಭಾಗದಿಂದ ಎಂದು ಉತ್ತರಿಸಿತು, ಶುದ್ಧ ಕನ್ನಡದಲ್ಲಿ. ನನ್ನ ಕೋಪ ನೆತ್ತಿಗೇರಿತು. 'ಕನ್ನಡದಲ್ಲಿ ಮಾತಾಡಕ್ಕಾಗಲ್ವೇನ್ರೀ' ಅಂತ ಜೋರಾಗಿ ಕೂಗಿ, ಬೈದು ಫೋನ್ ಕುಕ್ಕಿದೆ. ಬೆಂಗಳೂರಿನ ಗ್ರಾಹಕರ ಜೊತೆ ಮೊದಲು ಹಿಂದಿಯಲ್ಲಿ ಮಾತನಾಡಿ, ಅದಕ್ಕೆ ಉತ್ತರ ಸಿಕ್ಕದಿದ್ದರೆ ಇಂಗ್ಲಿಷಿನಲ್ಲೋ ಆಮೇಲೆ ಕನ್ನಡದಲ್ಲೋ ಮಾತನಾಡುವ ಪರಿಪಾಟ ಈ ಕಂಪೆನಿಗಳದ್ದೇನೋ ಎಂದು ಸಿಡಿಮಿಡಿಗೊಂಡೆ. ಕನ್ನಡ ಚೆನ್ನಾಗಿ ಬಲ್ಲ ಈ ನೌಕರರೂ, ಕನ್ನಡ ತಮ್ಮ ಮಾತೃ ಭಾಷೆಯೇ ಆಗಿದ್ದರೂ, ಗ್ರಾಹಕರನ್ನು ಇಂಗ್ಲಿಷಿನಲ್ಲೋ ಹಿಂದಿಯಲ್ಲೋ ವಿಚಾರಿಸಿ ಕೊಳ್ಳುವ ಪಾಡು ಬಂತೇ ಎಂದು ಬೇಸರವಾಯಿತು. ಅಥವಾ ಹಾಗೇನಾದರೂ ಅವರಿಗೆ ಸೂಚನೆಯಿದೆಯೋ ಎಂದೂ ಅನ್ನಿಸಿತು. ಲಾಲೂ ಪ್ರಸಾದ ಯಾದವರೇ ಎಲ್ಲ!

ನಿನ್ನೆ ಯಾವುದೋ ಕೆಲಸಕ್ಕಾಗಿ ದೊಮ್ಮಲೂರಿಗೆ ಹೋಗಿದ್ದೆ. ವಾಪಸು ಬರುವಾಗ ಸಂಜೆಯಾಗಿತ್ತು. ಕಚೇರಿಗಳು ಬಿಡುವ ಹೊತ್ತು, ಬಸ್ಸುಗಳಲ್ಲಿ ವಿಪರೀತ ಸಂದಣಿ. ನಗರ ಸಾರಿಗೆ ಬಸ್ಸುಗಳೆಲ್ಲ ಭರ್ತಿ. ಕೊನೆಗೆ ಮಾರ್ಕೆಟ್ ಕಡೆಗೆ ಹೊಗುವ ಖಾಸಗೀ ಬಸ್ಸೊಂದನ್ನೇರಿದೆ. ಅದರಲ್ಲಿ ಹೆಚ್ಚು ಜನರಿರಲಿಲ್ಲ, ಸದ್ಯ ಎಂದು ಉಸಿರುಬಿಡುವಂತಾಯತು. ಆದರೆ ಹತ್ತುವಾಗ ಜೋರಾದ ಸಂಭಾಷಣೆ ಕೇಳಿಸಿತು. ನೋಡಿದರೆ ಸೀಟುಗಳ ಮುಂಭಾಗದಲ್ಲಿ ಎರಡೂ ತುದಿಗಳಲ್ಲಿ ಟಿವಿ ಅಳವಡಿಸಿದ್ದರು; ಎಡರಲ್ಲೂ ಒಂದೇ ಸಿನಿಮಾ ವಿಡಿಯೋ ತೋರಿಸುತ್ತಿದ್ದರು, ತಮಿಳಿನದು! ನನಗೆ ಆಘಾತವಾಯಿತು. ಬೆಂಗಳೂರಿನ ಬಸ್ಸಿನಲ್ಲಿ ಆ ಭಾಷೆಯ ಸಿನಿಮಾ. ಬಸ್ಸು ಇಲ್ಲಿನದೇ; ಕಂಡಕ್ಟರ್ ಕನ್ನಡದಲ್ಲೂ ಮಾತನಾಡುವವನು. 'ಸುಸ್ವಾಗತ' ಎಂಬ ಬರವಣಿಗೆ ಕನ್ನಡದಲ್ಲಿ ಆದರೆ ಹೀಗೆ. ಅದರಲ್ಲಿ ಪ್ರಯಾಣಿಸುವವರಲ್ಲಿ ತಮಿಳು ಮಾತೃಭಾಷೆಯವರು ಹೆಚ್ಚೇನೋ, ಅದಕ್ಕೇ ಹೀಗಿರಬಹುದೇ? ನಾವೇನೋ ಕನ್ನಡ

ನಾಡಿನಲ್ಲಿರುವವರೆಲ್ಲ ಕನ್ನಡಿಗರೇ ಎನ್ನುತ್ತಿರುತ್ತೇವೆ; ಆದರೆ ಅವರು ಕನ್ನಡ ಬರದ, ಬೇಕಿಲ್ಲದವರು; ಇಲ್ಲಿಯ ಸವಲತ್ತು ಪಡೆಯಲು ಕನ್ನಡಿಗರು!

ಎಷ್ಟೋ ಸಲ ನಮ್ಮ ಸಾರಿಗೆ ನೌಕರರ ಸಭೆಯಲ್ಲಿ ನಾನು ಹೇಳಿದ್ದುಂಟು; ನಿಮ್ಮ ಬಸ್ಸು ಏರುವವರ ಜೊತೆಯಲ್ಲಿ ಕನ್ನಡದಲ್ಲಿಯೇ ಮಾತನಾಡಿ; ಹಾಗಾದರೂ ಹೊರಗಿನಿಂದ ಬರುವವರು ಕನ್ನಡ ಕಲಿಯುವ ಹಾಗೆ ಆದೀತು ಎಂದು. ಆದರೆ ನಮ್ಮವರು ಬಂದವರ ಜೊತೆ ಅವರದೇ ಭಾಷೆಯಲ್ಲಿ ಮಾತನಾಡುವ ಚಟ ದವರಲ್ಲವೇ; ಈ ರೋಗಕ್ಕೆ ಪರಿಹಾರ ಹೇಗೆ ಎಂಬ ಚಿಂತೆ ನ್ನನ್ನು ಸದಾ ಕಾಡುತ್ತದೆ. ಬಂದವರೆಲ್ಲ ದಾಷ್ಟೀಕತನದಿಂದ ತಮ್ಮ ತಮ್ಮ ಭಾಷೆಯಲ್ಲೇ ಮಾತನಾಡುತ್ತಾರೆ. ನನ್ನ ಜೊತೆ ತಮ್ಮ ಭಾಷೆಯಲ್ಲಿ ಪ್ರಶ್ನೆ ಕೇಳಿದವರ ಮೇಲೆ ನಾನೆಷ್ಟೋ ಸಲ ಅಚ್ಚಗನ್ನಡದಲ್ಲಿ ರೇಗಿದ್ದೇನೆ. ನಾನೇ ದೆಹಲಿಗೆ ಹಿಂದೊಮ್ಮೆ ಹೋಗಿದ್ದಾಗ, ವಿಷಯ ಗೊತ್ತಿದ್ದರೂ, ಇಂಗ್ಲಿಷಿನಲ್ಲಿ ಯಾರನ್ನೋ ಏನೋ ಕೇಳಿದ್ದೆ; ಆಗ ಅವನು ನೀಡಬೇಕಾದ ಮಾಹಿತಿಗೆ ವಿರುದ್ಧವಾದುದನ್ನೇ ಹೇಳಿದ. ನಾನು ದಕ್ಷಿಣದವನೆಂಬ ಕಾರಣಕ್ಕಾಗಿ. ಹೀಗಿರಬೇಕಾದರೆ, ನಾವು ಮಾತ್ರ ಉದಾರವಾಗಿರಬೇಕೇ ಎಂಬ ಪ್ರಶ್ನೆ ನನ್ನನ್ನು ಕಾಡುತ್ತದೆ. ನಮ್ಮ ಅನೇಕ ಬುದ್ಧಿಜೀವಿಗಳು ಬೇರೆಯವರನ್ನು ಟೀಕಿಸಿದರೆ ಔದಾರ್ಯದ ಬಗ್ಗೆ ಕೊರೆಯುತ್ತಾರೆ; ನಮ್ಮ ಜನ ಅನ್ಯಭಾಷಾವ್ಯಾಮೋಹದ ಜ್ವರದಲ್ಲಿ ಬೇಯುತ್ತಿದ್ದಾರೆ. ಇನ್ನು ಕನ್ನಡ ಸಂಭ್ರಮಿಸುವ ಪರಿಯೆಂತು? “ಹೆಳವನ ಮೇಲೆ ಕುರುಡ ಕೂತಿದ್ದಾನೆ, ದಾರಿ ಸಾಗುವುದೆಂತೋ ನೋಡಬೇಕು” ಎಂಬ ನಿರಾಶೆ ಆವರಿಸುತ್ತದೆ.

☆ - ☆ - ☆

# ರಾಷ್ಟ್ರಹಿತದ ಅತಿರೇಕ

ಕಂದಸಾಮಿ ಸಿಂಗ್ ಎಂಬ ಮಹನೀಯರೊಬ್ಬರು ಭಾರತದ ಸುಪ್ರೀಂ ಕೋರ್ಟಿನಲ್ಲಿ ಅಪೀಲೊಂದನ್ನು ದಾಖಲಿಸಿದ್ದು, ರಾಜ್ಯವ್ಯಾಪಿ ಹಾಗೂ ಪ್ರಾದೇಶಿಕ ರಾಜಕೀಯ ಪಕ್ಷಗಳು ತಮ್ಮ ಸದಸ್ಯರನ್ನು ಪಾರ್ಲಿಮೆಂಟಿಗೆ ಅಭ್ಯರ್ಥಿಗಳನ್ನಾಗಿ ನಿಲ್ಲಿಸುವುದನ್ನು ಬಹಿಷ್ಕರಿಸಲು ಚುನಾವಣಾ ಆಯೋಗಕ್ಕೆ ಆದೇಶ ನೀಡಬೇಕೆಂದು ಕೇಳಿಕೊಂಡಿದ್ದಾರೆ. ಹಿಂದೆ ಇದೇ ಅಪೀಲುದಾರರು ಮಾಡಿದ್ದ ಅರ್ಜಿಯನ್ನು ಸುಪ್ರೀಂ ಕೋರ್ಟ್ ಇದೇ ವರ್ಷದ ಮೇ ಏಳನೇ ತಾರೀಕಿನ ತನ್ನ ತೀರ್ಪಿನಲ್ಲಿ ತಿರಸ್ಕರಿಸಿದ್ದರೂ ಮತ್ತೆ ಮರುಪರಿಶೀಲನಾ ಅರ್ಜಿಯನ್ನು ಅವರು ಸಲ್ಲಿಸಿದ್ದಾರೆ.

ತಮ್ಮ ಬೇಡಿಕೆಗೆ ಸಮರ್ಥನೆಯಾಗಿ ಕಂದಸಾಮಿ ಸಿಂಗ್ ನೀಡಿರುವ ಕಾರಣ ಇದು: ರಾಜ್ಯ ಅಥವಾ ಪ್ರಾದೇಶಿಕ ಪಕ್ಷಗಳ ಮೂಲಕ ಸದಸ್ಯರಾದವರು ಸದನದಲ್ಲಿ ತಮ್ಮ ಪ್ರದೇಶಗಳ ಹಿತದ ಬಗ್ಗೆಯೇ ಪ್ರಸ್ತಾಪ ಮಾಡುತ್ತ ಕಾಲಹರಣ ಮಾಡುತ್ತಾರೆ, ಹೀಗಾಗಿ ರಾಷ್ಟ್ರೀಯ ಸಮಸ್ಯೆಗಳ ಚರ್ಚೆಗೆ ಸಮಯ ಸಾಲುವುದಿಲ್ಲ ಎಂಬುದು. ಅವರು ಇದಕ್ಕೆ ಇನ್ನೊಂದು ಅಂಶವನ್ನೂ ಸೇರಿಸಬಹುದಾಗಿತ್ತು ಎಂಬುದು ನನ್ನ ತಿಳಿವಳಿಕೆ. ಅದೆಂದರೆ, ವಿವಿಧ ರಾಜ್ಯಗಳಿಂದ ಆಯ್ಕೆಯಾಗಿ ಬರುವ ಸದಸ್ಯರಿಗೆ ಒಟ್ಟು ರಾಷ್ಟ್ರದ ಪರಿಕಲ್ಪನೆ ಇರುವುದು ಸಾಧ್ಯವಿಲ್ಲ, ಅವರು ರಾಷ್ಟ್ರವನ್ನು ಪ್ರತಿನಿಧಿಸದಿರುವುದೇ ಇದಕ್ಕೆ ಕಾರಣ. ಹೀಗಾಗಿ ರಾಷ್ಟ್ರದ ಸಂಸತ್ತಿಗೆ ಸದಸ್ಯರಾಗಿ ಆಯ್ಕೆಯಾಗಿ ಬರುವವರು ಯಾವುದೇ ರಾಜ್ಯಕ್ಕೆ ಸೇರಿರಬಾರದು, ಅವರು 'ಭಾರತ' ರಾಷ್ಟ್ರದ ಪ್ರಜೆ ಮಾತ್ರ ಆಗಿರಬೇಕು ಎಂಬ ನಿಯಮವನ್ನೂ ಚುನಾವಣಾ ಆಯೋಗ ಜಾರಿಗೆ ತರಬೇಕು ಎಂಬುದು!

ಸುಪ್ರೀಂ ಕೋರ್ಟ್ ಅರ್ಜಿಯನ್ನು ಮತ್ತೆ ಮರುಪರಿಶೀಲನೆಗೆ ತೆಗೆದುಕೊಂಡಿರುವುದು ಅಚ್ಚರಿ ಹುಟ್ಟಿಸುತ್ತದೆ. ಅದರ ಬಗ್ಗೆ ಮತ್ತೆ ವಾದಗಳನ್ನು ಕೇಳುವುದು ಸಮಯದ ವ್ಯರ್ಥ ಎಂದು ಅರ್ಜಿಯನ್ನು ವಿಚಾರಿಸುವ ಮೂವರು ನ್ಯಾಯಮೂರ್ತಿಗಳಿಗೆ ಅನ್ನಿಸದಿದ್ದುದು ಈ ಅಚ್ಚರಿಗೆ ಕಾರಣ. ರಾಷ್ಟ್ರ ಎಂಬುದರ ಸ್ವರೂಪವೇನು ಎಂಬುದು ಸಾಮಾನ್ಯ ತಿಳಿವಳಿಕೆಯ ವಿಷಯ. ಭಾರತ ಒಂದು ರಾಷ್ಟ್ರ ಎಂಬ ಕಲ್ಪನೆಯಲ್ಲಿ ಅದರಲ್ಲಿ ಅಡಕವಾಗಿರುವ ವಿವಿಧ ರಾಜ್ಯಗಳು

ಸೇರ್ಪಡೆಯಾಗಿಲ್ಲವೇ? ಕರ್ನಾಟಕ, ಅಸ್ಸಾಂ, ಬಂಗಾಳ, ಮಹಾರಾಷ್ಟ್ರ ಮುಂತಾದ ರಾಜ್ಯಗಳನ್ನು ಹೊರತುಪಡಿಸುತ್ತ ಹೋದರೆ ಭಾರತ ಎಲ್ಲಿ ಉಳಿಯುತ್ತದೆ? ದೇವರನ್ನು ಈರುಳ್ಳಿಗೆ ಕೆಲವರು ಹೋಲಿಸುತ್ತಾರೆ; ಬರಿ ಸಿಪ್ಪೆ ಎಂದು ಅದರ ಪದರಗಳನ್ನು ತೆಗೆಯುತ್ತ ಹೋದರೆ ಉಳಿಯುವುದೇನು, ಏನೂ ಇಲ್ಲ; ಹಾಗೆಯೇ ದೇವರು ಎಂದು. ರಾಷ್ಟ್ರ ಎಂಬುದೂ ಇದೇ ರೀತಿಯದಲ್ಲವೇ? ಭಾರತ ಎಂಬುದೊಂದು ಈರುಳ್ಳಿ! ರಾಷ್ಟ್ರದಲ್ಲಿ ಸೇರ್ಪಡೆಯಾದ ಎಲ್ಲ ರಾಜ್ಯಗಳನ್ನೂ ಹೊರತು ಪಡಿಸಿ ಭಾರತವನ್ನು ಹೇಗೆ ಬೇಕಾದರೂ ಆಳಿಕೊಳ್ಳಲಿ, ಬೇಡವೆಂದವರಾರು? ನಮಗೂ ಈ ರಾಷ್ಟ್ರಾತಿರೇಕಿಗಳಿಂದ ಬಿಡುಗಡೆ ದೊರೆಯುತ್ತದೆ, ಆಗ ನಾವು ರಾಷ್ಟ್ರದ ಹೊರೆಯಿಲ್ಲದೆ ಹಾಯಾಗಿ ಬದುಕಬಹುದು!

ಈ ಸಿಂಗ್ ಮಹನೀಯ ಸುಪ್ರೀಂ ಕೋರ್ಟಿಗೆ ಸಲ್ಲಿಸಿರುವ ತನ್ನ ಅರ್ಜಿಯಲ್ಲಿ ಈಗಿನದರ ಜೊತೆಗೆ ಇನ್ನೂ ಎರಡು ಬೇಡಿಕೆಗಳನ್ನು ಸೇರಿಸಬಹುದಿತ್ತು. ಅವುಗಳಲ್ಲಿ ಮೊದಲನೆಯದು, ರಾಜ್ಯ ಶಾಸನಸಭೆಗಳಿಗೆ ಕೇವಲ ರಾಜ್ಯ ಅಥವಾ ಪ್ರಾದೇಶಿಕ ಪಕ್ಷಗಳ ಸದಸ್ಯರು ಮಾತ್ರ ಸ್ಪರ್ಧಿಸಬೇಕು, ರಾಷ್ಟ್ರ ಪಕ್ಷಗಳು ಸ್ಪರ್ಧಿಸಬಾರದು ಎಂಬುದು. ಏಕೆಂದರೆ ಕಂದಸಾಮಿ ಸಿಂಗ್ ವಾದದಂತೆ ರಾಜ್ಯವ್ಯಾಪಿ ಪಕ್ಷಗಳ ಸದಸ್ಯರು ರಾಜ್ಯದ ಹಿತದೃಷ್ಟಿಯಿಂದ ವಾದಮಾಡುತ್ತಾರೆ, ಅವರೇ ರಾಜ್ಯ ಸದನದಲ್ಲಿ ಕುಳಿತುಕೊಳ್ಳಲು ಅರ್ಹರು. ರಾಷ್ಟ್ರ ಪಕ್ಷಗಳನ್ನು ಪ್ರತಿನಿಧಿಸುವವರು ರಾಷ್ಟ್ರಹಿತದ ಭಾರಿ ವಿಶಾಲ ವ್ಯಾಪ್ತಿಯ ಮಾತುಗಳನ್ನಾಡುವವರು, ಅಂದರೆ ಅವರ ಹಿತಾಸಕ್ತಿಗಳು ತಮ್ಮ ರಾಜ್ಯದ ವ್ಯಾಪ್ತಿಯನ್ನೂ ಮೀರುವಂಥದು. ಜೊತೆಗೆ ಅವರಿಗೆ ರಾಷ್ಟ್ರೀಯತೆಯ ಅಮಲಿನಲ್ಲಿ ರಾಜ್ಯದ ಹಿತ ಕಣ್ಣಿಗೆ ಕಾಣುವುದಿಲ್ಲ. ಹೀಗಾಗಿ ರಾಷ್ಟ್ರ ಪಕ್ಷಗಳನ್ನು ರಾಜ್ಯಗಳಿಂದ ಬಹಿಷ್ಕರಿಸಬೇಕು ಎಂಬುದು. ಇನ್ನೊಂದು ಅಂಶವನ್ನೂ ಅವರು ಪರಿಶೀಲಿಸಬಹುದು: ರಾಜ್ಯದಲ್ಲಿಯೂ ಬೇರೆ ಬೇರೆ ಪ್ರದೇಶಗಳಿವೆ, ಅಥವಾ ಜಿಲ್ಲೆಗಳಿವೆ. ಜಿಲ್ಲೆಗಳಿಂದ ಬಂದ ಸದಸ್ಯರು ತಮ್ಮ ತಮ್ಮ ಜಿಲ್ಲೆಗಳ ಹಿತದ ಬಗ್ಗೆ ಚರ್ಚೆ ಮಾಡಿ ವ್ಯರ್ಥವಾಗಿ ಕಾಲ ಕಳೆಯುತ್ತಾರೆ, ಹಾಗಾಗಿ ಯಾವ ಜಿಲ್ಲೆಯಿಂದಲೂ ಶಾಸನಸಭೆಗೆ ಪ್ರತಿನಿಧಿಯು ಆಯ್ಕೆಯಾಗಿ ಬರದಂತೆ ತಡೆಗಟ್ಟಬೇಕು ಎಂಬುದು. ಅಲ್ಲದೆ ಶಾಸನಸಭೆಯ ಸದಸ್ಯರು ಎಷ್ಟೋ ಸಲ ತಮ್ಮ ತಮ್ಮ ಊರಿನ ಬಗ್ಗೆ ಮಾತನಾಡುತ್ತಾರೆ; ಅವರಿಗೆ ವಿಶಾಲ ಮನೋಭಾವವೇ ಇಲ್ಲ, ಹಾಗಾಗಿ ಅವರು ಸಣ್ಣ ಸಣ್ಣ ಹಳ್ಳಿ ಅಥವಾ ಊರುಗಳು ಅಥವಾ ಯಾವುದೋ ಒಂದು ವರ್ಗದ ಜನರ ಹಿತ – ಹೀಗೆ ಸಂಕುಚಿತವಾಗಿ ಮಾತನಾಡುತ್ತ ಇಡೀ ರಾಜ್ಯವ್ಯಾಪ್ತಿಯನ್ನು ಮರೆಯುತ್ತಾರೆ; ಅದು ಕಾಲಹರಣವೇ ಹೊರತು ಉಪಯುಕ್ತವಲ್ಲ, ಅಲ್ಲವೇ?

ರಾಷ್ಟ್ರ ಪರಿಕಲ್ಪನೆಯ ಅತಿರೇಕದಿಂದಾಗಿಯೇ ಇಂಥ ಅಸಂಬದ್ಧ ಯೋಚನೆಗಳು ಮೂಡುವುದು. ಎಲ್ಲ ರಾಜ್ಯಗಳನ್ನು ಹೊರತುಪಡಿಸಿದ ಭಾರತ ಅನ್ನುವುದೊಂದು ಇದೆ ಎಂಬ ಬಾಲಿಶ ಕಲ್ಪನೆಯೇ ಇಂಥ ಮೂರ್ಖ ಬೇಡಿಕೆಗಳ ಹಿಂದಿರು

ವುದು. ಜೊತೆಗೆ ಅಧಿಕಾರದ ಭೂತ ಹಿಡಿದ ಜನರೂ ಹೀಗೆ ವಾದಮಾಡಬಹುದು. ವೈಯಕ್ತಿಕವಾಗಲ್ಲದಿದ್ದರೂ ತಾನು ಭಾಗವಾಗಿರುವ ವಲಯದದಲ್ಲಿ ಅಧಿಕಾರವೆಲ್ಲ ಮಡುಗಟ್ಟಿಬಿಟ್ಟರೆ ಅದು ತನ್ನ ಅಧಿಕಾರವೂ ಅಲ್ಲವೇ ಎಂಬ, ಅದರಿಂದ ಉಂಟಾಗುವ ಅಮಲಿನ ಕಲ್ಪನೆ ಹೀಗೆ ವಾದಮಾಡಿಸುತ್ತದೇನೋ. ಪ್ರಾದೇಶಿಕ ಎಂದು ಈಗ ಕರೆಯುತ್ತಿರುವ, ಆದರೆ ನಾನು ನಿಜವಾದ ರಾಷ್ಟ್ರೀಯ ಎಂದು ಭಾವಿಸುವ, ಪಕ್ಷಗಳು ಪ್ರಬಲವಾಗಿರುವ ಕಡೆಯ ಜನರಲ್ಲಿ ಈ ಬಗೆಯ ಆಲೋಚನೆಗಳು ಬರಲು ಸಾಧ್ಯವಿಲ್ಲ. ಯಾವ ಭಾಗದ ಜನರಿಗೆ ಅತಿ ಪ್ರಾಧಾನ್ಯ ಸಿಕ್ಕಿ ತಮ್ಮದೇ ರಾಷ್ಟ್ರ, ತಾವು ಪಡೆದಿರುವುದೇ ರಾಷ್ಟ್ರದ ಲಕ್ಷಣಗಳು ಎಂದು ಭಾವಿಸುವ ಕೂಪಮಂಡೂಕಗಳು ಮಾತ್ರ ಹೀಗೆ ಯೋಚಿಸಿಯಾರು.

ಇದನ್ನು ವರದಿ ಮಾಡಿದ ಇಂಗ್ಲಿಷ್ ಪತ್ರಿಕೆಯೊಂದು, ಸಮ್ಮಿಶ್ರ ಸರ್ಕಾರಗಳ ಕಾಲವಾದ ಈ ಸಂದರ್ಭದಲ್ಲಿ ಈ ವಿಚಾರವು ರಾಜಕೀಯ ವಲಯದಲ್ಲಿ ಭಾರಿ ಅಲ್ಲೋಲಕಲ್ಲೋಲವನ್ನೆಬ್ಬಿಸಬಹುದು ಎಂದು ಷರಾ ಬರೆದಿದೆ. ಕೋರ್ಟು ಇದನ್ನು ಪುರಸ್ಕರಿಸಿಬಿಟ್ಟರೆ ಏನೇನಾಗಬಹುದು ಎಂಬುದು ಈ ವರದಿಗಾರದ ಕಲ್ಪನೆಯಲ್ಲಿ ಅರಳಿದೆ. ಆಗ ನಡೆಯುವ ಕೋಲಾಹಲ ತನ್ನ ವರದಿಗೆ ಎಷ್ಟು ಪುಷ್ಕಳವಾದ ಗ್ರಾಸ ಒದಗಿಸಬಹುದೆಂಬ ವೃತ್ತಿಪರತೆ ಇಂಥ ಊಹೆಗಳನ್ನು ವರದಿಗಾರನಲ್ಲಿ ಕೆರಳಿಸಿದೆ ಯೇನೋ! ರಾಷ್ಟ್ರೀಯತೆಯ ಅತಿರೇಕವು ಸಲ್ಲದ ಅಸಮಾನತೆಗಳನ್ನು ಸೃಷ್ಟಿಸುತ್ತಿದೆ; ಕೆಲವು ಕಡೆಗಳಲ್ಲಿ ಮಾತ್ರ ಶ್ರೇಷ್ಠತೆಯಿದೆ ಎಂಬ ತಪ್ಪು ಗ್ರಹಿಕೆಯನ್ನು ಬಿತ್ತುತ್ತಿದೆ. ಭಾರತ ಎಂಬುದು ಒಂದು ರಾಷ್ಟ್ರವಲ್ಲ, ಅನೇಕ ರಾಷ್ಟ್ರಗಳ ಒಕ್ಕೂಟ ಎಂಬುದು ನನ್ನ ವಾದ. ಭಾರತ ಎಂಬುದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ, ವಿವಿಧ ಭಾಷಿಕ ವಲಯಗಳ ಒಟ್ಟಂದವೇ ಭಾರತ. ಈ ವಾಸ್ತವ ಅರ್ಥವಾಗದಿದ್ದರೆ ಮುಂದೊಂದು ದಿನ ಅದೇ ಇದರ ವಿಘಟನೆಗೆ ಕಾರಣವಾಗಬಹುದು.

☆ – ☆ – ☆

# ಧರ್ಮಸೂಕ್ಷ್ಮಗಳು

ಧರ್ಮಸೂಕ್ಷ್ಮ ಎಂದರೆ ಧರ್ಮದ ಮರ್ಮ ಅಥವಾ ರಹಸ್ಯ ಎಂದು ಅರ್ಥ. ಆದರೆ ಸಾಮಾನ್ಯವಾಗಿ ಅದು ಯಾವ ಕೆಲಸ ಸರಿ ಅಥವಾ ತಪ್ಪು ಎಂಬ ಬಗೆಗಿನ ಸೂಕ್ಷ್ಮ ಜಿಜ್ಞಾಸೆ ಎಂಬ ಅರ್ಥವನ್ನು ಹೊಂದಿದೆ. ದಶರಥನಿಗೋ ಧರ್ಮರಾಯನಿಗೋ ಎದುರಾದಂತಹ ಯಾವುದೇ ಅಗಾಧವಾದ ಧರ್ಮಸೂಕ್ಷ್ಮಗಳ ಬಗ್ಗೆ ನಾನಿಲ್ಲಿ ಪ್ರಸ್ತಾಪಿಸುತ್ತಿಲ್ಲ. ನನ್ನ ಗಮನದಲ್ಲಿರುವುದು ನಮ್ಮಂಥವರು ಈ ಕಲ್ಯಾಣ ನಗರಿಯಲ್ಲಿ ಪ್ರತಿದಿನ ಎದುರಿದುತ್ತಿರುವ ಸಾಮಾನ್ಯ ಧರ್ಮಸೂಕ್ಷ್ಮಗಳನ್ನು ಕುರಿತು, ನಡೆಯುತ್ತಿರುವವುಗಳಲ್ಲಿ ಯಾವುದು ಸರಿ ಯಾವುದು ತಪ್ಪು ಎಂದು ಸರಿಯಾಗಿ ತಿಳಿಯದ ಗೊಂದಲವನ್ನು ಕುರಿತು.

ಕೆಲವು ಕಡೆಗಳಲ್ಲಿ ಫುಟ್‌ಪಾತ್‌ಗಳನ್ನು ದುರಸ್ತಿ ಮಾಡಲಾಗುತ್ತಿದೆ. ರಸ್ತೆಗಿಂತ ಸ್ವಲ್ಪ ಎತ್ತರದಲ್ಲಿ ಕಾಂಕ್ರೀಟ್ ಹಾಕಿ ಓಡಾಡಲು ಸರಾಗವಾಗುವಂತೆ ಏರ್ಪಾಡು ಮಾಡುತ್ತಿದ್ದಾರೆ. ಕೆಲವು ಕಡೆ ಅವುಗಳ ಅಗಲ ಕಿರಿದಾದರೂ ಎಡವದೆ ನಡೆಯಲು ಅನುಕೂಲವಾಗುವ ಬಗೆಯಲ್ಲಿ ರಿಪೇರಿ ಕೆಲಸ ನಡೆದಿದೆ. ಮಳೆ ಕೈಕೊಟ್ಟಿದ್ದರೂ, ಭಾರಿ ಮಳೆ ಸುರಿದರೆ ನೀರು ಸರಾಗವಾಗಿ ಹರಿದುಹೋಗಲಿ ಎಂದು ಮೋರಿಗಳ ಕಸವನ್ನು ತೆಗೆಸುವ ಕೆಲಸ ಹಲವಾರು ಕಡೆಗಳಲ್ಲಿ ಭರದಿಂದ ಸಾಗಿದೆ. ಚಿಕ್ಕ ರಸ್ತೆಗಳ ಪಕ್ಕದ ಅಂತಹ ಮೋರಿಗಳ ಮೇಲೆ ಮಟ್ಟಸವಾದ ಚಪ್ಪಡಿಗಳನ್ನು ಹಾಸಿ ಪಾದಚಾರಿಗಳು ನಡೆಯಲು ಅನುಕೂಲಮಾಡಿಕೊಡಲಾಗುತ್ತಿದೆ. ಭ್ರಷ್ಟಾಚಾರಾರೋಪಗಳ ನಡುವೆಯೂ ಕಪ್ಪು ಮೋಡದಂಚಿನ ಬೆಳ್ಳಿ ರೇಖೆಯಂತಹ ಈ ಕೆಲಸ ಸ್ವಲ್ಪ ಸಮಾಧಾನವುಂಟುಮಾಡುವಂತಹುದು.

ನಮ್ಮ ಮನೆಯ ಸುತ್ತುಮುತ್ತಲೂ ಇಂತಹ ಕೆಲಸಗಳು ಆಗುತ್ತಿರುವಾಗ ನಾನು ಎಂತಹ ಒಳ್ಳೆಯ ಬೆಳವಣಿಗೆ ಎಂದು ಸಂತಸಪಟ್ಟಿದ್ದೆ. ಸರ್ರೆಂದು ಪಕ್ಕದಲ್ಲಿ ಓಡಿಬರುವ ವಾಹನದ ಗಾಬರಿಯಿಲ್ಲದೆ, ಅಥವಾ ಉಬ್ಬುತಗ್ಗುಗಳಿರುವ ಫುಟ್‌ಪಾತ್‌ಗಳ ಮೇಲೆ ಎಡವುತ್ತ ನಡೆಯುವ ಬದಲು ಸಪಾಟಾದ ಅವುಗಳ ಮೇಲೆ ಓಡಾಡುವುದು ಎಷ್ಟು ಸುಲಭ ಎಂಬ ಸಂತೋಷ! ಆದರೆ ಅವುಗಳು ಸಿದ್ಧವಾದ ಮೇಲೆ ನಡೆಯುವುದೆಲ್ಲಿಂದ ಬಂತು? ಅಡ್ಡಡ್ಡಲಾಗಿ ಕಾರುಗಳು ಸ್ಕೂಟರುಗಳನ್ನು ನಿಲ್ಲಿಸಿದರೆ

ಪಾದಚಾರಿಗಳು ಓಡಾಡುವುದೆಂತು? ಹಳೆಯ ಆತಂಕವನ್ನು ಹೊತ್ತು ರಸ್ತೆಗಿಳಿಯಲೇ ಬೇಕಾದ ಪರಿಸ್ಥಿತಿ. ಬ್ಯಾಂಕುಗಳು ವಾಹನ ಕೊಳ್ಳುವ ಸಾಲಗಳನ್ನು ಸುಲಭವಾಗಿ ನೀಡುತ್ತಿರುವುದರಿಂದ, ಪಾಪ, ಮಧ್ಯಮವರ್ಗದವರು ಕಾರುಗಳನ್ನು ಸ್ಕೂಟರುಗಳನ್ನು ಕೊಂಡರೆ ಅವುಗಳನ್ನೆಲ್ಲಿ ನಿಲ್ಲಿಸಬೇಕು? ಮನೆಗಳಲ್ಲಿ ಜಾಗವಿಲ್ಲ, ಮನೆಯ ಎದುರುಗಡೆ ಇದುವರೆಗೆ ಮಟ್ಟಸವಾದ ಜಾಗವಿರಲಿಲ್ಲ; ಈಗಾದರೆ ಫುಟ್‌ಪಾತ್‌ಗಳು ವಾಹನ ನಿಲ್ಲಿಸಲು ಫಿಟ್‌ಪಾತ್‌ಗಳಾಗಿವೆ. ಕೆಲವು ಕಡೆಗಳಲ್ಲಿ ಫುಟ್‌ಪಾತ್‌ಗಳು ಸ್ವಲ್ಪ ಅಗಲವಾಗಿದ್ದರೆ ಅವುಗಳ ಮೇಲೆ ಸಣ್ಣಪುಟ್ಟ ವ್ಯಾಪಾರಿಗಳು ತಮ್ಮ ಮಕ್ಕರಿ ಗಳನ್ನಿಟ್ಟುಕೊಂಡೋ, ಇಲ್ಲ ತಿಂಡಿಗಾಡಿಗಳನ್ನು ನಿಲ್ಲಿಸಿಯೋ ವ್ಯಾಪಾರ ಮಾಡುತಿರು ತ್ತಾರೆ. ಅವರ ಮಟ್ಟದ ಗ್ರಾಹಕರು ಅವುಗಳ ಮುಂದೆಯೇ ನಿಂತೋ ಬಗ್ಗಿಯೋ ವ್ಯಾಪಾರ ಮುಂದುವರೆಸುತ್ತಾರೆ. ದರ್ಶಿನಿಗಳ ಮುಂದಿನ ಫುಟ್‌ಪಾತ್‌ಗಳನ್ನು ಆಕ್ರಮಿಸಿಕೊಂಡು ವಿದ್ಯಾವಂತ ಜನ ತಿಂಡಿ ತಿನ್ನಬೇಕಾದರೆ ಈ ಸಣ್ಣಮಟ್ಟದ್ದಕ್ಕೆಲ್ಲ ಅಭ್ಯಂತರ ತೆಗೆಯುವುದೇ?

ಅಥವಾ ಗ್ರಾಹಕರು ರಸ್ತೆಗಳಲ್ಲಿ ಸಾಗುವವರಿಗೆಂದೇ ನಗರಪಾಲಿಕೆ ಫುಟ್ ಪಾತ್‌ಗಳನ್ನು ಸರಿಪಡಿಸುತ್ತದೆ ಎಂದು ಹೇಳಿದವರು ಯಾರು? ಮಧ್ಯಮವರ್ಗದವರ ಆಸೆಗೆ ಒತ್ತಾಸೆಯಾಗಲೂ ಯಾಕಿರಬಾರದು? ಅಥವಾ ಸಣ್ಣಪುಟ್ಟ ವ್ಯಾಪಾರಿಗಳಿಗೆ ಅನುಕೂಲವಾಗಲೆಂಬ ಸದುದ್ದೇಶದಿಂದ ಯಾಕರಬಾರದು? ದಿನವಿಡೀ ಹೀಗೆ ವಾಹನಗಳನ್ನು ನಿಲ್ಲಿಸಿದರೆ ಪಾದಚಾರಿಗಳಿಗೆ ತೊಂದರೆಯಾದರೇನು ಮಾಡ ಲಾದೀತು? ಅಥವಾ ವ್ಯಾಪಾರಿಗಳು ಕೂಡ ಅವರ ಅನುಕೂಲಕ್ಕೆ ತಾನೇ ಮನೆಯ ಬಳಿಯೇ ಹೀಗೆ ವ್ಯಾಪಾರ ನಡೆಸುವುದು? ಅಲ್ಲದೆ, ಆ ವ್ಯಾಪಾರಿಗಳು ಈ ದುಬಾರಿ ದಿನಗಳಲ್ಲಿ ಮಳಿಗೆಗಳನ್ನು ಹಿಡಿದು, ವಿದ್ಯುತ್ ಬಿಲ್ಲು ಕಟ್ಟಿ ವ್ಯಾಪಾರ ನಡೆಸಲು ಬಂಡವಾಳವನ್ನೆಲ್ಲಿಂದ ತರಬೇಕು? ಇಂಥವರಿಗೆ ಅನುಕೂಲವಾಗಲೆಂದು ತಾನೇ ನಗರಪಾಲಿಕೆ ರಿಪೇರಿ ಮಾಡಿಸುವುದು? ಓಡಾಡುವವರು ಹೇಗೋ ದಾರಿ ಮಾಡಿಕೊಂಡು ಓಡಾಡಿಯೇ ತೀರುತ್ತಾರೆ; ಅಥವಾ ಅವರಿಗೆ ಅನುಕೂಲವಾಗಲೆಂದು ಇವರು ವಾಹನಗಳನ್ನು ಕೊಳ್ಳುವುದನ್ನು ನಿಲ್ಲಿಸುವುದನ್ನು ಅಥವಾ ವ್ಯಾಪಾರ ಮಾಡುವುದನ್ನು ಬಿಡಬೇಕೆ? ಓಡಾಟ ಅನವಶ್ಯಕವಾದುದಾದರೆ ಓಡಾಟವನ್ನೇ ನಿಲ್ಲಿಸುತ್ತಾರೆ. ಇಷ್ಟು ಮುಂದುವರಿದ ಕಾಲದಲ್ಲಿ ಅವರು ನಡೆದೇಕೆ ನಡೆಯಬೇಕು, ಅವರೂ ವಾಹನವೊಂದನ್ನು ಖರೀದಿಸಿಲಿ, ಅವರ ಮನೆಯ ಮುಂದಿನ ಫುಟ್ಪಪಾತ್‌ಗಳ ಮೇಲೆಯೇ ನಿಲ್ಲಿಸಲಿ!

ಹೀಗೆಯೇ ರಸ್ತೆಬದಿಗಳಲ್ಲಿ ವಿಸರ್ಜನಕ್ರಿಯೆ ನಡೆಸುವುದು. ವಾಹನಗಳು ಎಷ್ಟೇ ಹೆಚ್ಚಾಗಲೀ ಪಾದಚಾರಿಗಳ ಸಂಖ್ಯೆ ದೊಡ್ಡದಾಗಿಯೇ ಇದೆ. ಅದರ ಜೊತೆಗೆ ಅವಸರದಿಂದ ಮನೆ ಬಿಟ್ಟ ಕೆಲವು ವಾಹನ ಚಾಲಕರು ಕೂಡ ದಾರಿ ಮಧ್ಯದಲ್ಲಿಯೇ ಪ್ರಕೃತಿಯು ಕರೆದರೆ ಅದಕ್ಕುತ್ತರಿಸಬಾರದೇ? ಒಂದು ಕ್ಷಣ ವಾಹನ ನಿಲ್ಲಿಸಿ

ನಿರಾಳವಾದರೆ ಆಯಿತು. ದಾರಿಯಲ್ಲಿ ಸಾಗುವವರು ಏನು ಮಹಾ ಇದರಿಂದ ಕಷ್ಟ ಅನುಭವಿಸುವುದು? ಸಾಗುವಾಗ ಮೂಗು ಮುಚ್ಚಿಕೊಂಡರೆ ಆಯಿತು. ದೇವಸ್ಥಾನಗಳ ಬದಿಯಲ್ಲಿಯೇ ಹೀಗೆ ಮಾಡಿರುತ್ತಾರಲ್ಲ ಎಂದು ಮೂಗು ಮುರಿಯಬೇಡಿ, ಅಥವಾ ಕೆಲವು ಕಡೆಗಳಲ್ಲಿ ಈ ವಿಸರ್ಜನೆಯನ್ನು ತಡೆಗಟ್ಟಲು ದೇವರುಗಳ ಚಿತ್ರವಿರುವ ಅಥವಾ ದೈವಿಕ ಚಿಹ್ನೆಯಿರುವ ಟೈಲ್‌ಗಳನ್ನೋ ಅಥವಾ ಓಂಕಾರವನ್ನೂ ಬರೆದಿರುತ್ತಾರೆ. ಎಂತ ಮೂರ್ಖರು! ದೇವರು ಎಲ್ಲಿಲ್ಲ, ಅಣುರೇಣುತೃಣಕಾಷ್ಠ ಗಳಲ್ಲಿಯೂ ಇರುವನಲ್ಲ! ಹೀಗಾಗಿ ದೇವರ ಜಾಗದಲ್ಲಿ ವಿಸರ್ಜನೆ ಮಾಡಬೇಡಿ ಎನ್ನಲಾದೀತೇ? ಅವರಿಗೆ ಯಾರೂ ಇಲ್ಲದ ಕಡೆ ತಿನ್ನು ಎಂದು ಗುರುಗಳು ಕೊಟ್ಟ ಬಾಳೆಯ ಹಣ್ಣನ್ನು ಎಲ್ಲ ಕಡೆ ದೇವರಿರುವ ಕಾರಣ, ಯಾರೂ ಇಲ್ಲದ ಕಡೆ ತಿನ್ನಲು ಸಾಧ್ಯವೇ ಇಲ್ಲ ಎಂದು ವಾಪಸು ತಂದ ಕನಕದಾಸನ ಕತೆ ತಿಳಿಯದೆ? ಎಲ್ಲ ಕಡೆ ದೇವರಿರುವುದಲ್ಲದೆ, ಬೆಂಗಳೂರಿನಂತಹ ನಗರದಲ್ಲಿ ಎಲ್ಲ ಕಡೆ ಜನರೂ ಇರುತ್ತಾರೆ. ಜನರ ಮುಂದೆ ಈ ಕಾರ್ಯಗಳನ್ನು ಮಾಡುವುದಾದರೂ ಹೇಗೆ ಎಂಬ ಮುಜುಗರ ಯಾಕೆ? ಯಾರೂ ಇಲ್ಲದಿದ್ದರೂ ದೇವರಾದರೂ ಇರುತ್ತಾನಲ್ಲ. ಅಲ್ಲದೆ ಅವನೇ ತಾನೇ ಎಲ್ಲವನ್ನೂ ಪ್ರೇರಿಸುವುದು? ಅವನ ಮುಂದೆಯೇ ಎಲ್ಲವೂ ನಡೆಯುವಾಗ ಈ ಹುಲುಮನುಜರಿಗೆ ಯಾಕೆ ಅಳುಕಬೇಕು! ಕೆಲವು ಕಡೆಗಳಲ್ಲಿ ನಿರ್ಮಲ ಶೌಚಾಲಯಗಳಿವೆ, ನಿಜ. ಅವು ಎಲ್ಲ ಕಡೆಯಲ್ಲಿಯೂ ಇಲ್ಲ; ಜೊತೆಗೆ ಅಲ್ಲಿ ವಿಸರ್ಜನಕ್ರಿಯೆಗೂ ಹಣ ಕೊಡಬೇಕು. ಇದಾವ ನ್ಯಾಯ; ಏನಾದರೂ ತೆಗೆದುಕೊಂಡರೆ ದುಡ್ಡು ಕೊಡಬೇಕಾದುದು ಸರಿಯೇ, ಆದರೆ ತಾವೇ ಬಿಡುವುದಕ್ಕೂ ಹಣ ಕೊಡು ಎಂದರೆ! ಮೊದಲೇ ಜನ ಬಡವರು, ಅವರು ಬಸ್ಸಲ್ಲಿ ಓಡಾಡುವುದಕ್ಕೇ ಕೈಲಿ ಕಾಸಿರುವುದಿಲ್ಲ, ಇನ್ನು ಇದಕ್ಕೂ ಹಣ ತೆರು ಎಂದರೆ ಹೇಗೆ? ಖಾಸಗಿ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಕಾಲೇಜುಗಳಲ್ಲಿ ಸೀಟು ಪಡೆದ ಸರ್ಕಾರಿ ಕೋಟಾದ ವಿದ್ಯಾರ್ಥಿಗಳ ಹೆಚ್ಚಿನ ಹಣವನ್ನು ಸರ್ಕಾರವೇ ಭರಿಸುತ್ತದೆಂದು ಮೊನ್ನೆ ಸರ್ಕಾರ ಹೇಳಿಲ್ಲವೇ? ವಿಸರ್ಜನಕ್ರಿಯೆಗೆ ನೀಡಬೇಕಾದ ಇಂಥ ಸಣ್ಣ ಮೊತ್ತ ವನ್ನಾದರೂ ಈ ಬಡವರ ಪರವಾಗಿ ಸರ್ಕಾರ ಭರಿಸಬಾರದೇ! ಪಾದಚಾರಿಗಳೂ ಬಡವರು, ಫುಟ್‌ಪಾತ್‌ಗಳ ಮೇಲೆ ವಾಹನ ನಿಲ್ಲಿಸುವವರೂ ಅವರೇ; ರಸ್ತೆ ಬದಿ ವಿಸರ್ಜನಕ್ರಿಯೆಗೆ ತೊಡಗುವವರೂ ಅವರೇ, ಅಲ್ಲಿ ಓಡಾಡಬೇಕಾದರೂ ಅವರೇ! ಯಾರ ಪರ ವಹಿಸುವುದು, ಯಾರನ್ನು ಟೀಕಿಸುವುದು, ಇದೇ ಅಲ್ಲವೇ ಧರ್ಮಸೂಕ್ಷ್ಮ ಎಂದರೆ?

★ – ★ – ★

# ಮದುವೆ ಮದುವೆ ಮದುವೆ

ಇದು ಶ್ರಾವಣ ಮಾಸ, ಅಂದರೆ ಮದುವೆಗಳ ಸಂಭ್ರಮದ ಕಾಲ. ಮದುವೆ ಮುಹೂರ್ತ ಇರುವ ಎಲ್ಲ ದಿನಗಳಲ್ಲೂ ಎಲ್ಲ ಕಲ್ಯಾಣ ಮಂಟಪಗಳೂ ಭರ್ತಿ. ಈಗ ನಡೆಯುವ ಮದುವೆಗೆ ಪ್ರಾಯಶಃ ಆರು ತಿಂಗಳ ಹಿಂದೆಯೇ ಕಲ್ಯಾಣ ಮಂಟಪ ವನ್ನು ಬುಕ್ ಮಾಡಿಸಿದ್ದಿರಬೇಕು. ಪ್ರತಿವರ್ಷವೂ ಲಕ್ಷಾಂತರ ಮಂದಿ ಆರೆಂಟು ತಿಂಗಳ ಹಿಂದೆಯೇ ಮಂಟಪ ಬುಕ್ ಮಾಡಿಸಿ ಮದುವೆಯ ಮೂಲಕ ಗೃಹಸ್ಥರಾಗುತ್ತಾರೆ. ಮದುವೆ ಎಂದಾಕ್ಷಣ ನನಗೆ ನೆನಪಾಗುತ್ತದೆ.

ಮೊನ್ನೆ ಟಿವಿ ಆನ್ ಮಾಡಿದಾಗ, ಒಬ್ಬ ಗುರುಗಳು ಅಂಚೆಯಿಂದ ಬಂದ ಪತ್ರವೊಂದರಲ್ಲಿದ್ದ ಪ್ರಶ್ನೆಗೆ ಉತ್ತರಿಸುತ್ತಿದ್ದರು. ಪ್ರಶ್ನೆ ಮದುವೆಗೆ ಸಂಬಂಧಿಸಿದ್ದು. ಮದುವೆಯಾಗುವ ಗಂಡುಹೆಣ್ಣುಗಳ ನಡುವೆ ಹಿಂದಿನ ಜನ್ಮಗಳ ಸಂಬಂಧ ಇರುತ್ತದೆಯೇ ಎಂದೋ ಏನೋ ಆ ಪ್ರಶ್ನೆ. ಗುರುಗಳ ಉತ್ತರ ಕೇಳಿಸಿತು: "ಋಣಾನುಬಂಧೇನ ರೂಪೇಣ ಪಶು ಪತ್ನಿ ಸುತಾಲಯಃ" ಎಂಬ ಮಾತನ್ನು ಉದ್ಧರಿಸಿದರು. ಕೊಳ್ಳುವ ಹಸು, ಮದುವೆಯಾದ ಹೆಂಡತಿ, ಹುಟ್ಟುವ ಮಗ ಮತ್ತು ಕಟ್ಟುವ ಮನೆ – ಇವೆಲ್ಲ ಋಣಾನುಬಂಧದ ಕಾರಣದಿಂದಲೇ ದೊರಕುವುದು ಎಂದು ಅರ್ಥ ವಿವರಿಸಿದರು. ಜೊತೆಗೆ ಇಂಗ್ಲಿಷ್‌ನ "marriages are made in heaven" ಎಂಬ ಮಾತನ್ನೂ ಉಲ್ಲೇಖಿಸಿ ಋಣಾನುಬಂಧವನ್ನು ಗಟ್ಟಿಗೊಳಿಸಿದರು. ಈ ಮಾತು ಕೇಳಿ ಮದುವೆಯಾಗಿ ಆಗಲೇ ಮೂವತ್ತೈದು ವರ್ಷಗಳ ಮೇಲಾಗಿರುವ ನನ್ನ ಮನಸ್ಸಿನಲ್ಲಿ ಅನೇಕ ಪ್ರಶ್ನೆಗಳು ಮೇಲೆದ್ದವು.

ಪ್ರಾಯಶಃ ಈ ಗುರುಗಳು ಬ್ರಹ್ಮಚಾರಿಗಳು, ಅಂದರೆ ಮದುವೆಯಾಗಿಲ್ಲ. ಹಾಗಾದರೆ ಅವರಿಗೆ ಹೆಣ್ಣಿನ ಋಣಾನುಬಂಧ ಯಾವ ಜನ್ಮದಿಂದಲೂ ಇರಲಿಲ್ಲವೇ? ಅಂದರೆ ಅವರು ಈ ಜನ್ಮ ಮಾತ್ರ ಆಜನ್ಮ ಬ್ರಹ್ಮಚಾರಿಗಳಾಗಿರದೆ, ಹಿಂದಿನ ಜನ್ಮಗಳಲ್ಲೂ ಹಾಗೆಯೇ ಇದ್ದಿರಬೇಕು. ಅಂದರೆ ಅವರು ಜನ್ಮಾಂತರ ಬ್ರಹ್ಮಚಾರಿಗಳು! ಪಾಪ, ಯಾಕೆ ಹೀಗಾಯಿತು ಎಂಬ ಅನುತಾಪ ಮೂಡಿತು. ಇವರು ನಂಬಿದ ದೇವರು ಹೀಗೇಕೆ ಮಾಡಿದ? ಗುರುಗಳಿಗೆ ಈ ಬಗ್ಗೆ ಎಂದೂ ಅನುತಾಪ ಉಂಟಾಗಿಲ್ಲವೇ? ಅದಕ್ಕಾಗಿ ದೇವರನ್ನು ಏನೂ ಕೇಳಿಲ್ಲವೇ? ಅಥವಾ ಎಲ್ಲ

ಜನ್ಮಗಳಲ್ಲೂ ಬ್ರಹ್ಮಚಾರಿಗಳಾಗಿಯೇ ಮುಂದುವರಿಯಲು ಅವರು ಸಿದ್ಧರಾಗಿದ್ದಾರೆಯೇ? ಹೆಣ್ಣು ಮಾಯೆಯಾದ್ದರಿಂದ ಅವಳನ್ನು ಸದಾ ದೂವಿರಿಸುವ ಅದೃಷ್ಟ ತಮ್ಮದೆಂದು ಅವರಿಗೆ ಹೆಮ್ಮೆಯೇನೋ!

ಗುರುಗಳಿಂದ ನನ್ನ ಮನಸ್ಸು ಬೇರೆಡೆ ಹರಿಯಿತು. ಋಣಾನುಬಂಧದ ಕಾರಣದಿಂದ ಒಂದಾದ ಗಂಡುಹೆಣ್ಣುಗಳು ಕೆಲವು ವೇಳೆ ವಿಚ್ಛೇದನಕ್ಕೊಳಗಾಗುತ್ತಾರಲ್ಲ ಯಾಕೆ? ಅದೂ ವಿಧಿಲಿಖಿತವೇ? ಹಾಗೆಯೇ ಕೆಲವು ಗಂಡಸರು ಹಲವು ಮದುವೆಗಳನ್ನಾಗುತ್ತಾರಲ್ಲ, ಒಂದು ಗಂಡಿನೊಡನೆ ಹಲವು ಹೆಣ್ಣುಗಳ ಋಣಾನುಬಂಧ ಹೇಗೆ ಉಂಟಾಯಿತು? ಇನ್ನೂ ಒಂದು ಪ್ರಶ್ನೆ ಕಾಡತೊಡಗಿತು. ಸತಿ (ಧರ್ಮಪತ್ನಿ) ಎಂದರೆ ಯಾವುದೋ ಧಾರ್ಮಿಕ ವಿಧಿಯ ಮೂಲಕ ಮದುವೆಯಾದ ಹೆಣ್ಣಿಗೆ ಮಾತ್ರ ಅನ್ವಯಿಸುವುದೇ? ರಿಜಿಸ್ಟರ್ಡ್ ಮದುವೆಯಾದವರ ಸಂಬಂಧ ಎಂತಹುದು? ಅಂದರೆ ಗಂಡುಹೆಣ್ಣುಗಳು ಮದುವೆಯಿಲ್ಲದೆ ಅಥವಾ ಮದುವೆಯ ಆಚೆ ಹೊಂದಿರಬಹುದಾದ ಸಂಬಂಧದ ಬಗ್ಗೆ ವಿವರಣೆ ಹೇಗೆ? ಧಾರ್ಮಿಕ ವಿಧಿಗೆ ಆಚೆಗಿನ ಗಂಡುಹೆಣ್ಣಿನ ಸಂಬಂಧಗಳಿಗೆ ಋಣಾನುಬಂಧ ಬೇಕಿಲ್ಲವೇ? ಅಥವಾ ಯಾವ ಹೆಣ್ಣು ಹೆಂಡತಿಯಾಗಬೇಕು, ಯಾವ ಗಂಡಸು ಗಂಡನಾಗಬೇಕು, ಯಾರು ಕೇವಲ ಸಂಬಂಧ ಹೊಂದಿರಬೇಕು ಎಂಬುದಕ್ಕೂ ಹಿಂದಿನ ಜನ್ಮಗಳ ನಂಟಿದೆಯೇ? ಹೆಣ್ಣು ಗಂಡುಗಳು ವಿಧಿಪೂರ್ವಕವಾಗಿಯೋ ಅದಿಲ್ಲದೆಯೋ ಸಂಬಂಧ ಹೊಂದುವುದರ ಉದ್ದೇಶ ಒಂದೇ ಅಲ್ಲವೇ? ಹಾಗಾದರೆ ಎರಡಕ್ಕೂ ಇರುವ ವ್ಯತ್ಯಾಸವೇನು? ಗಂಡಹೆಂಡತಿಯರ ಹಾಗೂ ಗಂಡುಹೆಣ್ಣುಗಳ ನಡುವಣ ಸಂಬಂಧದ ಉದ್ದೇಶ ಒಂದೇ ಅದರೆ, ಎರಡೂ ಒಂದೇ ಬಗೆಯ ಋಣಾನುಬಂಧಗಳಿಂದಲೇ ಆಗಿರಬೇಕಲ್ಲವೇ? ಹಾಗಾದರೆ ಮದುವೆಯ ಆಚೆಗಿನ ಗಂಡುಹೆಣ್ಣುಗಳ ಸಂಬಂಧವೂ ಋಣಾನುಬಂಧದಿಂದಲೇ ಆಗಿದೆ, ಅಂದರೆ ಅವೂ ಸ್ವರ್ಗದಲ್ಲಿಯೇ ಆದವು ಎಂದೇಕೆ ನಂಬಬಾರದು? ಪಾಪ. ಜನ್ಮಾಂತರ ಬ್ರಹ್ಮಚಾರಿಗಳಾದ ಗುರುಗಳಿಗೆ ಈ ಲೌಕಿಕ ಸಂಬಂಧಗಳ ವಿಷಯ ಅಷ್ಟು ತಿಳಿದಿರಲಾರದೇನೋ. ಅವರೇನಿದ್ದರೂ ಇವನ್ನೆಲ್ಲ ಊಹಿಸಿಕೊಳ್ಳಬೇಕಲ್ಲವೇ?

ಅಲ್ಲದೆ ಈಗ ಪರಿಸ್ಥಿತಿ ಬದಲಾಗುತ್ತಿದೆ. ಈಚೆಗೆ ತಾನೇ, ಐಟಿ ಮುಂತಾದ ವಲಯಗಳ ಬೆಳವಣಿಗೆಯಿಂದಾಗಿ, ಜೇಬಿನಲ್ಲಿ ಹಣ ತುಂಬಿಕೊಂಡ ಹುಡುಗ, ಪರ್ಸಿನಲ್ಲಿ ನೋಟಿನ ಕಂತೆ ತುಂಬಿಕೊಂಡ ಹುಡುಗಿ, ಜೊತೆಗೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ, ಇವುಗಳಿಂದಾಗಿ, ದಿನದ ಬಹುಭಾಗ ಕೆಲಸದಲ್ಲಿ ತೊಡಗಿ, ಬೇಸರ ತೊಡೆಯಲು, ಹಾಗೂ ಏಕತಾನತೆಯನ್ನು ನೀಗಿಸಿಕೊಳ್ಳಲು ತಾತ್ಕಾಲಿಕ ದೈಹಿಕ ಸಂಪರ್ಕವನ್ನು ಬೆಳೆಸುವ ಪ್ರವೃತ್ತಿ ಹೆಚ್ಚಾಗುತ್ತಿದೆ ಎಂಬ ವರದಿಗಳನ್ನು ನೋಡಿದ್ದೇನೆ. ಅಂದರೆ ಈ ತಾತ್ಕಾಲಿಕ ಸಂಬಂಧಕ್ಕೂ ಋಣಾನುಬಂಧ ಉಂಟೆ? ಹಾಗಿದ್ದರೆ, ಎಷ್ಟು ಕಾಲದ ಸಂಬಂಧಕ್ಕೆ ಇದು ಸಲ್ಲುತ್ತದೆ ಎಂಬ ಪ್ರಶ್ನೆಯೂ ನನ್ನಲ್ಲಿಣುಕಿತು.

ಇನ್ನೊಂದು ಸಲ ಹಿಂದೆ ಹೇಳಿದ ಶ್ಲೋಕಭಾಗವನ್ನು ನೆನಪಿಸಿಕೊಳ್ಳೋಣ: "ಋಣಾನುಬಂಧೇನ ರೂಪೇಣ ಪಶು ಪತ್ನಿ ಸುತಾಲಯಃ". ಇಲ್ಲಿ ಗಂಡನ ಬಗ್ಗೆ ಪ್ರಸ್ತಾಪವಿಲ್ಲ. ಗಂಡಸಿನ ಹೆಂಡತಿಯ ಬಗ್ಗೆ ಮಾತ್ರ ಹೇಳಿದೆ. ಗಂಡಸಿಗೆ ಅನ್ವಯಿಸುವುದನ್ನೆಲ್ಲ ಹೆಂಗಸಿಗೂ ಅನ್ವಯಿಸಿಕೊಳ್ಳಬೇಕು ಎಂದು ಸಾರಾಸಗಟಾಗಿ ಹೇಳುವಂತೆಯೂ ಇಲ್ಲ. ಏಕೆಂದರೆ, ಗಂಡಸಿಗೆ ಸಂಬಂಧಿಸಿದ ಬಹುತೇಕ ವಿಷಯಗಳು ಹೆಣ್ಣಿಗೆ ಅನ್ವಯಿಸುವಂತಿಲ್ಲ. ಅಂದರೆ ಗಂಡನಿಗೆ ಹೆಂಡತಿ ಋಣಾನುಬಂಧದಿಂದ ದೊರಕಿದವಳು (ದನ, ಮನೆಗಳಂತೆ!), ಆದರೆ ಹೆಣ್ಣಿಗೆ ಗಂಡ ಹಾಗಲ್ಲ ಎಂದು ತೀರ್ಮಾನಿಸಬೇಕೆ? ಅಂದರೆ ಋಣಾನುಬಂಧದ ಪ್ರಶ್ನೆ ಹೆಣ್ಣಿಗೆ ಅನ್ವಯಿಸುವುದೇ ಇಲ್ಲವೇನೋ!

ನನ್ನ ಈ ಅನುಮಾನಗಳನ್ನು ನೋಡಿದ ಯಾರಾದರೂ, "ಇದೇನು, ಈ ಮನುಷ್ಯನಿಗೆ ಈ ವಯಸ್ಸಿನಲ್ಲಿ ಇಂತಹ ಅನುಮಾನಗಳು ಬಂದಿವೆಯಲ್ಲ" ಎಂದು ಅಚ್ಚರಿಪಡಬಹುದು. ಏಕೆಂದರೆ ಅನುಮಾನಗಳೇನಿದ್ದರೂ ಚಿಕ್ಕ ವಯಸ್ಸಿನಲ್ಲಿ ಬರಬೇಕೇ ಹೊರತು ವಯಸ್ಸಾದ ಮೇಲಲ್ಲ ಎಂಬುದೂ ಅನೂಚಾನ ನಂಬಿಕೆಯೇ ಅಲ್ಲವೇ? ಚಿಕ್ಕ ಮಕ್ಕಳು ತುಂಬ ಪ್ರಶ್ನೆಗಳನ್ನು ಕೇಳುತ್ತಾರೆ, ಹೆಜ್ಜೆಗೊಂದು ಅನುಮಾನ, ಗಳಿಗೆಗೊಂದು ಸಂದೇಹ. ಬರಬರುತ್ತ ಅವುಗಳು ಕಡಿಮೆಯಾಗುತ್ತ ಹೋಗುತ್ತವೆ. ಅಂದರೆ ಕಡಿಮೆ ಪ್ರಶ್ನೆಗಳನ್ನು ಕೇಳುವುದು ವಯಸ್ಸಾಗುವುದರ ಸಂಕೇತವೆನ್ನಬಹುದೇನೋ. ಪ್ರಶ್ನೆಗಳು ಕಡಿಮೆಯಾಗುವುದು ಅನುಮಾನಗಳು ಪರಿಹಾರಗೊಂಡವೆಂದೋ ಅಥವಾ ಪ್ರಶ್ನೆ ಕೇಳದಿರುವುದು ಪ್ರಬುದ್ಧತೆಯ ಸಂಕೇತವೋ? ಅಂತೂ ಕಡಿಮೆ ಪ್ರಶ್ನೆ ಕೇಳುವುದು ವಯಸ್ಸಾದವನ ಲಕ್ಷಣ. ನಾನು ತುಂಬ ಪ್ರಶ್ನೆಗಳನ್ನು ಕೇಳುತ್ತಿರುವುದರಿಂದ ನನಗೆ ವಯಸ್ಸಾಗಿಲ್ಲ ಎಂದೇ ಭಾವಿಸಬಹುದು! ಏಕೆಂದರೆ ಮುಂದೊಂದು ದಿನ ಪ್ರಶ್ನೆಗಳನ್ನೇ ಕೇಳದಿರುವ ಗಳಿಗೆ ಕಾದಿದೆಯಲ್ಲ. ಪ್ರಶ್ನಾತೀತತೆಯನ್ನು ತಲುಪುವ ದಾರಿಯಲ್ಲಿ ಪ್ರಶ್ನೆಗಳ ಸಂಖ್ಯೆ ಕಡಿಮೆಯಾಗುವುದೇ?

☆ - ☆ - ☆

# ಸಾವು ಎಂಬ ಚೋದ್ಯ

"ಅವರು ಜೀವಿಸುವ ಕಲೆಯನ್ನು ಕಲಿಸುತ್ತಾರೆ, ನಾನು ಸಾಯುವ ಕಲೆಯನ್ನು ಹೇಳಿಕೊಡುತ್ತೇನೆ." ಇದು ಪತ್ರಿಕೆಯೊಂದರಲ್ಲಿ ಓದಿದ ಒಂದು ಸುದ್ದಿಯ ಶೀರ್ಷಿಕೆ. ಅದು ತಟ್ಟನೆ ನನ್ನ ಮನಸ್ಸನ್ನಾಕರ್ಷಿಸಿತು. ಮುಂದೆ ಓದಿದೆ; ಒಬ್ಬ ಸ್ವಾಮೀಜಿ ಇನ್ನೊಬ್ಬ ಸ್ವಾಮೀಜಿಯನ್ನು ಕುರಿತು ತಮ್ಮ ಭಾಷಣದಲ್ಲಿ ಹಾಗೆ ಹೇಳಿದರಂತೆ. ಸಾಯುವ ಕಲೆಯನ್ನು ಕಲಿಯುವ ಆತುರ ನನಗಿರಲಿಲ್ಲವಾದ್ದರಿಂದ ಮುಂದೆ ಓದಲಿಲ್ಲ. ಆದರೆ ಶೀರ್ಷಿಕೆಯಿಂದಾಗಿ ಶಿವರಾಮ ಕಾರಂತರು ಆಡಿದ ಮಾತೊಂದು ನನ್ನ ನೆನಪಿಗೆ ಬಂತು. ಅವರಿಗೆ ತೊಂಬತ್ತೋ ಏನೋ ವರ್ಷ ವಾದಾಗ ಬೆಂಗಳೂರಿನ ಪುರಭವನದಲ್ಲಿ ಅವರೊಡನೆ ಒಂದು ಸಂವಾದ ಕಾರ್ಯಕ್ರಮ ಇತ್ತು. ನಾನೂ ಹೋಗಿದ್ದೆ. ಒಬ್ಬರು ಅವರಿಗೆ ಒಂದು ಪ್ರಶ್ನೆ ಹಾಕಿದರು: "ಸಾವಿಗೆ ಸಿದ್ಧವಾಗುವುದು ಹೇಗೆ?" ತಕ್ಷಣ ಕಾರಂತರು ಉತ್ತರಿಸಿದ್ದರು: "ನೀವೇನು ಸಿದ್ಧವಾಗುವುದು? ಅದು ಬರುತ್ತದೆ, ನೀವು ಇಲ್ಲವಾಗಿರುತ್ತೀರಿ". ಕಾರಂತರು ಈ ಬದುಕಿನನಂತರದ ಬಗ್ಗೆ ನಂಬಿಕೆ ಇಟ್ಟವರಲ್ಲ. ಆದರೆ, ನಂಬಿಕೆ ಯಾವುದಾದ ರಾಗಲೀ, ಸಾವಿನ ಬಗ್ಗೆ ಎಲ್ಲರೂ ಯೋಚಿಸುವವರೇ, ಅದಕ್ಕೆ ಕಾರಣ ಅದರ ವಾಸ್ತವತೆ ಮತ್ತು ಅನಿವಾರ್ಯತೆ.

ಬದುಕು ಮತ್ತು ಸಾವು ಬೇರೆಯೇ ಅಲ್ಲ ಅನ್ನಿಸುತ್ತದೆ. ಹುಟ್ಟು–ಸಾವುಗಳ ನಡುವಣದ್ದು ಬದುಕು; ಇರುವವರೆಲ್ಲ ಹುಟ್ಟಿರುತ್ತಾರೆ, ಆದರೆ ಅದರ ನೆನಪು ಇರುವುದಿಲ್ಲ; ಇರುವವರೆಲ್ಲ ಸಾವಿಗೊಳಗಾಗುತ್ತಾರೆ, ಆದರೆ ಸಾವು ಎಲ್ಲ ನೆನಪನ್ನೂ ಅಳಿಸಿಹಾಕಿರುತ್ತದೆ. ಅಂದರೆ ಬದುಕು ಅಗಾಧವಾದ ಕತ್ತಲೆಯ ಎರಡು ಸ್ಥಿತಿಗಳ ನಡುವಣ ಬೆಳಕಿನ ಬಿಂದು. ನಮಗೆ ಕಾಣುವುದು ಈ ಬಿಂದು ಮಾತ್ರ. ಹೀಗಾಗಿ ಬದುಕಿನ ಆಚೀಚೆಗಿನ ಕತ್ತಲೆಯ ಬಗ್ಗೆ ನಮಗೆ ಕುತೂಹಲ, ಭಯ! ಈ ಎರಡೂ ನಮ್ಮನ್ನು ಸಾವಿನ ಬಗ್ಗೆ ಯೋಚಿಸುವಂತೆ ಮಾಡುತ್ತದೆ. ಆದರೆ ಎಂದೆಂದೂ ಅದು ಮನುಷ್ಯನಿಗೆ ತಿಳಿಯಲಾರದು. ಒಮ್ಮೆ ನಾನು ಜೀವಶಾಸ್ತ್ರ ಪ್ರಾಧ್ಯಾಪಕರೊಬ್ಬರನ್ನು ಕೇಳಿದ್ದೆ: "ನಿಮ್ಮ ಜೀವಶಾಸ್ತ್ರ ಸಾವನ್ನು ಹೇಗೆ ವಿವರಿಸುತ್ತದೆ?" ಎಂದು. ಅವರು ಹೇಳಿದ್ದರು: "ದೇಹದ ಅನಬಾಲಿಸಂ (ಜೀವವಸ್ತು ನಿರ್ಮಾಣಕ್ರಿಯೆ) ಮತ್ತು

ಕೆಟಬಾಲಿಸಮ್ (ಜೀವವಸ್ತು ವಿನಾಶಕ್ರಿಯೆ)ಗಳ ಸಂಪೂರ್ಣ ಸ್ಥಗಿತತೆ.” ಸರಿ, ಆದರೆ ಈ ವ್ಯಾಖ್ಯೆಯಿಂದ ಸಾವಿನ ಅರ್ಥ ಆಗುವುದೆಂದು ಹೇಳಲು ಸಾಧ್ಯವೇ?

ಸಾವು ಇರುವುದರಿಂದಲೇ ಬದುಕು ಅಲ್ಲವೇ? ಹಳೆಯ ದೇಹಗಳು ಬಿದ್ದು ಹೊಸವು ಬರುವುದೇ ತಾನೇ ಪ್ರಕೃತಿ ನಿಯಮ? ಹುಟ್ಟಿದವರೆಲ್ಲ ಬದುಕಿರಲು ಸಾಧ್ಯವಿಲ್ಲ. ಹಾಗಾಗಿ ಹುಟ್ಟು ಎಂದರೆ ಸಾವು; ಬದುಕು ಎಂಬುದೇನಿದ್ದರೂ ಆ ಎರಡು ನಿಗೂಢಗಳ ನಡುವಣ ಬಿಂದು ಮಾತ್ರ. ಆದರೂ ಸಾವಿನ ಬಗ್ಗೆ ಎಲ್ಲರಿಗೂ ಕುತೂಹಲ, ಅದಕ್ಕಿಂತ ಹೆಚ್ಚಾಗಿ ಭಯ. ಈ ಭಯನಿವಾರಣೋಪಾಯವೇ ಮತ ಧರ್ಮಗಳ ಆವಿಷ್ಕಾರದ ಮೂಲ ಎಂದು ಭಾವಿಸಬಹುದು. ಎಲ್ಲ ಮತಧರ್ಮಗಳೂ ಸಾವಿನನಂತರದ ಸ್ಥಿತಿಯ ಬಗ್ಗೆ ಚಿಂತಿಸಿ ತಮ್ಮದೇ ಆದ ಪರಿಕಲ್ಪನೆಯನ್ನು ಸೃಷ್ಟಿಸಿರುತ್ತವೆ. ಭಿನ್ನಾಭಿಪ್ರಾಯಗಳಿರುವುದೇ ಅವಾವುವೂ ಸತ್ಯವಲ್ಲ ಎಂಬುದನ್ನು ನಿರೂಪಿಸುತ್ತದೆ. ಅಂದರೆ ಸಾವು ಎಂಬುದು ಎಂದಿಗೂ ಅರ್ಥವಾಗದ ಅನಿವಾರ್ಯವೇ ಆಗಿರುತ್ತದೆ. ಅದು ಹೀಗೆ ಅದು ಹಾಗೆ ಎಂಬುದೇನಿದ್ದರೂ ಹಾಗೆಂದವರ ಕಲ್ಪನೆ, ನಂಬಿಕೆ. ಸಾವಿನ ಭಯವೂ ಅಷ್ಟೆ, ಎಲ್ಲರಿಗೂ ಇದ್ದದ್ದೇ. ಕೆಲವರು ನಂಬಿಕೆಯ ತೀವ್ರತೆಯಿಂದ ಸಾವಿನ ಬಗೆಗಿನ ಭಯವನ್ನು ಬದಿಗಿರಿಸಿರುತ್ತಾರೆ. ಸಾವಿನ ನಂತರ ಈ ಬದುಕಿಗಿಂತ ಅಮೂಲ್ಯವಾದದ್ದು ಏನೋ ಇದೆ ಎಂಬುದರಲ್ಲಿನ ಗಾಢ ನಂಬಿಕೆ ಇದಕ್ಕೆ ಕಾರಣ. ದೇವಕಾರ್ಯಕ್ಕಾಗಿ, ಸ್ವಾಮಿಕಾರ್ಯಕ್ಕಾಗಿ, ಪರೋಪಕಾರದ ಕಾರ್ಯಕ್ಕಾಗಿ ತಮ್ಮ ಜೀವವನ್ನು ಇಲ್ಲವಾಗಿಸಿಕೊಂಡ ಸಾವಿರಾರು ನಿದರ್ಶನಗಳು ನಮ್ಮ ಶಾಸನಗಳಲ್ಲೇ ದೊರೆಯುತ್ತವೆ. ಆತ್ಮಹತ್ಯೆಗೆ ಶರಣಾಗುವುದರ ಹಿಂದೆಯೂ ತಮಗೆ ಸಾವಿನಿಂದ ಇನ್ನೂ ಹಿರಿದಾದುದು, ಇಲ್ಲಿ ದೊರಕದ್ದು ಏನೋ ದೊರಕುತ್ತದೆ ಎಂಬ ಅಥವಾ ಇಲ್ಲಿರುವ ನೋವಿನಿಂದ ಮುಕ್ತವಾದ ಸ್ಥಿತಿಯೊಂದು ದೊರೆಯುತ್ತದೆ ನಂಬಿಕೆಯೇ ಅವರನ್ನು ಅದಕ್ಕೆ ಸಿದ್ಧಗೊಳಿಸಿರುತ್ತದೆ. ಈಚೆಗೆ ಭಯೋತ್ಪಾದಕರೆಂದು ಕರೆಸಿಕೊಳ್ಳುವವರೂ ಹಾಗೆಯೇ ತಮ್ಮ ಜೀವವನ್ನು ತೊರೆಯುತ್ತಿರುವುದು ಸಾಮಾನ್ಯವಾಗಿದೆ. ನಮಗೆ ಅವರು ಭಯೋತ್ಪಾದಕರು; ಆದರೆ ಅಂಥವರ ಮನಸ್ಸಿನಲ್ಲಿ ತಾವು ಸತ್ತು ಇತರರನ್ನು ಕೊಂದು ದೊಡ್ಡ ಆದರ್ಶವನ್ನು ಮೆರೆಯುತ್ತಿದ್ದೇವೆಂಬ ಭಾವನೆ ಅತ್ಯಂತ ಗಾಢವಾಗಿರುತ್ತದೆ; ಹಾಗಾಗಿಯೇ ಅವರು ವೈಯಕ್ತಿಕ ಸಾವಿನ ಭಯವನ್ನು ಬದಿಗಿರಿಸಲು ಸಾಧ್ಯವಾಗುವುದು. ಅಂದರೆ ಸಾವಿಗೆ ಪರ್ಯಾಯವಾದ ಮತ್ತೊಂದು ಹಿರಿದರ ಇರುವಿಕೆಯ ಬಗ್ಗೆ ನಂಬಿಕೆಯಿರದಿದ್ದರೆ ಈ ರೀತಿ ಮಾಡಲು ಸಾಧ್ಯವಿಲ್ಲ.

ದೇಹ–ಜೀವಗಳ ಸಂಬಂಧ ಎಂತಹುದು? ದೇಹದಲ್ಲಿ ಜೀವ ಸೇರಿಕೊಂಡಿರುವುದೋ ಅಥವಾ ಜೀವವೇ ದೇಹವನ್ನು ಧರಿಸಿರುವುದೋ ಹೇಗೆ? ಸಾಮಾನ್ಯವಾಗಿ ನಾವು ‘ಪ್ರಾಣ ಹೋಯಿತು’ ಎಂದೋ ‘ಸಾವು ಬಂತು’ ಎಂತಲೋ ಹೇಳುತ್ತೇವೆ. ಈ ಹೋಗುವುದು ಬರುವುದು ಹೇಗೆ? ಜೈನಕಾವ್ಯವೊಂದರಲ್ಲಿ ಈ ಕತೆ

ಓದಿದ ನೆನಪು: ಒಬ್ಬ ಮರಣದಂಡನೆ ಜಾರಿಗೊಳಿಸುವ ಚಂಡಾಲ. ಅನೇಕರ ಪ್ರಾಣ–ದೇಹಗಳನ್ನು ಬೇರ್ಪಡಿಸಿದ ಅವನಿಗೆ ಈ ಜಿಜ್ಞಾಸೆ ಆರಂಭವಾಯಿತು. ಮರಣದಂಡನೆಗೊಳಗಾದ ವ್ಯಕ್ತಿಯ ತಲೆ ಕತ್ತರಿಸುವಾಗ ತಾನು ಕಣ್ಣಲ್ಲಿ ಕಣ್ಣಿಟ್ಟು ನೊಡಿದ್ದರೂ ಈ 'ಬರುವುದು' ಅಥವಾ 'ಹೋಗುವುದು' ಕಾಣಲಿಲ್ಲವಲ್ಲ ಎಂಬ ಅಚ್ಚರಿ; ಅದನ್ನು ಪರೀಕ್ಷಿಸುವ ಕುತೂಹಲ. ಒಮ್ಮೆ ಇಂತಹ ಮರಣದಂಡನೆಯ ಜಾರಿಯ ಸಮಯದಲ್ಲಿ ರಾಜನ ಅನುಮತಿ ಪಡೆದು ಒಂದು ಪ್ರಯೋಗ ನಡೆಸಿದ. ದಂಡನೆಗೊಳಗಾದ ವ್ಯಕ್ತಿಯನ್ನು ಒಂದು ದೊಡ್ಡ ಗುಂಡಿಯಲ್ಲಿ ನೂಕಿದ; ಮೇಲುಗಡೆ ಏನೇನೂ ಒಳಹೋಗದ ಹಾಗೆ ಅಥವಾ ಹೊರಬರದ ಹಾಗೆ ಗುಂಡಿಯ ಬಾಯನ್ನು ಭದ್ರವಾಗಿ ಮುಚ್ಚಿಬಿಟ್ಟ. ಇನ್ನು ಪ್ರಾಣ 'ಹೋಗು'ವುದಾದರೂ ಹೇಗೆ, ಸಾವು 'ಬರು'ವುದಾದರೂ ಹೇಗೆ? ಕೆಲವು ದಿನ ಕಳೆದ ಬಳಿಕ ಮೇಲುಗಡೆ ಮುಚ್ಚಿದುದನ್ನು ತೆಗೆದು ನೋಡಿದ; ಒಳಗಿದ್ದ ವ್ಯಕ್ತಿ ಸತ್ತಿದ್ದ! ಅರೆ, ಏನೂ ನುಸುಳಲು ಸಾಧ್ಯವಾಗ ದಂತೆ ಮುಚ್ಚಿಬಿಟ್ಟಿದ್ದರೂ ಈ ಬರುವುದು ಅಥವಾ ಹೋಗುವುದು ಹೇಗಾಯಿತು? ಅವನ ಪ್ರಶ್ನೆ ಹಾಗೆಯೇ ಉಳಿಯಿತು!

ಸಾವನ್ನು ಗೆಲ್ಲುವುದು ಹೇಗೆ ಅಥವಾ ಅದರ ಭಯವನ್ನು ನಿವಾರಿಸಿ ಕೊಳ್ಳುವುದು ಹೇಗೆ? ದೇವರಲ್ಲಿ, ಮರುಜನ್ಮಗಳಲ್ಲಿ, ಸ್ವರ್ಗನರಕಗಳಲ್ಲಿ ನಂಬಿಕೆಯಿಟ್ಟವ ರಿಗೂ ಸಾವು ತಪ್ಪಿದ್ದಲ್ಲ, ಅದರ ಭಯ ತಪ್ಪಿದ್ದಲ್ಲ, ಹಾಗೆಯೇ ಇದಾವುದರಲ್ಲೂ ನಂಬಿಕೆಯಿರದಿದ್ದವರಿಗೂ. ಅಂದರೆ ಎಲ್ಲರ ಪರಿಸ್ಥಿತಿಯೂ ಒಂದೇ. ಅದು ಅನಿವಾರ್ಯವಾದ್ದರಿಂದ, ಬಂದೇ ಬರುವುದು ನಿಶ್ಚಿತವಾದ್ದರಿಂದ, ಆ ಬಗ್ಗೆ ಹೆಚ್ಚು ಯೋಚಿಸದಿರುವುದೇ ಒಳಿತೇನೋ. ಆದರೆ ನಮಗೆ ಭಯವುಂಟಾಗುವುದು ಸಾವಿ ಗಿಂತ ಸಾವು ಬಂದೀತೆಂಬ ಕಲ್ಪನೆಯೇ ಭಯಕ್ಕೆ ಕಾರಣವೇನೋ! ಈಗ ಬಂದೀತು, ಆಗ ಬಂದೀತು ಎಂಬ ನಿರೀಕ್ಷೆಯೇ ಭಯವನ್ನು ಹೆಚ್ಚಿಸುವಂಥದೇನೋ. ಅಂತಹ ನಿರೀಕ್ಷೆ ಬರುವುದು ಕಾಯಿಲೆಯೋ, ಆಕಸ್ಮಿಕದ ಸಂದರ್ಭವೋ ಇರುವ ಗಳಿಗೆಯಲ್ಲಿ. ಹಾಗಾಗಿ ಸಾವು ಬಂದೀತೆಂದು ನಿರೀಕ್ಷಿಸುವಗಳಿಗೆ ಬಾರದಿರಲಿ ಎಂದೇ ಹಿಂದಿನವರು 'ಅನಾಯಾಸ ಮರಣ'ಕ್ಕಾಗಿ ಹಂಬಲಿಸಿದರು. ಸಾವು ಇರುವವರೆಗೂ (?) ಇದೇ ಎಲ್ಲರ ಹಾರೈಕೆ.

☆ – ☆ – ☆

# ವ್ಯಾಮೋಹ - ಭಯ

ಮೊನ್ನೆ ನನ್ನ ಸ್ನೇಹಿತರೊಬ್ಬರು ಮನೆಗೆ ಬಂದಿದ್ದರು. ಸ್ನೇಹಿತರು ಎಂದರೆ ಸುದೀರ್ಘ ಕಾಲ ನನ್ನ ಸಹೋದ್ಯೋಗಿಯಾಗಿದ್ದವರು. ನಾವಿಬ್ಬರೂ ಸುಮಾರು ಒಂದೇ ಕಾಲಕ್ಕೆ ನಿವೃತ್ತರಾದವರು. ಮೊದಲಾಗಿದ್ದರೆ ಕೆಲಸದ ನಿಮಿತ್ತ ಒಂದೆಡೆ ನಿಯತವಾದ ಅವಧಿ ಇರಬೇಕಲ್ಲ, ಹಾಗಾಗಿ ದಿನನಿತ್ಯ ಭೇಟಿ, ಮಾತುಕತೆ, ಜೊತೆಯಲ್ಲಿ ಕಾಫಿ ಹೀರುವುದು ಇತ್ಯಾದಿ ಇದ್ದೇ ಇರುತ್ತಿದ್ದವು. ನಿವೃತ್ತಿಯಾದ ಮೇಲೆ ಪರಸ್ಪರ ನೋಡುವುದು ಅಪರೂಪ. ಈಗೇನೋ ಎಲ್ಲರ ಬಳಿ ದೂರವಾಣಿ ಇರುವುದರಿಂದ ಸಂಪರ್ಕ ಕಷ್ಟವಲ್ಲ; ಆದರೆ ನಿತ್ಯದ ಕೆಲಸದಲ್ಲಿ ಅದೆಷ್ಟೋ ಸಲ ಸಾಧ್ಯವಾಗುವುದಿಲ್ಲ. ಇಂಗ್ಲಿಷಿನಲ್ಲಿ out of sight, out of mind ಎನ್ನುತ್ತಾರಲ್ಲ ಹಾಗೆ, ನಿತ್ಯದ ಸಂಪರ್ಕದಲ್ಲಿಲ್ಲದಿದ್ದರೆ ನೆನಪೂ ಇರುವುದಿಲ್ಲ. ಹಾಗಾಗಿ ಅವರು ಮನೆಗೆ ಬಂದಾಗ ನನಗೆ ತುಂಬ ಸಂತೋಷವಾಯಿತು. ಅದೂ ಇದೂ ಸಾಕಷ್ಟು ಹೊತ್ತು ಮಾತನಾಡಿದೆವು. ಕೊನೆಗೆ ಅವರೊಂದು ವಿಷಯ ಹೇಳಿಕೊಂಡರು: ಇತ್ತೀಚೆಗೆ ಅವರಿಗೊಂದು ಬಗೆಯ ಅನಿಸಿಕೆ ಆರಂಭಗೊಂಡಿದೆಯಂತೆ. ಅದೆಂದರೆ, ಯಾವುದಾದರೊಂದು ದುರಂತ ದೃಶ್ಯ ಕಂಡರೆ, ಸುದ್ದಿಯಲ್ಲಿ ಓದಿದರೆ, ಟಿವಿಯಲ್ಲಿ ನೋಡಿದರೆ, ಅದೇ ಕೊರೆಯುತ್ತಿರುತ್ತದೆ. ನಮಗೇ ಹಾಗಾಗಿಬಿಟ್ಟರೆ ಏನು ಗತಿ ಎಂಬ ಆತಂಕ, ಮಕ್ಕಳ ಗತಿ ಏನು ಎಂಬ ಚಿಂತೆ ಎಂದು ವಿವರಿಸಿದರು. ಕೊನೆಯಲ್ಲಿ "ಇದೆಂಥಾ ವ್ಯಾಮೋಹ" ಎಂದು ಉದ್ಗರಿಸಿದರು. ನಾನು ಅವರಿಗೆ ಯಥಾಪ್ರಕಾರದಲ್ಲಿ ಸಮಾಧಾನ ಹೇಳಿದೆ.

ಆಮೇಲೆ ಈ ವಿಷಯ ನನ್ನ ಮನಸ್ಸಿನಲ್ಲಿ ಕೊರೆಯತೊಡಗಿತು. ನನಗೆ ಅವರಿಗಾದ ಆತಂಕದ ಅನುಭವ ಇಲ್ಲ. ಆದರೆ ಈ ರೀತಿ ಆಲೋಚನೆಗಳು ಏಕೆ ಬರುತ್ತವೆ ಎಂಬ ಬಗ್ಗೆ ಜಿಜ್ಞಾಸೆ. ಅವರು ಕೊನೆಯಲ್ಲಾಡಿದ ವ್ಯಾಮೋಹ ಎಂಬ ಮಾತು ನನ್ನನ್ನು ಆಲೋಚನೆಗೆ ಹಚ್ಚಿತು. ಸಿಗ್ಮಂಡ್ ಫ್ರಾಯ್ಡ್ ಎಂಬ ಮನೋವಿಜ್ಞಾನಿ ಮನುಷ್ಯರ ಎಲ್ಲ ಚಟುವಟಿಕೆಗಳ ಹಿಂದಿರುವ ಚಾಲಕ ಶಕ್ತಿ ಎಂದರೆ ಕಾಮ (libido) ಎಂದು ಹೇಳಿದ್ದ. ಆದರೆ ಕಾಮ ಎಂಬುದು ಸಾಮಾನ್ಯವಾಗಿ ನಾವು ಅರ್ಥೈಸುವ ಗಂಡು-ಹೆಣ್ಣಿನ ಸಂಬಂಧ ಮಾತ್ರವಲ್ಲ, ಎಲ್ಲ ಬಗೆಯ ಮನುಷ್ಯ ಸಂಬಂಧಗಳ

ಹಿಂದಿರುವುದು ಒಂದು ಬಗೆಯ ಆಕರ್ಷಣೆಯೇ ಎಂಬುದು ಫ್ರಾಯ್ಡ್‌ನ ವಿವರಣೆ. ನಮ್ಮ ಎಲ್ಲ ಕಾರ್ಯಗಳ ಹಿಂದೆಯೂ ಕ್ರಿಯಾಶೀಲವಾಗಿರುವುದು ಅದೇ ಎಂದು ತಳುಕು ಹಾಕುತ್ತಾನೆ ಆತ. ನನಗನ್ನಿಸಿತು, ಇದನ್ನೇ ನಮ್ಮ ಹಿರಿಯರು ವ್ಯಾಮೋಹ ಎಂಬ ಹೆಸರಿನಿಂದ ಕರೆದರೆ ಎಂದು. ಈ ಎಲ್ಲ ಬಗೆಯ ವ್ಯಾಮೋಹದ ಒಟ್ಟು ರೂಪವೇ ಬದುಕಬೇಕೆಂಬ ಹೇರಾಸೆಯಿರಬೇಕು ಅಂದುಕೊಂಡೆ. ಅದು ಬೇಕು, ಇದು ಬೇಕು ಎಂಬ ಆಸೆ ಮಾತ್ರವಲ್ಲದೆ, ಹಾಗಾಗಬೇಕು, ಹೀಗಾಗಬೇಕು ಎಂಬ ಆಕಾಂಕ್ಷೆಯೂ ಇದೇ ಬಗೆಯದೇ. ಇದೊಂದು ಇಲ್ಲದಿದ್ದರೆ ನಾವು ಸ್ಥಗಿತಗೊಂಡು ಬಿಡುತ್ತೇವೆ, ಮುಂದುವರಿಯುವ ಹುಮ್ಮಸ್ಸೇ ಇರುವುದಿಲ್ಲ. ಈ ವ್ಯಾಮೋಹವೇ ಹಣ ಮಾಡುವ, ಅಧಿಕಾರ ಗಳಿಸುವ, ಕೀರ್ತಿ ಪಡೆಯುವ ರೂಪಗಳನ್ನೂ ಪಡೆಯುತ್ತವೆ. “ಹಣ ಅಂದರೆ ಹೆಣವೂ ಬಾಯಿಬಿಡುತ್ತದೆ” ಎಂಬ ಗಾದೆ ನೆನಪಿಗೆ ಬಂತು. ಹೀಗಾಗಿ ವ್ಯಾಮೋಹವೇ ಆಸೆಯ ಮೂಲವೇ ಅನ್ನಿಸಿತು.

ತಟ್ಟನೆ ನನಗೆ ಇನ್ನೊಂದು ಆಲೋಚನೆಯೂ ಬಂತು: ವ್ಯಾಮೋಹ ಎನ್ನುವುದು ಪಡೆಯುವುದಕ್ಕೆ ಕಾರಣವಾಗಿರುವಂತೆ ತೋರಿದರೂ, ನಮ್ಮ ಬದುಕಿನ ಬಗೆಗಿನ ವ್ಯಾಮೋಹಕ್ಕೆ ನಿಜವಾದ ಕಾರಣ ಭಯವಲ್ಲವೇ? ಇಷ್ಟನ್ನೆಲ್ಲ ಬಿಟ್ಟು ಹೋಗಬೇಕಲ್ಲ ಎಂಬ ಚಿಂತೆಯ ಹಿಂದಿರುವುದು ಹೋಗಲೇಬೇಕಲ್ಲ ಎಂಬ ಪ್ರಜ್ಞೆಯಲ್ಲವೇ? ನಾವು ಏನೋ ಮಾಡುವುದು ಒಂದಲ್ಲ ಒಂದು ರೀತಿಯ ಭಯವನ್ನು ನಿವಾರಿಸಿಕೊಳ್ಳುವುದಕ್ಕೇ ತಾನೇ. ತಿನ್ನುವುದು ಹಸಿವನ್ನು ನೀಗಿಸಿಕೊಳ್ಳು ವುದಕ್ಕೆ. ತಿನ್ನದಿದ್ದರೆ ಏನಾಗುತ್ತದೆ, ದೇಹದ ಶಕ್ತಿ ಕುಂದುತ್ತದೆ, ತಿನ್ನದಿರುವುದನ್ನು ಮುಂದುವರಿಸಿದರೆ ಹಸಿವು ಹೆಚ್ಚಾಗುತ್ತದೆ, ಅಂದರೆ ಇರುವ ಜೀವಕೋಶಗಳ ಸಂಖ್ಯೆ ಕಡಿಮೆಯಾಗುತ್ತ ಕೊನೆಗೆ ಏನೂ ಇಲ್ಲದಿರುವ ಸ್ಥಿತಿ ಬರಬಹುದೆಂಬ, ಅಂದರೆ ಸಾಯಬಹುದು ಎಂಬ ಭಯ ತಾನೇ ತಿನ್ನುವುದರ ಹಿಂದೆ ಇರುವ ಕಾರಣ. ಸಾವನ್ನು ತಂದುಕೊಳ್ಳುವ ಪ್ರಾಯೋಪಗಮನ, ಸನ್ಯಸನ ಇತ್ಯಾದಿಗಳೆಲ್ಲ ದೇಹದ ಶಕ್ತಿ ಅಂದರೆ ಜೀವಕೋಶಗಳ ಸಂಖ್ಯೆಯನ್ನು ನಿರಂತರವಾಗಿ ಕಡಿಮೆಗೊಳಿಸುತ್ತ ಸ್ವಲ್ಪವೂ ಇಲ್ಲದಂತಹ ಸ್ಥಿತಿಯನ್ನು ತಂದುಕೊಳ್ಳುವುದೇ ಅಲ್ಲವೇ?

ನಮ್ಮ ಬದುಕಿನ ಚಾಲಕಶಕ್ತಿ ಭಯವೇ ಇರಬಹುದೇ? ಏಕೆಂದರೆ ನಾವು ಮಾಡುವ ಪ್ರತಿಯೊಂದು ಕಾರ್ಯದ ಹಿಂದೆಯೂ ಅದನ್ನು ಮಾಡದಿದ್ದರೆ ಏನಾಗುವುದೆಂಬ ಅರಿವೇ ಇರುತ್ತದಲ್ಲವೇ? ಆ ಅರಿವು ಎಂದರೆ ಭಯವೇ ಎಂದು ನನ್ನನಿಸಿಕೆ. ತಿನ್ನದಿದ್ದರೆ ಸಾಯಬಹುದು ಎಂಬುದು ಆತ್ಯಂತಿಕ ಭಯ, ಅಂದರೆ ಅದರ ಕೊಟ್ಟ ಕೊನೆಯ ಪರಿಣಾಮ. ನಮಗೆ ವಹಿಸಿದ ಕೆಲಸವನ್ನು ಮಾಡದಿದ್ದರೆ ಏನಾಗುತ್ತದೆ? ಅದನ್ನು ವಹಿಸಿದವರು ನಮ್ಮ ಮೇಲೆ ಕೋಪಗೊಳ್ಳಬಹುದು. ಆ ಕೋಪದ ಪರಿಣಾಮವು, ನಮಗೆ ಕೆಲಸವನ್ನು ವಹಿಸಿದ ವ್ಯಕ್ತಿಗೂ ನಮಗೂ ಇರುವ ಸಂಬಂಧದ ಮೇಲೆ ನಿಂತಿರುತ್ತದೆ. ನಮ್ಮ ಬಾಸ್ ಹೇಳಿದ ಕೆಲಸ ಮಾಡದಿದ್ದರೆ ಕೆಲಸ

ಹೋಗಬಹುದು ಎಂಬ ಭಯ. ಸರಿಯಾಗಿ ಓದದಿದ್ದರೆ, ಮಾರ್ಕ್ಸ್ ಹೆಚ್ಚು ಬರುವುದಿಲ್ಲ, ಬೇಕಾದ ಕಾಲೇಜಿನಲ್ಲಿ ಸೀಟು ಸಿಕ್ಕುವುದಿಲ್ಲ, ಅಂದರೆ ಅರ್ಹತೆ ಕಡಿಮೆಯಾಗಿ ಕೆಲಸ ಸಿಕ್ಕದಿರಬಹುದು, ಸಿಕ್ಕಿದರೂ ಸರಿಯಾದ ಕೆಲಸವಿಲ್ಲದಿರಬಹುದು, ಅದರಿಂದ ಕಡಿಮೆ ಸಂಬಳ, ಅಂದರೆ ಹಣ ಕಡಿಮೆ, ಅಂದರೆ ಬೇಕಾದುದನ್ನೆಲ್ಲ ಪಡೆದುಕೊಳ್ಳುವ ಶಕ್ತಿ ಇರುವುದಿಲ್ಲ, ಅದರಿಂದ ಕೊರತೆಯ ಜೀವನ, ತಿಂದುಣ್ಣಲು ಸಾಕಾಗಬಹುದಾದರೂ, ಏನಾದರೂ ಆದರೆ ಜೀವನವನ್ನು ಜೋಪಾನ ಮಾಡಿಕೊಳ್ಳಲು ಬೇಕಾದ ಸಂಪನ್ಮೂಲಗಳ ಕೊರತೆ, ಹಾಗಾಗಿ ಕಾಯಿಲೆಯಿಂದಲೋ ಆಕಸ್ಮಿಕದಿಂದಲೋ ಸಾಯಬೇಕಾದ ಪರಿಸ್ಥಿತಿ ಬಂದರೆ? ಇದೇ ಜಾಡಿನಲ್ಲಿ ತಾನೇ ನಮ್ಮ ಆಲೋಚನೆಗಳ ಎಳೆ ಸಾಗುವುದು? ಇದೇ ರೀತಿಯಲ್ಲಿ ಎಂದಲ್ಲ, ಈ ದಿಸೆಯಲ್ಲಿ ಅನ್ನೋಣ. ಪ್ರತಿ ಕೆಲಸದ ಹಿಂದೆ ಭಯವಿದೆ ಎಂದು ನನಗನ್ನಿಸುತ್ತಿದೆ. ಆ ಭಯದ ಎಳೆಯನ್ನು ಹಿಡಿದು ಸಾಗಿದರೆ ಕೊನೆಗೆ ನಾವು ತಲುಪುವುದು ಸಾವಿನ ಆಲೋಚನೆಯನ್ನೇ ಅಲ್ಲವೇ? ನಾವು, ಅಂದರೆ ಇಡೀ ಜೀವಜಾತವು ಮಾಡುವ ಎಲ್ಲ ಕೆಲಸದ ಹಿಂದೆಯೂ ಭಯ ಎನ್ನುವುದೇ ಮುಂದೂಡುವ ಪ್ರೇರಕಶಕ್ತಿಯಾಗಿರುವಂತೆ ಕಾಣಿಸುತ್ತದೆ. ಅಥವಾ ಇದು ಕೆಲಸ ಮಾಡದಿರುವುದಕ್ಕೂ ಕಾರಣ. ಕೆಲಸ ಮಾಡದಿರುವುದು ಎಂದರೆ ಕೂಡ ಒಂದು ರೀತಿಯಲ್ಲಿ ಕೆಲಸ ಮಾಡುವುದು ತಾನೇ? ಒಂದು ಋಣಾತ್ಮಕ ಪರಿಕಲ್ಪನೆ, ಮತ್ತೊಂದು ಧನಾತ್ಮಕ ಪರಿಕಲ್ಪನೆ. ತಿನ್ನುವುದು ಹೇಗೋ ರೋಗ ಬಂದಾಗ ತಿನ್ನದಿರುವುದೂ ಒಂದು ಅನುಸರಿಸಬೇಕಾದ ಕ್ರಮವೇ.

ಅಂದರೆ ನಮ್ಮೆಲ್ಲ ಕೆಲಸಗಳ ಹಿಂದೆ ಭಯ ನಿರಂತರವಾಗಿ, ಒಂದಿಲ್ಲೊಂದು ರೂಪದಲ್ಲಿ ನಮ್ಮನ್ನು ತಿವಿಯುತ್ತಲೇ ಇರುತ್ತದೆ. ಅದರಿಂದಲೇ ನಾವು ಮುಂದೆ ಹೋಗಲು ಸಾಧ್ಯವಾಗುವುದು. ಭಯವಿಲ್ಲದಿದ್ದರೆ ನಾವು ಏನನ್ನಾದರೂ ಮಾಡುತ್ತಿರಲಿಲ್ಲವೇನೋ. ಆಗ ಮನುಷ್ಯನ ನಾಗರಿಕತೆ–ಸಂಸ್ಕೃತಿಗಳಾವುವೂ ಇರುತ್ತಿರಲಿಲ್ಲ, ಪ್ರತಿಕ್ಷಣ ಹೊಸದನ್ನು ಕಂಡುಹಿಡಯುವ ಅನ್ವೇಷಣೆ ಸಾಧ್ಯವಾಗುತ್ತಿರಲಿಲ್ಲ. ಭಯವೇ ಇಲ್ಲದವನು ಯಾರಾದರೂ, ಯಾವ ಜೀವಿಯಾದರೂ ಇರಲು ಸಾಧ್ಯವೇ? ಎಲ್ಲವನ್ನೂ ಬಿಟ್ಟು ಸನ್ಯಾಸಿಯಾಗುವುದರ ಹಿಂದೆಯೂ ಸಾವನ್ನು 'ಗೆಲ್ಲುವ', ಅಂದರೆ ಅದು ನಮ್ಮನ್ನು ಆಹುತಿ ತೆಗೆದುಕೊಂಡುಬಿಡಬಹುದು, ಅದರಿಂದ ಪಾರಾಗಬೇಕು ಎಂಬ ಆತಂಕವೇ ಅಲ್ಲವೇ? ಹೀಗೆ ಭಯ ನಮ್ಮನ್ನು ಸದಾ ಚಟುವಟಿಕೆಯಿಂದಿರುವಂತೆ ಮಾಡುವ ಶಕ್ತಿ. ಅಥವಾ ಫ್ರಾಯ್ಡ್ ಹೇಳಿದ ವ್ಯಾಪಕಾರ್ಥದ ಕಾಮದ ಇನ್ನೊಂದು ರೂಪವೇ ಈ ಭಯವಿರಬಹುದೇ!



# ಆಸೆಕೋರತನದ ಚಾಚುತೋಳುಗಳು

ಈಚೀಚೆಗೆ ಸುಮ್ಮನೆ ಹೊರಗೆ ತಿರುಗಾಡಲು ಹೊರಟಾಗಲೂ, ಯಾವುದಾದರೂ ಅಂಗಡಿಯನ್ನು ಕಂಡಾಗ, ನಾನೇನಾದರೂ ತೆಗೆದುಕೊಳ್ಳುವುದಿದೆಯೇ ಎಂದು ಕ್ಷಣಕಾಲ ಯೋಚಿಸುತ್ತೇನೆ. ಏನಾದರೂ ತೆಗೆದುಕೊಳ್ಳುವುದು ಎಂದರೆ ಯಾವುದನ್ನು? ಮನೆಯವರು ತರಬೇಕೆಂದು ಹೇಳಿರಬಹುದಾದ ಕಾಫಿಪುಡಿಯೋ, ಬ್ರೆಡ್ಡೋ ಮುಂತಾದ ತಿನ್ನುವ ಪದಾರ್ಥಗಳನ್ನಲ್ಲ, ಬೇರೇನನ್ನಾದರೂ. ಅಂದರೆ ಕಣ್ಣಿಗೆ ಆಕರ್ಷಕವಾಗಿರುವುದರಲ್ಲಿ ಯಾವುದನ್ನಾದರೂ ಎಂದು ಅರ್ಥ. ಅದಿಲ್ಲದಿದ್ದರೂ ನಷ್ಟವೇನಿಲ್ಲ, ಅಥವಾ ಬದುಕು ಸಾಗುವುದಿಲ್ಲ ಎಂದೇನಲ್ಲ; ಆದರೂ ಸುಮ್ಮನೆ ಕೊಂಡುಕೊಳ್ಳಬೇಕು ಎಂಬ ಚಪಲ. ಜಾಗತೀಕರಣದಿಂದಾಗಿರುವ ಮನಃ ಪಲ್ಲಟ ಇದೇ ಅಲ್ಲವೇ ಎಂದುಕೊಂಡಿದ್ದೇನೆ. ಬದುಕಿಗೆ ಆವಶ್ಯವಲ್ಲದ, ಎಷ್ಟೋ ಬಾರಿ ಅನವಶ್ಯಕವೇ ಆಗಿರಬಹುದಾದುದನ್ನೂ ಪಡೆಯಬೇಕೆಂಬಾಸೆ. ಈ ಆಸೆ ಹೇಗೆ ಕಬಂಧನಂತೆ ನಮ್ಮನ್ನಾವರಿಸಿಬಿಟ್ಟಿದೆ ಎಂದು ಯೋಚಿಸಿದಷ್ಟೂ ಆಶ್ಚರ್ಯವಾಗುತ್ತದೆ.

ನಿವೃತ್ತನಾದ ಮೇಲೆ ಮನೆಯಲ್ಲಿರುವುದೇ ಹೆಚ್ಚು ತಾನೇ? ಮನೆಯಲ್ಲಿ ಕುಳಿತೇ ನನ್ನ ಕೆಲಸವನ್ನು ಅಂದರೆ ಬರವಣಿಗೆಯನ್ನು ಮಾಡಿದರೂ, ಯಾವುದೋ ನಿಗದಿತ ಜಾಗಕ್ಕೆ ಹೋಗಿ ನಿಯತ ಕಾಲಾವಧಿಯಲ್ಲಿ ಕಾರ್ಯನಿರತನಾಗಬೇಕಾದ, ಅಥವಾ ಅದನ್ನು ಕೆಲಕಾಲಾವಧಿಯಲ್ಲಿಯೇ ಮಾಡಬೇಕಾದ ನಿರ್ಬಂಧವಿಲ್ಲವಲ್ಲ. ಹೀಗಾಗಿ ಮಧ್ಯಾಹ್ನದ ಹೊತ್ತು ಊಟವಾದ ಮೇಲೆ ಸ್ವಲ್ಪಕಾಲ ನಿದ್ದೆ ಮಾಡುವ ಅಭ್ಯಾಸ ನನ್ನದು (ವಾಮಕುಕ್ಷಿಯಾಗುವುದು ಅನ್ನುತ್ತಾರಲ್ಲ, ಹಾಗೆ). ನಮ್ಮ ಮನೆಯಿರುವ ಬೀದಿಯೇನೂ ಮುಖ್ಯರಸ್ತೆಯಲ್ಲ, ಗಲಿಬಿಲಿಯದಲ್ಲ, ವಾಹನಗಳ ಓಡಾಟ ಹೆಚ್ಚಿಲ್ಲ, ಬೆಳಿಗ್ಗೆ ಎಲ್ಲ ತಮ್ಮ ತಮ್ಮ ಕೆಲಸಗಳಿಗೆ ಹೋಗುವಾಗ, ಸಂಜೆ ಮನೆಗೆ ವಾಪಸಾಗುವಾಗ, ಆಸುಪಾಸಿನವರ ವಾಹನಗಳ ಓಡಾಟ, ಅಷ್ಟೆ. ನಮ್ಮ ಬೀದಿಯ, ಮೂಲಕ ಇತರರ ವಾಹನಗಳು ಓಡಾಡುವುದಿಲ್ಲ. ಹೀಗಾಗಿ ಮಧ್ಯಾಹ್ನದ ವೇಳೆಯಲ್ಲಂತೂ ವಾತಾವರಣ ಪ್ರಶಾಂತವಾಗಿರುತ್ತದೆ. ಆದರೆ ಈಚೆಗೆ ನನ್ನ ನಿದ್ದೆಗೆ ಸ್ವಲ್ಪ ತೊಂದರೆ. ಇನ್ನೇನು ನಿದ್ದೆ ಹತ್ತಬೇಕು ಎನ್ನುವಾಗಲೋ, ಅಥವಾ ನಿದ್ದೆಯ ಆಳ(ಅದೆಷ್ಟೇ ಆಗಿರಲಿ)ದಲ್ಲಿರುವಾಗಲೋ ಮನೆಯ ಕಾಲಿಂಗ್ ಬೆಲ್ ಚಿಲಿಪಿಲಿ ಯೆನ್ನುತ್ತದೆ. ಎದ್ದು ಹೋಗಿ ಬಾಗಿಲು ತೆರೆದರೆ, ಕೃತಕ ನಗೆಯನ್ನು ಮುಖದ ಮೇಲೆ

ಎಳೆದುಕೊಂಡು, ಬೆನ್ನು ಬಾಗಿಸಿ, ಕೈ ಚಾಚುತ್ತ, "ಗುಡ್ ಆಫ್ಟರ್‌ನೂನ್ ಸರ್" ಎಂಬ ಅತ್ಯಂತ ಆತ್ಮೀಯವೆನ್ನಿಸುವ ಧ್ವನಿ, ನಡವಳಿಕೆಯ ವ್ಯಕ್ತಿ ಕಣ್ಣಿಗೆ ಬೀಳುತ್ತಾನೆ. ಅವನ ಕೈಲಿ ಏನೋ ಇರುತ್ತದೆ, ಭುಜದ ಮೇಲೆ ದೊಡ್ಡ ಬ್ಯಾಗೊಂದಿರುತ್ತದೆ, ಅಥವಾ ಪಕ್ಕದಲ್ಲಿರಿಸಿಕೊಡಿರುತ್ತಾನೆ. ಅವನೊಬ್ಬ ಸೇಲ್ಸ್‌ಮನ್; ತಾನು ಮಾರಾಟ ಮಾಡಬೇಕಾಗಿರುವ ವಸ್ತುವಿನ ಗುಣಗಾನ ಮಾಡುತ್ತಾನೆ, ನನಗೆ ಮಾತ್ರವೇ ರಿಯಾಯಿತಿ ದರದಲ್ಲಿ ನೀಡುತ್ತೇನೆ ಎನ್ನುತ್ತಾನೆ, ಒಂದು ತೆಗೆದುಕೊಂಡರೆ ಎರಡು ಫ್ರೀ ಎನ್ನುತ್ತಾನೆ. ಅದು ಯಾವ ಥರದ ವಸ್ತು; ತಿನ್ನುವುದೇಮ ಕುಡಿಯುವುದೇ? ಉಹ್ಞೂ, ಷೋಕೇಸಿನಲ್ಲೋ ಕಪಾಟಿನಲ್ಲೋ ಇಡುವಂಥದು. ಎಷ್ಟೋ ಸಲ ಒಬ್ಬರಾದ ಮೇಲೆ ಒಬ್ಬರು ಸೇಲ್ಸ್‌ಮನ್‌ಗಳು ಬರುತ್ತಲೇ ಇರುತ್ತಾರೆ. ಅವರಲ್ಲಿ ಬಹುಮಂದಿ ಇಂಗ್ಲಿಷಿನಲ್ಲಿಯೇ ಮಾತನಾಡುವುದು, ಹಾಗೆ ಮಾಡಬೇಕೆಂದು ಹೇಳಿರುತ್ತಾರೇನೋ. ಅವರ ಭಾಷೆಯೂ ಅವರ ಮಾರಾಟದ ಸರಕಿನಂತೆಯೇ, ಆವಶ್ಯಕವಾದುದೇನಲ್ಲ.

ಈಚೆಗೆ ಹೆಚ್ಚಾಗಿರುವ ಈ ಪರಿಯ ಬಗ್ಗೆ ಆಲೋಚಿಸುತ್ತೇನೆ. ನಮಗೆ ಆವಶ್ಯಕವಾದ ವಸ್ತುಗಳು ಆ ಮಾರಾಟಗಾರರ ಬಳಿ ಏನೂ ಇರುವುದಿಲ್ಲ, ಅಥವಾ ಜೀವನಾವಶ್ಯಕ ವಸ್ತುಗಳನ್ನು ಮಾರುವವರು ಮನೆಯ ಮುಂದೆ ಸರಕು ಹೊತ್ತು ಬರುವುದಿಲ್ಲ. ಹಾಗೆ ಬರುವವರು ತರಕಾರಿ ಮಾರುವವರು ಮಾತ್ರ, ಅವರೆಲ್ಲ ಬೆಳಿಗ್ಗೆಯೇ ಬಂದು ಹೋಗಿರುತ್ತಾರೆ, ಮಧ್ಯಾಹ್ನದ ಹೊತ್ತು ಅವರ ಸುಳಿದಾಟವಿಲ್ಲ. ಬರುವವರು ಗಿಲೀಟು ವಸ್ತುಗಳವರು. ಅದು ಅಂಥದು ಇಂಥದು ಎಂದೇನೂ ಇಲ್ಲ, ಯಾವುದಾದರೂ ಆಗಬಹುದು. ಏಕೆಂದರೆ, ಆವಶ್ಯಕ ಎನ್ನಿಸುವುದನ್ನು ನಾವೇ ಹುಡುಕಿಕೊಂಡು ಹೋಗಿ ತರುತ್ತೇವೆ, ಯಾರೂ ಮನೆಯ ಮುಂದೆ ಬಂದು ತೆಗೆದು ಕೊಳ್ಳಲು ಬಲವಂತ ಮಾಡಬೇಕಾಗಿಲ್ಲ; ಎಷ್ಟೇ ದುಬಾರಿಯಾದರೂ ಅವುಗಳನ್ನು ನಾವು ಕೊಳ್ಳುವವರೇ. ಅಕ್ಕಿ ಬೇಳೆ ಮೆಣಸಿನಕಾಯಿಗಳನ್ನು ಹೊತ್ತು ಮನೆ ಮುಂದೆ ಮಾರಲು ಯಾರೂ ಬರುವುದಿಲ್ಲ, ಬರುವವರು ಯಾವುದು ಇಲ್ಲದಿದ್ದರೂ ಬದುಕು ನಡೆಯುವುದೋ ಅಂಥವನ್ನು ಮಾರುವವರು.

ನಾವು ಪ್ರತಿ ತಿಂಗಳೂ ಯಾವುದಕ್ಕೆ ಹೆಚ್ಚು ಖರ್ಚುಮಾಡುತ್ತಿದ್ದೇವೆಂಬುದನ್ನು ಲೆಕ್ಕ ಹಾಕಿ ನೋಡಿದರೆ, ಅದರಲ್ಲಿ ಆವಶ್ಯಕವಾದುದಕ್ಕಿಂತ ಬೇಕಿಲ್ಲದಿರುವುದಕ್ಕೆ ಅಥವಾ ಲಕ್ಷುರಿ ಅನ್ನುತ್ತಾರಲ್ಲ ಅಂಥವಕ್ಕೆ ಮಾಡುವ ಖರ್ಚು ಹೆಚ್ಚಾಗಿರುತ್ತದೆ. ಅದು ದಿನದಿನಕ್ಕೂ ಹೆಚ್ಚಾಗುತ್ತ ಹೋಗುತ್ತಿದೆ. ಮೊದಮೊದಲು, ಬೆಂಗಳೂರಿನಂತಹ ಕಡೆಗಳಲ್ಲಿ ದೂರದ ಆಫೀಸುಗಳಿಗೆ ಬಸ್ಸುಗಳಲ್ಲಿ ಹೋಗಿಬರುವುದು ಕಷ್ಟ ಎಂದು ಸ್ಕೂಟರ್‌ನಂತಹ ವಾಹನ ಕೊಳ್ಳುವುದು ಅನಿವಾರ್ಯವೆನ್ನಿಸಿ ಹಾಗೆ ಮಾಡುತ್ತಿದ್ದರು, ಈಗ ಸ್ಕೂಟರ್‌ನಲ್ಲಿ ಓಡಾಡುವುದು ರಿಸ್ಕಿ, ಅಷ್ಟೊಂದು ಟ್ರಾಫಿಕ್ ಆದ್ದರಿಂದ ಕಾರೇ ಬೇಕು ಎಂದು ಅವರಿಗೆ ಎನ್ನಿಸುತ್ತದೆ. ಮೊದಲು ಯಾವುದೋ ಒಂದು ಕಾರನ್ನು ಕೊಂಡ ಮರು ತಿಂಗಳೇ ಅದಕ್ಕಿಂತ ಉತ್ತಮವಾದ ಕಾರಿದ್ದರೆ ಚೆನ್ನಾಗಿರುತ್ತಿತ್ತಲ್ಲ

ಎನ್ನಿಸುತ್ತದೆ. ಮೊದಲ ಕಾರಿನ ಮೇಲೆ ಮಾಡಿದ ಸಾಲ ತೀರಿದ ತಕ್ಷಣ ಅದಕ್ಕಿಂತ ಉತ್ತಮವಾದ ಕಾರ್ ತೆಗೆದುಕೊಳ್ಳಬೇಕೆಂಬ ನಿರ್ಧಾರ. ಗಂಡಹೆಂಡತಿಯರು ಬೇರೆ ಬೇರೆ ಕಡೆಗಳಲ್ಲಿ ಕೆಲಸ ಮಾಡಿದರೆ, ಅವರ ಕೆಲಸದ ಅವಧಿ ಬೇರೆ ಬೇರೆಯಾದ್ದರಿಂದ ಇಬ್ಬರಿಗೂ ಬೇರೆ ಬೇರೆ ಕಾರೇ ಆಗಬೇಕೆಂದೂ ಅನ್ನಿಸುತ್ತದೆ. ಮನೆಯವರೆಲ್ಲ ಬಯಸಿದಾಗ ಒಟ್ಟಿಗೇ ಪಿಕ್‌ನಿಕ್ ಹೋಗಲು ಒಂದು ವಾಹನವಿದ್ದರೆ ಚೆನ್ನಲ್ಲವೇ ಅನ್ನಿಸಿ ಸ್ಕಾರ್ಪಿಯೋ ಒಂದನ್ನು ಕೊಂಡರೆ ಹೇಗೆ? ಎಲ್ಲದಕ್ಕೂ ಸುಲಭ ಸಾಲ ಬೇರೆ ಸಿಕ್ಕುತ್ತದೆ, ಅದೂ ಜ಼ೀರೋ ಬಡ್ಡಿದರದಲ್ಲಿ! ಇದು ಹೀಗೇ ಸಾಗುತ್ತದೆ, ಕೊನೆಯೇ ಇಲ್ಲ, ಹನುಮಂತನ ಬಾಲದಂತೆ ಅನ್ನುತ್ತಾರಲ್ಲ, ಹಾಗೆ. ಹನುಮಂತನ ಬಾಲದ ಹಾಗೆಯೇ ಇದೂ ಕೊನೆಗೆ ಲಂಕಾದಹನ ಮಾಡುತ್ತದೋ ಏನೋ! ಅಮೆರಿಕದಲ್ಲಿ ಒಂದೊಂದು ಮನೆಯಲ್ಲಿಯೂ ಒಬ್ಬೊಬ್ಬರಿಗೆ ಒಂದೊಂದರಂತೆ ಮೂರುನಾಲ್ಕು ಕಾರುಗಳಿರುತ್ತವೆ ಎಂದು ಕೇಳಿ ಹಿಂದೆ ಬೆರಗುಗೊಂಡಿದ್ದೆವು. ಆದರೆ ಈಗ ನಮ್ಮ ಮನೆಗಳಲ್ಲಿಯೇ ಹಾಗಿದೆ. ಜಾಗತೀಕರಣ ಅಂದರೆ ಅದೇ ತಾನೇ, ಅಮೆರಿಕದ ಅನುಕರಣ?

ಹುಡುಗರಾಗಿದ್ದಾಗ ನಮಗೆ ಸೋಷಿಯಲಿಸಮ್ ಅಂದರೆ ಒಂದು ಬಗೆಯ ಗೌರವ, ಎಲ್ಲರಿಗೂ ಇದ್ದುದನ್ನು ನೀಡುವ, ದುರದೃಷ್ಟವಂತರಿಗೆ ಸ್ವಲ್ಪ ಹೆಚ್ಚು ಅವಕಾಶ ಒದಗಿಸುವ, ಉಳ್ಳವರ–ಇಲ್ಲದಿರುವವರ ನಡುವಣ ಅಂತರ ಕಡಿಮೆ ಮಾಡುವ ಆದರ್ಶ. ಆದರೆ ಇಂದು? ಎಲ್ಲರಿಗೂ ವಿದ್ಯೆ ಎಂಬುದು ಹೋಗಿ ಉಳ್ಳವರಿಗೆ ವಿದ್ಯೆ ಎಂಬ ಸ್ಥಿತಿ. ಮುಕ್ತತೆ ಈಗಿನ ಮಂತ್ರ. ಯಾರು ಎಷ್ಟು ಮಾಡಿ ಕೊಳ್ಳಬಲ್ಲರೋ ಅದಕ್ಕೆ ಅವಕಾಶವಿರಬೇಕು ಎಂಬ ವಾದ. ಹಾಗಾಗಿ ಮಿತಿ ಎಂಬುದು ಯಾವುದಕ್ಕೂ ಇಲ್ಲ. ಮೆರಿಟ್ ಆ ಮಂತ್ರದ ಇನ್ನೊಂದು ಸಾಲು. ಕೆಳವರ್ಗದವರಿಗೆ ಮೀಸಲಾತಿ ಕೂಡದು; ಅದರಿಂದ ಮೆರಿಟ್‌ಗೆ ಮಾರಕ. ಈಗ ಮೆರಿಟ್‌ಗೂ ಬೆಲೆ ಬಂದಿದೆ; ಯಾರು ಹೆಚ್ಚು ಹಣ ನೀಡಬಲ್ಲರೋ ಅವರೂ ಮೆರಿಟ್‌ವಂತರೇ ತಾನೇ? ಇದರಿಂದಾಗಿ ಒಂದೆಡೆ, ಹಣವಿರುವವರ ಕೊಳ್ಳುವಿಕೆ; ಮತ್ತೊಂದೆಡೆ, ಪರೀಕ್ಷೆಯಲ್ಲಿ ಹೆಚ್ಚು ಅಂಕ ಗಳಿಸಿದನೆಂದು, ಅಕ್ಕಿ ಮರದಲ್ಲಿ ಬೆಳೆಯುತ್ತದೆ ಎಂದು ನಂಬಿದವನಿಗೂ ಕೃಷಿ ವಿಶ್ವವಿದ್ಯಾಲಯದಲ್ಲಿ ಮೆರಿಟ್ ಸೀಟು!

☆ – ☆ – ☆

# ಅಪಾಯಕೋಟಿ

ಕೆಲವು ದಿನಗಳ ಹಿಂದೆ ಸ್ನೇಹಿತರೊಬ್ಬರು ಸಿಕ್ಕಿದ್ದರು, ಸಿಕ್ಕಿ ಬಹಳ ದಿನಗಳಾಗಿತ್ತು, ಕಾರಣ ವಿಚಾರಿಸಿದೆ. ಒಂದು ದಿನ ಬೆಳಿಗ್ಗೆ ಹನ್ನೊಂದು ಗಂಟೆಯ ಸಮಯ. ರಿಪೇರಿಗೆ ಕೊಟಿದ್ದ ಸ್ಕೂಟರನ್ನು ಗ್ಯಾರೇಜಿಂದ ವಾಪಸು ತರಲು ನಡೆದುಕೊಂಡು ಹೊರಟರು. ರಸ್ತೆ ದಾಟುತಿದ್ದಂತೆ; ಅವರ ಮನಸ್ಸಿನಲ್ಲಿ ಯಾಕೋ ತಮ್ಮ ಬಾಲ್ಯದಲ್ಲಿ ಕಂಡಿದ್ದ ತಮ್ಮ ಊರ ಸಂತೆಯ ದೃಶ್ಯ ನೆನಪಿಗೆ ಬಂದಿತ್ತು. ಏನಾಯಿತೋ ತಿಳಿಯದು, ಕಣ್ಣು ಬಿಟ್ಟಾಗ ಮಧ್ಯಾಹ್ನ ಮೂರು ಗಂಟೆ, ಆದರೆ ಆಗಲೂ ಸಂತೆಯ ದೃಶ್ಯದ ಗುಂಗು ಮನಸ್ಸಿನಲ್ಲಿತ್ತಂತೆ. ಆಗಿದ್ದುದಿಷ್ಟು: ಅವರು ರಸ್ತೆಯ ಮಧ್ಯದಲ್ಲಿಯೇ ಇದ್ದಕ್ಕಿದ್ದಂತೆ ಕುಸಿದುಬಿದ್ದಿದ್ದರು, ಯಾರೋ ದಾರಿಹೋಕರು ಅದನ್ನು ಕಂಡು ಅವರನ್ನು ಆಸ್ಪತ್ರೆಗೆ ಸೇರಿಸಿದ್ದರು.

ಆಮೇಲೆ ಡಾಕ್ಟರ್ ಕೊಟ್ಟ ವಿವರಗಳು: ಅವರ ನಾಡಿಮಿಡಿತ ನಿಮಿಷಕ್ಕೆ ಎಪ್ಪತ್ತೆರಡು ಇರುವುದರ ಬದಲು ಇಪ್ಪತ್ತೆರಡಕ್ಕೆ ಇಳಿದಿತ್ತಂತೆ; ಹೃದಯದಲ್ಲಿ 'ಪೇಸ್‌ಮೇಕರ್' ಎಂಬ ಭಾಗವಿರುತ್ತದಂತೆ, ಅದು ಹೃದಯಕ್ಕೆ ವಿದ್ಯುತ್ ತರಂಗದ ಮೂಲಕ ಸೂಚನೆಗಳನ್ನು ನೀಡಿ ಅದರ ಮಿಡಿತವನ್ನು ಕ್ರಮಬದ್ಧಗೊಳಿಸುತ್ತದಂತೆ; ಅದು ಬಹುಮಟ್ಟಿಗೆ ನಿಷ್ಕ್ರಿಯವಾಗಿತ್ತು. ಹಾಗಾಗಿ ಒಂದು ಕೃತಕ 'ಪೇಸ್‌ಮೇಕರ್' ಅಳವಡಿಸಲು ಆಪರೇಷನ್ ಮಾಡಿದರು. ಅದು ಒಂದು ಸಣ್ಣ ಯಂತ್ರ, ಬ್ಯಾಟರಿಯ ಸಹಾಯದಿಂದ ಕೆಲಸ ನಿರ್ವಹಿಸಿ ವಿದ್ಯುತ್ ತರಂಗಗಳನ್ನು ಹೃದಯಕ್ಕೆ ರವಾನಿಸುತ್ತದೆ, ಆಗ ಮತ್ತೆ ನಾಡಿಮಿಡಿತ ಕ್ರಮಬದ್ಧಗೊಳ್ಳುತ್ತದೆ. ಇದನ್ನೆಲ್ಲ ಹೇಳಿ, ಯಾವ ಮುನ್ಸೂಚನೆಯೂ ಇಲ್ಲದೆ, ರೋಗಲಕ್ಷಣಗಳೂ ಕಾಣಿಸಿಕೊಳ್ಳದೆ ಈ ರೀತಿ ಆಯಿತೆಂದು ವಿವರಿಸಿ, ತಾವು ಕುಸಿದು ಬಿದ್ದುದು ರಸ್ತೆಯ ನಡುವೆ, ಅದೂ ಮುಖ್ಯ ರಸ್ತೆ, ಬಸ್ಸುಗಳು ಓಡಾಡುವಂಥದು, ತಾವು ಬಿದ್ದಾಗ ಯಾವುದೋ ವಾಹನ ಜೋರಾಗಿ ಬಂದಿದ್ದರೆ ಏನು ಗತಿ, ಅಥವಾ ತಾವು ಸ್ಕೂಟರನ್ನು ಹತ್ತಿ ಹೋಗುತ್ತಿದ್ದಾಗ ಹೀಗಾಗಿದ್ದರೆ ಏನು ಪಾಡು, ಬಿದ್ದು ತಲೆಯಿಂದ ಸಾಕಷ್ಟು ರಕ್ತ ಸುರಿದಿದ್ದರೂ ಏನೂ ಆಗದಿದ್ದುದು ಇವನ್ನೆಲ್ಲ ನೆನಸಿಕೊಂಡು ಆಶ್ಚರ್ಯಪಟ್ಟರು. ಹೃದಯದ ಮಿಡಿತ ಅಷ್ಟು ಕಡಿಮೆಯಾಗಿದ್ದರೂ ಇವರು ಸಾಯದಿದ್ದುದೇ ವಿಸ್ಮಯ ಎಂದು ಡಾಕ್ಟರರೂ ಅಚ್ಚರಿಪಟ್ಟರಂತೆ. ಇದ್ದಕ್ಕಿದ್ದಂತೆ ಹೀಗಾಗಲು ಏನು ಕಾರಣ

ಎಂದು ಕೇಳಿದಾಗ ಡಾಕ್ಟರರು ಎಷ್ಟೋ ವಿಷಯಗಳನ್ನು ವೈದ್ಯವಿಜ್ಞಾನವೂ ಇನ್ನೂ ವಿವರಿಸಲು ಸಾಧ್ಯವಾಗಿಲ್ಲ, ಇದೂ ಹಾಗೆಯೇ ಎಂದರಂತೆ.

ನಾನಂತೂ ಇದನ್ನು ಕೇಳಿ ಅಚ್ಚರಿಪಟ್ಟೆ. ನನ್ನ ಸ್ನೇಹಿತರು "ಇಲ್ಲಿ ಮುಟ್ಟಿ ನೋಡಿ" ಎಂದು ತಮ್ಮ ಬಲಭುಜದ ಕೆಳಗೆ ಎದೆಯ ಮೇಲ್ಭಾಗದಲ್ಲಿ ತೋರಿಸಿದರು. ಮುಟ್ಟಿದೆ; ಏನೋ ಗಟ್ಟಿಯಾದದ್ದು ಒಳಗಿರುವುದು ಸ್ಪರ್ಶಕ್ಕೆ ಗೊತ್ತಾಯಿತು. ಅದೇ ಕೃತಕ ಪೇಸ್‌ಮೇಕರ್ ಅಂತೆ.; ಒಂದು ಬೆಂಕಿ ಪೆಟ್ಟಿಗೆಯಷ್ಟು ಗಾತ್ರದ ಯಂತ್ರ, ಅದರಲ್ಲಿ ಅಳವಡಿಸಿರುವ ಬ್ಯಾಟರಿಗೆ ಜೀವನಪೂರ್ತ ಆಯುಸ್ಸು. ಹಿಂದಾಗಿದ್ದಿದ್ದರೆ ಪ್ರತಿ ವರ್ಷ ಬ್ಯಾಟರಿ ಬದಲಿಸಿಕೊಳ್ಳಲು ಅಲ್ಲಿ ಕತ್ತರಿಸಬೇಕಾಗುತ್ತಿತ್ತಂತೆ. ವಿಜ್ಞಾನ ನಮಗೆ ಏನೆಲ್ಲ ಸೌಕರ್ಯಗಳನ್ನು ಒದಗಿಸಿದೆ ಎಂಬುದನ್ನ ನೆನೆದರೆ ಬೆರಗುವಡು ವಂತಾಗುತ್ತದೆ. ಹೊರಗಿನ ವಸ್ತುವನ್ನು ದೇಹ ಸ್ವೀಕರಿಸಲು ಪ್ರತಿಭಟಿಸುತ್ತದೆ; ಹೀಗಾಗಿ ಅವರ ದೇಹದ ಮೇಲೆ ಆ ಪ್ರತಿಭಟನೆಯ ಗುರುತಾಗಿ ಅನೇಕ ಗುಳ್ಳೆಗಳೆದ್ದಿದ್ದವು. ಕಾಲ ಸರಿದಂತೆ ಬಹುಪಾಲು ಸಂದರ್ಭಗಳಲ್ಲಿ ದೇಹವೂ ಹೊರಗಿನಿಂದ ಬಂದ ವಸ್ತುವಿನೊಡನೆ ರಾಜಿ ಮಾಡಿಕೊಳ್ಳುತ್ತದೆ.

ಇಷ್ಟನ್ನು ಹೇಳಿ ನನ್ನ ಸ್ನೇಹಿತರು, ತಮ್ಮೊಂದು ಪ್ರಶ್ನೆಗೆ ಉತ್ತರವಾಗಿ ಡಾಕ್ಟರರು, ಅಸಂಖ್ಯಾತ ರೋಗಗಳು ಬರಲು ದೇಹದಲ್ಲಿಯೇ ಅವಕಾಶಗಳಿವೆ ಎಂದಿದ್ದರಂತೆ; ಬೆರಳ ತುದಿಯಲ್ಲಿಯೂ ರೋಗಗಳುಂಟಾಗುವ ಸಾಧ್ಯತೆಗಳಿವೆ ಎಂದಿದ್ದರಂತೆ. ಅದನ್ನು ನೆನಪಿಸಿಕೊಂಡು ಅವರು ಹನ್ನೆರಡನೆಯ ಶತಮಾನದ ಕನ್ನಡ ಕವಿ ತನ್ನ 'ಯಶೋಧರ ಚರಿತೆ' ಎಂಬ ಕಾವ್ಯದಲ್ಲಿ ಹೇಳಿದ ಒಂದು ಸಾಲನ್ನು ನೆನಪಿಸಿಕೊಂಡರು (ಅವರೂ ಕನ್ನಡ ಅಧ್ಯಾಪಕರು). "ಎನಿತು ಒಳವು ಅಪಾಯಕೋಟಿಗಳ್ ಅನಿತರ್ಕಂ ಗೇಹಮಲ್ತೆ ದೇಹಂ?" ಎಂಬುದು ಆ ಮಾತು. ಎಷ್ಟೆಷ್ಟು ಅಪಾಯಗಳಿವೆಯೋ ಅವೆಲ್ಲಕ್ಕೂ ಈ ದೇಹವೇ ಮನೆ, ಆವಾಸಸ್ಥಾನ ಎಂಬುದು ಅದರ ಅರ್ಥ. (ಈ ಅಪಾಯಗಳಲ್ಲಿ ಸಾಕಷ್ಟು ದೇಹದಲ್ಲಿಯೇ ಅಂತರ್ಗತವಾಗಿವೆ, ಮತ್ತೆ ಕೆಲವು ಹೊರಗೂ ಇವೆ). ಈ ಮಾತು ಬರುವುದು ಈ ಸನ್ನಿವೇಶದಲ್ಲಿ: ಹಿಂಸಾಸಂಕಲ್ಪದಿಂದ ಯಶೋಧರ ಎಂಬ ರಾಜ ಮತ್ತವನ ತಾಯಿ ಚಂದ್ರಮತಿಯರು ಏಳು ಪ್ರಾಣಿ ಜನ್ಮಗಳನ್ನೆತ್ತಿ ಎಂಟನೆಯದರಲ್ಲಿ ಸತ್ಕುಲಪ್ರಸೂತರಾಗಿ ಹುಟ್ಟಿ, ಚಿಕ್ಕ ವಯಸ್ಸಿನಲ್ಲಿಯೇ ವೈರಾಗ್ಯ ತಳೆದು ದೀಕ್ಷೆ ವಹಿಸಿ, ಒಂದು ದಿನ ಗುರುಗಳ ಆಜ್ಞೆಯ ಪ್ರಕಾರ ಚರಿಗೆಗೆಂದು ಹೋಗುತ್ತಿರಲು, ಒಬ್ಬ ರಾಜ ನರಬಲಿ ಕೊಡಲು ಚಿಕ್ಕ ವಯಸ್ಸಿನ ಹುಡುಗರನ್ನು ಕರೆತರಲು ಮಾಡಿದ ಅಪ್ಪಣೆಗನುಸಾರವಾಗಿ ಚಂಡಕರ್ಮ ಎಂಬ ತಳವಾರನೊಬ್ಬ ಇವರನ್ನು ಕಂಡು ಹಿಡಿದುಕೊಂಡಾಗಿನ ಸನ್ನಿವೇಶದಲ್ಲಿ, ಅಣ್ಣ ತನ್ನ ತಂಗಿಯನ್ನು ಸಮಾಧಾನ ಮಾಡುತ್ತ ಈ ಮಾತು ಹೇಳುತ್ತಾನೆ.

ದೇಹವನ್ನು ಘಟ ಎನ್ನುತ್ತಾರೆ, ಅಂದರೆ ಮಡಕೆ, ಮಣ್ಣಿನದು. ಅದನ್ನು

ಸ್ವಲ್ಪವೇ ಮೇಲೆತ್ತಿ ಬಿಟ್ಟರೆ ಕೆಳಗೆ ಬಿದ್ದು ಒಡದು ಹೋಗುತ್ತದೆ. ಈ ಬೀಳುವುದು ಯಾವ ಕಾರಣದಿಂದಲೂ ಆಗಬಹುದು. ಯಾರೂ ಉದ್ದೇಶಪೂರ್ವಕವಾಗಿ ಮಡಕೆಯನ್ನು ಎಸೆಯರು; ಆದರೆ ಅಕಸ್ಮಾತ್ ಹಾಗಾಗಿಬಿಡಬಹುದು. ಈ ಅಕಸ್ಮಾತ್ ಎಂಬುದೇ ಮುಖ್ಯ. ಯಾವಾಗ ಹೇಗೆ ಆಗುತ್ತದೆ ಎಂಬುದನ್ನು ಸೂಚಿಸದೆಯೇ ನಡೆದುಬಿಡುವುದೇ ಅಕಸ್ಮಾತ್. ಇಂಥದೊಂದು ನಡೆಯುತ್ತದೆ ಎಂಬ ಪೂರ್ವ ಸೂಚನೆ ದೊರೆತರೆ, ಅದನ್ನು ತಪ್ಪಿಸಲು ಏನಾದರೂ ಎಚ್ಚರಿಕೆ ವಹಿಸಬಹುದು. ಆದರೆ ಅದನ್ನು ಊಹಿಸಲು ಸಾಧ್ಯವಿಲ್ಲ. ಎಷ್ಟೇ ಎಚ್ಚರಿಕೆ ವಹಿಸಿದರೂ ಆಕಸ್ಮಿಕ ಸಂಭವಿಸುತ್ತದೆ. ಇದನ್ನು ನಿವಾರಿಸುವುದು ಹೇಗೆ? ಪ್ರಾಯಶಃ ಅದನ್ನೆದುರಿಸುವುದೇ ಇರುವ ಉಪಾಯ. ತಪ್ಪಿಸಲು ಸಾಧ್ಯವಿಲ್ಲದ್ದನ್ನು ಎದುರಿಸುವುದು ಅನಿವಾರ್ಯ.

ವಿಜ್ಞಾನ ತಂತ್ರಜ್ಞಾನಗಳು ಮುಂದುವರಿಯುತ್ತ ನಮ್ಮ ಅನೇಕ ಸಂಕಟಗಳಿಗೆ ಪರಿಹಾರಗಳನ್ನು ಕಂಡುಹಿಡಿದಿವೆ. ಸಂಕಟ ಬಂದಾಗ ಅದನ್ನೆದುರಿಸಲು ನಮ್ಮನ್ನು ಸಜ್ಜುಗೊಳಿಸಿದೆಯೇ ಹೊರತು, ಸಂಕಟಗಳನ್ನೇ ನಿವಾರಿಸಿಲ್ಲ ಅಲ್ಲವೇ? ಕೆಲವು ವೇಳೆ ಕೆಲವು 'ನಿವಾರಣೆ'ಗೊಂಡಂತೆ ಕಂಡರೂ ಅವು ಮತ್ತಾವುದೋ ರೂಪದಲ್ಲಿ ಕಾಣಿಸಿಕೊಳ್ಳಬಹುದು. ಹಿಂದೆ ಕೇಳಿರದ ಕಾಯಿಲೆಗಳನ್ನು ಈಗ ವೈದ್ಯವಿಜ್ಞಾನ ಪತ್ತೆ ಮಾಡಿಲ್ಲವೇ; ಬದುಕಿನ ವಾತಾವರಣ ಬದಲಾದಂತೆ ಹೊಸ ರೋಗಗಳು ಸಂಕಟಗಳು ಹುಟ್ಟಿಕೊಂಡಿಲ್ಲವೇ? ಅಂದರೆ ಮನುಷ್ಯ ಪರಿಹಾರಗಳನ್ನು ಕಂಡು ಹಿಡಿಯುತ್ತ ಹೋದಂತೆಲ್ಲ ಪ್ರಕೃತಿ ಹೊಸ ಸಂಕಟಗಳನ್ನು, ಅಥವಾ ಅವನ್ನೇ ಹೊಸ ರೂಪದಲ್ಲಿ ಸೃಷ್ಟಿಸುವಂತೆ ತೋರುತ್ತದೆ. ಸ್ವಲ್ಪ ಕಾಲ ಅವನ್ನು ನಿಯಂತ್ರಿಸಲು ಸಾಧ್ಯವಾಗಿರಬಹುದೇ ಹೊರತು ಪೂರ್ತಿ ಹೋಗಲಾಡಿಸಲು ಸಾಧ್ಯವಾಗಿಲ್ಲ; ಪ್ರಾಯಶಃ ಮುಂದೆಯೂ ಸಾಧ್ಯವಾಗದೇ ಹೋಗಬಹುದು. ಮುಂದುವರೆದಷ್ಟೂ ಹೊಸಹೊಸದನ್ನು ಕಾಣುವುದು ಎರಡು ರೀತಿಗಳಲ್ಲೂ ನಿಜ; ನಮಗೆ ಅನುಕೂಲಕರ ವಾದುದನ್ನು ಹಾಗೂ ಹೊಸ ಸಂಕಟಗಳನ್ನು. ಹೀಗಾಗಿ ನಾವೆಷ್ಟೇ ಮುಂದು ವರೆದರೂ ಪ್ರಕೃತಿಯೇ ಆತ್ಯಂತಿಕವಾಗಿ ನಮ್ಮನ್ನು ನಿಯಂತ್ರಿಸುವ ಶಕ್ತಿ ಎಂಬುದು ದೃಢವಾಗುತ್ತದೆ. 'ಹಲ್ಲುಗಳ ಮಧ್ಯದಲ್ಲಿರುವ ನಾಲಗೆ' ಎನ್ನುತ್ತಾರಲ್ಲ ಹಾಗೆಯೇ ನಮ್ಮ ಬದುಕು ಸಂಕಟಗಳ ನಡುವೆಯೇ ಇದ್ದು, ಒದಗಿದಾಗ ಎದುರಿಸುವ ಅನಿವಾರ್ಯ ಮುಂದುವರೆಯುತ್ತಲೇ ಇದೆ. ಹಾಗಾಗಿ "ಎನಿತು ಒಳವು ಅಪಾಯಕೋಟಿಗಳ್ ಅನಿತರ್ಕಂ ಗೇಹಮಲ್ತೆ ದೇಹಂ?" ಎಂಬ ಜನ್ನನ ಮಾತು ಅದೆಷ್ಟು ಸಮಂಜಸ!



# ಮತ್ತೆ ಮಧ್ಯಮವರ್ಗ

ಪ್ರಾಚೀನ ಸಮಾಜಗಳಲ್ಲಿ ಮಧ್ಯಮವರ್ಗ ಎಂಬೊಂದು ಪರಿಕಲ್ಪನೆ ಇದ್ದಂತೆ ಕಾಣಲಿಲ್ಲ; ಇದ್ದುದು ವರ್ಣಗಳು. ಮೊದಲೆರಡು ವರ್ಣಗಳು – ಅಂದರೆ ಬ್ರಾಹ್ಮಣ ಕ್ಷತ್ರಿಯ – ನೇರವಾಗಿ ಉತ್ಪಾದಕ ಕಾರ್ಯದಲ್ಲಿ ಪಾಲುಗೊಳ್ಳುತ್ತಿರಲಿಲ್ಲ, ಅವುಗಳದೇನಿದ್ದರೂ ಸಾಮಾಜಿಕ ಜವಾಬ್ದಾರಿಯ ಕೆಲಸ. ಕೊನೆಯ ವರ್ಣವಾದ ಶೂದ್ರ ಮಾತ್ರ ನೇರವಾಗಿ ಆರ್ಥಿಕ ಉತ್ಪಾದಕತೆಯಲ್ಲಿ ತೊಡಗಿದ್ದುದು. ಮೂರನೆಯ ವರ್ಣವಾದ ವೈಶ್ಯ ಉತ್ಪಾದನೆಯ ಹಂಚಿಕೆಯ ಜವಾಬ್ದಾರಿ ನಿರ್ವಹಿಸುತ್ತಿತ್ತು. ಉತ್ಪಾದಕ ವರ್ಗವೇ – ಅಂದರೆ ಶ್ರಮಜೀವಿವರ್ಗವು – ಅದರ ಸ್ವರೂಪಕ್ಕನುಗುಣವಾಗಿ ಮುಂದೆ ಜಾತಿಗಳಾಗಿ ವಿಭಜಿತವಾಯಿತು, ವೃತ್ತಿಯ ಸ್ವರೂಪ ಬೇರೆಯಾದಂತೆ ಹೊಸ ಜಾತಿಗಳು ಜನ್ಮ ತಳೆದವು. ಪ್ರಾಯಶಃ ಪಾಶ್ಚಾತ್ಯರಲ್ಲೂ ಮಧ್ಯಮ ವರ್ಗದ ಪರಿಕಲ್ಪನೆ ಈಚಿನದೆಂದು ಕಾಣುತ್ತದೆ; ಅಂದರೆ ಕೈಗಾರಿಕೆಗಳು ಆರಂಭವಾಗಿ, ಅದರಿಂದ ಅನೂಚಾನ ವೃತ್ತಿಯನ್ನು ತೊರೆದು ಬೇರೆ ಊರಿಗೆ ಹೋಗಿ ಹೊಸ ಕೆಲಸವನ್ನು ಮಾಡಿ ಜೀವಿಸಬೇಕಾದ ಪರಿಸ್ಥಿತಿಯ ನಂತರ ಹುಟ್ಟಿಕೊಂಡಿರಬೇಕು.. ನಮ್ಮಲ್ಲಂತೂ ಬ್ರಿಟಿಷ್ ಆಡಳಿತ ಬರುವ ಮುಂಚೆ ಇದು ಇದ್ದಂತಿರಲಿಲ್ಲ. ಕಚೇರಿ ಪದ್ಧತಿ, ಸಾರ್ವಜನಿಕ ಉದ್ಯೋಗ ಮುಂತಾದವು ಕಾಣಿಸಿಕೊಂಡ ಮೇಲೆ ಉದ್ಯೋಗಕ್ಕಾಗಿ ತನ್ನ ನೆಲೆಯಿಂದ ಬೇರಾಗಬೇಕಾದ ವ್ಯಕ್ತಿಗಳ ಗುಂಪು ಮಧ್ಯಮವರ್ಗ ಎನಿಸಿಕೊಂಡಂತೆ ಕಾಣುತ್ತದೆ. ಸಾರ್ವಜನಿಕ ಅಥವಾ ಸರ್ಕಾರದ ಉದ್ಯೋಗದಲ್ಲಿರುವವರನ್ನು ವರ್ಗ ಮಾಡುವ ಪರಿಪಾಟ ಒಂದು ಹೊಸ ಅರೆ ಅಲೆಮಾರಿ ಜನಾಂಗವನ್ನೇ ಸೃಷ್ಟಿಸಿತು.

ಈ ಮಧ್ಯಮವರ್ಗ ತನ್ನ ಸಹಜ ನೆಲೆಯಿಂದ ಬೇರಾಗುವುದರ ಮತ್ತು ತನ್ನ ಮೂಲವೃತ್ತಿಗಿಂತ ಭಿನ್ನವಾದ ಕೆಲಸ ನಿರ್ವಹಿಸಬೇಕಾದುದುರ ಜೊತೆಗೆ ಸ್ಥಿರ ನೆಲೆಯನ್ನು ಕಂಡುಕೊಳ್ಳಲಾಗದ ಸಮಸ್ಯೆಯನ್ನು ಎದುರಿಸಿತು. ಇದರಿಂದ ಹೆಸರಿಟ್ಟುಕೊಳ್ಳುವ ನಮ್ಮ ಪದ್ಧತಿಯೂ ಬದಲಾಯಿತು: ಹಿಂದೆ ಶ್ರಮಜೀವಿಗಳನ್ನು ವ್ಯಕ್ತಿಗಳಾಗಿ ಅವರ ವೃತ್ತಿಯಿಂದಲೇ ಗುರುತಿಸುತ್ತಿದ್ದಿರಬೇಕು; ವಚನಕಾರರ ಹೆಸರಿನ ಹಿಂದಿರುವ ವೃತ್ತಿಸೂಚಕ ವಿಶೇಷಣವನ್ನು ಗಮನಿಸಿದರೆ ಇದು ವೇದ್ಯವಾಗುತ್ತದೆ. ತನ್ನ ಹುಟ್ಟಿದೂರನ್ನು ಬಿಟ್ಟು ಬೇರೆಡೆ ಹೋಗಿ ವಾಸಮಾಡಬೇಕಾದ ಪರಿಸ್ಥಿತಿ ಬೆರಳೆಣಿಕೆಯ ಜನಕ್ಕೆ

ಮಾತ್ರ ಎದುರಾಗುತ್ತಿತ್ತು. ಯಾವಾಗ ಉದ್ಯೋಗದ ಕಾರಣದಿಂದ ಅಥವಾ ಅಲ್ಲಿನ ವರ್ಗಾವಣೆಯ ಪದ್ಧತಿಯಿಂದ ಊರನ್ನು ಬದಲಿಸಿದಾಗ ಅವರನ್ನು ಗುರುತಿಸಲು ಅವರ ಮೂಲ ಊರನ್ನು ಸೂಚಿಸುವ ಪದ್ಧತಿ ಬಂದಿರಬಹುದು. ನಮ್ಮ ಹೆಸರಿನ ಹಿಂದೆ ಇನಿಷಿಯಲ್ ಬಳಸುವ ಈಗಿನ ಪದ್ಧತಿಯಲ್ಲಿ ಮೊದಲನೆಯ ಅಕ್ಷರ ನಮ್ಮ ಮೂಲ ಊರಿನ ಹೆಸರಿನ ಮೊದಲಕ್ಷರವಾಗಿರುವುದನ್ನು ಗಮನಿಸಬಹುದು. ಉತ್ತರ ಕರ್ನಾಟಕದಲ್ಲಿ ವ್ಯಾಪಾರಸ್ಥರಲ್ಲದವರಲ್ಲಿ ಹುಬ್ಳಿಕರ್, ಧಾರವಾಡಕರ್, ಪುಣೇಕರ್, ಮುಂತಾದ "ಮೂಲತಃ ಆ ಊರಿನವನು" ಎಂದು ಅರ್ಥ ಬರುವ ಹೆಸರುಗಳಿರು ವುದನ್ನು ನೋಡಬಹುದು. ಇನಿಷಿಯಲ್ ಎಂಬ ಪದಕ್ಕೆ ಸಹಜ ಕನ್ನಡ ಪರ್ಯಾಯ ವಿಲ್ಲದಿರುವುದೇ ಅದು ಎಲ್ಲಿಂದ ಬಂದ ಪದ್ಧತಿ ಎಂಬುದನ್ನು ಸೂಚಿಸುತ್ತದೆ.

ಕಮ್ಯುನಿಸಮ್ ಪರಿಭಾಷೆಯಲ್ಲಿ ಮಧ್ಯಮವರ್ಗ ಎಂದರೆ ಕೃತಕ ವರ್ಗ; ಇರುವ ಎರಡು ವರ್ಗಗಳಾದ ಉಳ್ಳವರ ಮತ್ತು ಇಲ್ಲದವರ ನಡುವಣ ವರ್ಗ. ಅಂದರೆ ಆರ್ಥಿವಾಗಿ ಮಾತ್ರವಲ್ಲ, ಯಾವುದೇ ವಿಷಯದಲ್ಲಿಯೂ ಒಂದು ಖಚಿತ ನೆಲೆಯಿಲ್ಲದ ವರ್ಗ ಇದು. ಹೀಗಾಗಿ ಅಲ್ಲಿ ಅದನ್ನು ತಿರಸ್ಕಾರಪೂರ್ವಕವಾಗಿ ಬಳಸ ಲಾಗುತ್ತಿತ್ತು. ಬೂರ್ಷ್ವಾ ಎಂಬ ಪದ ಅಂತಹುದು. ತನ್ನ ಕೆಳಗಿನ ವರ್ಗದ ಬಗ್ಗೆ ತಿರಸ್ಕಾರ, ಮೇಲಿನ ವರ್ಗಕ್ಕೆ ಸೇರಬೇಕೆಂಬ ತವಕ ಈ ವರ್ಗದ ಮನೋಭಾವ. ಹೀಗಾಗಿ ಮೇಲುಮೇಲೇರುವ ಹಂಬಲದಿಂದಾಗಿ ತೊಳಲುವ ಈ ವರ್ಗ ನಿರಂತರ ತಳಮಳವನ್ನು ಅನುಭವಿಸುವಂಥದು. ನಮಗೆ ಸ್ವಾತಂತ್ರ್ಯ ಬಂದ ಹೊಸತರಲ್ಲಿ ಪೂರ್ಣ ಕಮ್ಯುನಿಸಮ್ ಅಲ್ಲದಿದ್ದರೂ ಸಮಾಜವಾದ ನಮ್ಮ ಆದರ್ಶವಾಗಿತ್ತು. ಇರುವ ಎರಡು ವರ್ಗಗಳ ನಡುವಣ ಕಂದರವನ್ನು ಕಿರಿದುಗೊಳಿಸುವ ಧ್ಯೇಯ ನಮ್ಮದಾಗಿತ್ತು. ಇದಕ್ಕಾಗಿ ನಾವು ನೋಡುತ್ತಿದ್ದುದು ರಷ್ಯಾದ ಕಡೆಗೆ. ಅಲ್ಲಿನಂತೆ ಯೋಜನಾಬದ್ಧ ಬೆಳವಣಿಗೆಯಿಂದ ಮಾತ್ರ ಈ ಕಂದರದ ಕಿರಿದುಗೊಳಿಸುವಿಕೆ ಸಾಧ್ಯ ಎಂಬುದು ಆಗಿನ ತಿಳಿವಳಿಕೆ. ನೆಹರೂ ಆ ದೇಶದ ಸಪ್ತವಾರ್ಷಿಕ ಯೋಜನೆಗಳಿಂದ ಪ್ರಭಾವಿತರಾಗಿ ನಮ್ಮಲ್ಲಿ ಪಂಚವಾರ್ಷಿಕ ಯೋಜನೆಗಳ ಪರಿಕಲ್ಪನೆಯನ್ನು ಜಾರಿಗೆ ತಂದರು; ಒಂದು ಯೋಜನಾ ಆಯೋಗ ರಚಿತವಾಯಿತು.

ಈಗ ಯೋಜನಾ ಆಯೋಗ ಇರಬಹುದು; ಯೋಜನೆಗಳೂ ಇರಬಹುದು. ಆದರೆ ಅವುಗಳ ಉದ್ದೇಶ ಅಭಿವೃದ್ಧಿಯೇ ಹೊರತು ವರ್ಗಗಳ ನಡುವಣ ಕಂದರವನ್ನು ಕಿರಿದುಗೊಳಿಸುವುದಲ್ಲ. ಏಕೆಂದರೆ ಈಗ ನಮ್ಮ ಆದರ್ಶ ಅಮೆರಿಕದ ಮುಕ್ತ ಆರ್ಥಿಕತೆ ಮತ್ತು ಅವರೇನು ಮಾಡುತ್ತಾರೋ ಅದರ ಅನುಸರಣೆ. ಹೀಗಾಗಿ ಕಂದರದ ಬಗ್ಗೆ ನಮಗೆ ಕಾಳಜಿಯಿಲ್ಲ. ಮಿಲಿಯನೇರ್‌ಗಳನ್ನು ಸೃಷ್ಟಿಸುವುದು ಕೆಲವರ ಗುರಿ. ಇದರಿಂದ ಮಧ್ಯಮವರ್ಗಕ್ಕೆ ಮತ್ತೆ ಕಲ್ಪನೆ ಗರಿಗೆದರಿದೆ; ಹಾಗಾಗಿ ಈಗ ಮಧ್ಯಮ ವರ್ಗದ ಕಾಲ. ಅವರ ಆಶೋತ್ತರಗಳು ಸಾಗರದಾಚೆಗೆ ಹಬ್ಬಿವೆ. ಅವರು ಮೇಲೇರಿದಷ್ಟೂ ದೇಶದ ಸಂಪತ್ತು ಹೆಚ್ಚಾಗುತ್ತದೆ. ದೇಶದ ಒಟ್ಟು ಸಂಪತ್ತು ಹೆಚ್ಚಾದರೆ

ಎಲ್ಲರ ಸಂಪತ್ತು ಹೆಚ್ಚಾದಂತೆ ಅಲ್ಲವೇ? ಲೆಕ್ಕಾಚಾರ ತುಂಬ ಸಿಂಪಲ್: ಉತ್ಪಾದನೆಯನ್ನು ಜನಸಂಖ್ಯೆಯಿಂದ ಭಾಗಿಸುವುದು. ಸರಾಸರಿ ಎಂಬುದು ಮಾಂತ್ರಿಕನ ಮಂತ್ರದಂಡ.

ಈಗಿನ ಎಲ್ಲರ ಗುರಿ ಮಧ್ಯಮ ವರ್ಗವೇ ಆಗಿದೆ: ಅವರು ಹೆಚ್ಚು ಗಳಿಸಿ ಮೇಲ್ ಮಧ್ಯಮ ವರ್ಗವಾಗುತ್ತದೆ. ಸರ್ಕಾರ ಅವರ ಆಶೋತ್ತರಗಳನ್ನು ಈಡೇರಿಸಲು ಬೇಕಾದ ಶಿಕ್ಷಣ ವ್ಯವಸ್ಥೆ, ಇನ್‌ಫ್ರಾಸ್ಟ್ರಕ್ಚರ್ ಮುಂತಾದವುಗಳಿಗೆ ಗಮನ ಹರಿಸುತ್ತದೆ; ಉದ್ಯಮಗಳು ಅವರ ಆಸೆಗಳನ್ನು ದೃಷ್ಟಿಯಲ್ಲಿರಿಸಿಕೊಂಡೇ ಬೆಳೆಯುತ್ತಿವೆ. ಎಷ್ಟು ಬಗೆಯ ಅಲಂಕಾರ ಸಾಮಗ್ರಿಗಳು ಬೇಕು, ಹೇಳಿ, ಎಂತೆಂತಹ ಬಗೆಯ ಕಾರುಗಳು ಈಗ ಮಾರುಕಟ್ಟೆಯಲ್ಲಿ ಲಭ್ಯ. ಅವುಗಳ ಓಡಾಟಕ್ಕೆ ಬೇಕಾದ ರಸ್ತೆಗಳು, ಅವರು ಹಾರಲು ಬೇಕಾದ ವಿಮಾನ ನಿಲ್ದಾಣಗಳು ಇವು ತಾನೇ ಇನ್‌ಫ್ರಾಸ್ಟ್ರಕ್ಚರ್ ಅಂದರೆ? ಬೇಕಾದರೆ ವಿದೇಶಿ ಕಂಪೆನಿಗಳು ಅವುಗಳನ್ನು ನಿರ್ಮಿಸುತ್ತವೆ; ಹಣ ಬೇಕಾದರೆ ವಿಶ್ವ ಬ್ಯಾಂಕ್ ಸಾಲ ಕೊಡುತ್ತದೆ. ಅವುಗಳನ್ನು ನಿರ್ಮಿಸಿ ನಡೆಸಲೂ ಕೆಲವು ತಯಾರು. ದೇಶದ ಪ್ರಗತಿ ಅಂದರೆ ಅದೇ ತಾನೇ? ಉಳ್ಳವರ ಮತ್ತು ಇರದವರ ನಡುವಣ ಕಂದರ? ಮಧ್ಯಮ ವರ್ಗವೇ ಅವೆರಡರ ನಡವಣ ಸೇತು; ಸೇತುವೆ ತಾನೇ ಎರಡು ದಡಗಳನ್ನು ಸೇರಿಸುವುದು? ಬಲಿಷ್ಠವಾದ ಸೇತುವೆಯ ನಿರ್ಮಾಣವೇ ಈಗ ನಮ್ಮ ಗುರಿ; ಅಂದರೆ ಬಲಿಷ್ಠ ಮಧ್ಮಮ ವರ್ಗ. ಹೆಚ್ಚು ಹೆಚ್ಚು ಮಿಲಿಯನೇರ್‌ಗಳನ್ನು ಸೃಷ್ಟಿಮಾಡಲು ಬೇಕಾದ ಬಿಲಿಯನೇರ್ ಉದ್ಯಮಿಗಳು ಬೇಕು. ಅವರನ್ನು ಆಮಂತ್ರಿಸಲು ನಮ್ಮ ರಾಜಕಾರಣಿಗಳು ಆಗಾಗ ವಿದೇಶಗಳಿಗೆ ಭೇಟಿ ನೀಡುತ್ತಾರೆ. ಅಲ್ಲಿಯ ಸ್ಥಿತಿಗತಿಗಳನ್ನು ಅಭ್ಯಾಸ ಮಾಡುತ್ತಾರೆ; ನಮಗೆ ಬೇಕಾದುದೇನು ಎಂಬುದು ಆ ದೇಶಗಳನ್ನು ಕಂಡಾಗ ಇವರಿಗೆ ತಿಳಿಯುತ್ತದೆ, ಅಥವಾ ಹೊಳೆಯುತ್ತದೆ.

ದೇಶದ ಬೆನ್ನೆಲುಬು ಈಗ ಮಧ್ಯಮ ವರ್ಗ, ಅದೂ ನಗರ ಮಧ್ಯಮ ವರ್ಗ. ಎಲ್ಲ ಕಡೆ ಅವರು ತುಂಬಬೇಕು. ಉಳ್ಳವರ ಮತ್ತು ಇಲ್ಲದವರ ನಡುವಣ ಸರಾಸರಿಯೇ ಅವರು. ಸರಾಸರಿ ಹೆಚ್ಚಾಗಬೇಕಾದರೆ ಅವರು ಬಲಿಷ್ಠರಾಗಬೇಕು; ಅದಕ್ಕೆ ಅವರ ಪೋಷಕರು ಬೆಳೆಯಬೇಕು; ಅಂದರೆ ಮಿಲಿಯನೇರ್‌ಗಳನ್ನು ಬೆಳೆಸುವ ಬಿಲಿಯನೇರ್‌ಗಳು. ಭಾರತೀಯ ಹುಡುಗಿಯರು ವಿಶ್ವ ಸುಂದರಿಯರಾಗಿ ಆಯ್ಕೆಯಾಗುವಂತೆ, ಭಾರತದ ಉದ್ಯಮಿಗಳಲ್ಲಿ ಅನೇಕರು ವಿಶ್ವದ ಅತ್ಯಂತ ದೊಡ್ಡ ಸಾಹುಕಾರರ ಪಟ್ಟಿಯಲ್ಲಿ ಸೇರುತ್ತಿದ್ದಾರೆ. ವಿಶ್ವ ಮಟ್ಟದ ಸುಂದರಿ ಮತ್ತು ಹಳ್ಳಿಯ ಹುಡುಗಿ ಇವರ ನಡುವಣ ಸರಾಸರಿ ನಮ್ಮ ಮಧ್ಯಮ ವರ್ಗದ ಯುವತಿಯರು; ಬಹುಕೋಟ್ಯಧಿಪತಿಗಳು ಮತ್ತು ನಿರ್ಗತಿಕರು ಇವರ ನಡುವಣ ಸರಾಸರಿ ನಮ್ಮ ಮಧ್ಯಮ ವರ್ಗ. ಒಟ್ಟಾರೆ ದೇಶ "ಪ್ರಗತಿ ಪಥದಲ್ಲಿದೆ!"

☆ – ☆ – ☆

# ಹೊರಟ್ಟಿ, ಗಟ್ಟಿ!

ಕನ್ನಡ ಮಾಧ್ಯಮದಲ್ಲಿ ಪಾಠ ಮಾಡುತ್ತೇವೆಂದು ಮುಚ್ಚಳಿಕೆ ಬರೆದುಕೊಟ್ಟು, ಸರ್ಕಾರವನ್ನು ವಂಚಿಸಿ ಇಂಗ್ಲಿಷ್ ಮಾಧ್ಯಮದಲ್ಲಿ ತರಗತಿಗಳನ್ನು ನಡೆಸುತ್ತಿದ್ದ ೧೪೨೬ ಶಾಲೆಗಳನ್ನು ಮುಚ್ಚಿಸಲು ನಮ್ಮ ಪ್ರಾಥಮಿಕ ಶಿಕ್ಷಣ ಸಚಿವ ಹೊರಟ್ಟಿ ಅವರು ನಿರ್ಧಾರ ಕೈಗೊಂಡಿದ್ದಾರೆ. ೧೯೯೪ ರಷ್ಟು ಹಿಂದೆಯೇ ಸುಪ್ರೀಂ ಕೋರ್ಟ್ ತನ್ನ ತೀರ್ಪಿನಲ್ಲಿ ಯಾವ ಭಾರತೀಯನಿಗೂ ಇಂಗ್ಲಿಷ್ ಮಾತೃಭಾಷೆಯಾಗಿರದ ಕಾರಣ ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ಶಾಲೆಗಳನ್ನು ತೆರೆಯಲು ಅನುಮತಿ ನಿರಾಕರಿಸಿದ ಕರ್ನಾಟಕ ಸರ್ಕಾರದ ನಿಲವನ್ನು ಎತ್ತಿ ಹಿಡಿದಿತ್ತು. ಆದರೆ ಕೆಲವು ಶಾಲೆಗಳವರು ತಾಂತ್ರಿಕ ಎಳೆಯೊಂದನ್ನು ಹಿಡಿದು ಅದನ್ನು ಮತ್ತೆ ಕರ್ನಾಟಕದ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿ ಅದು ವಿಚಾರಣೆಯಲ್ಲಿದೆ. ಸುಪ್ರೀಂ ಕೋರ್ಟ್ ತೀರ್ಪಿನನಂತರ ತೆರೆಯಲಾದ ಶಾಲೆಗಳಿಗೆ ವಿನಾಯಿತಿ ಇಲ್ಲದ್ದರಿಂದ ಆ ತೇದಿಯ ನಂತರ ತೆರೆದ ಶಾಲೆಗಳಿಗೆ ಈಗ ಮುಚ್ಚುವ ಕಾಲ ಬಂದಿದೆ.

ಪ್ರಾಥಮಿಕ ಹಂತದಲ್ಲಿ ಮಗುವು ತನಗಾಗಲೇ ವ್ಯಾವಹಾರಿಕ ಪರಿಚಯ ವಿರುವ ತಾಯ್ನುಡಿಯಲ್ಲಿ ಶಿಕ್ಷಣ ಪಡೆಯುವುದರಿಂದ ಅದರ ಮಾನಸಿಕ ಬೆಳವಣಿಗೆಯು ಸುಸೂತ್ರವಾಗಿ ಅಗುತ್ತದೆ, ವಿಷಯಗ್ರಹಣಕ್ಕೆ ಒಳ್ಳೆಯ ಬುನಾದಿ ಬೀಳುತ್ತದೆ ಎಂಬುದು ಜಗತ್ತಿನ ಎಲ್ಲ ಶಿಕ್ಷಣತಜ್ಞರ ಅಭಿಮತ. ಅಲ್ಲದೆ ಅದು ತನ್ನ ಸ್ವಂತಿಕೆಯ ಬಗ್ಗೆ ಮಕ್ಕಳಲ್ಲಿ ವಿಶ್ವಾಸವನ್ನು ತುಂಬಿ ಸ್ವೋಪಜ್ಞತೆಯನ್ನು ಬೆಳೆಸಿಕೊಳ್ಳಲು ಸಹಾಯಕ. ಜೊತೆಗೆ ತನ್ನ ಭಾಷೆಯ ಮೇಲೆ ಸಾಕಷ್ಟು ಹಿಡಿತ ಸಾಧಿಸಿಕೊಂಡು, ಭಾಷಾಬಳಕೆಯ ಸೂಕ್ಷ್ಮಗಳನ್ನು ಅರಿತಿರುವುದರಿಂದ ವಿದ್ಯಾರ್ಥಿಯು ಮತ್ತೊಂದು ಭಾಷೆಯನ್ನು ಕಲಿಯಲು ತಕ್ಕ ಹಿನ್ನೆಲೆಯನ್ನು ಪಡೆದಿರುತ್ತಾನೆ. ಆದ್ದರಿಂದ ಪ್ರಾಥಮಿಕ ಶಿಕ್ಷಣ ತಾಯ್ನುಡಿಯ ಮಾಧ್ಯಮದಲ್ಲಿರುವುದೇ ಸೂಕ್ತ. ಕೆಲ ದಿನಗಳ ಹಿಂದೆ ನಮ್ಮ ನಾಡಿನ ಪ್ರಸಿದ್ಧ ವಿಜ್ಞಾನಿಗಳಾದ ಡಾ. ಸಿಎನ್‌ಆರ್ ರಾವ್ ಅವರೂ ಈ ಅಂಶವನ್ನು ತಮ್ಮ ಧಾರವಾಡದ ಭಾಷಣವೊಂದರಲ್ಲಿ ಪ್ರಸ್ತಾಪಿಸಿ ತಾವು ಹೈಸ್ಕೂಲು ಪೂರ್ತಿ ಕನ್ನಡ ಮಾಧ್ಯಮದಲ್ಲಿಯೇ ಓದಿದ್ದಾಗಿ ಹೇಳಿದ್ದಾರೆ. ನಮ್ಮ ಪೋಷಕರು ಹಾಗೂ ಸರ್ಕಾರ ಕಿವಿಗೊಡಬೇಕಾಗಿರುವುದು ಡಾ. ರಾವ್ ಅವರಂತಹ (ವಿ)ಜ್ಞಾನಿಗಳ

ಮಾತುಗಳಿಗೇ ಹೊರತು ವ್ಯಾವಹಾರಿಕವಾಗಿ ಮಾತ್ರ ಯಶಸ್ಸು ಗಳಿಸಿದ ನಾರಾಯಣ ಮೂರ್ತಿಯಂತಹವರ ಮಾತುಗಳಿಗಲ್ಲ.

ಇಂಗ್ಲಿಷ್‌ನಂತಹ ಭಾಷೆ ನಮಗೆ ಆವಶ್ಯಕವೆಂಬುದರಲ್ಲಿ ಎರಡು ಮಾತಿಲ್ಲ, ಅದನ್ನು ಹೆಚ್ಚಿನ ಜ್ಞಾನದ ಗಳಿಕೆಗೆ ಮಾಧ್ಯಮವಾಗಿ ಬಳಸಿಕೊಳ್ಳಬೇಕು. ಪ್ರಾಥಮಿಕ ಹಂತದಲ್ಲಿ ಎಲ್ಲರಿಗೂ ಕನ್ನಡ (ಅಥವಾ ಮಾತೃಭಾಷೆ) ಮಾಧ್ಯಮವನ್ನು ಕಡ್ಡಾಯ ಗೊಳಿಸದ ಸರ್ಕಾರದ ಕ್ರಮವನ್ನು ಪ್ರತಿಭಟಿಸಿ ದೇವನೂರು ಮಹಾದೇವ ಅವರು ತಮಗಿತ್ತ ಪ್ರಶಸ್ತಿಯೊಂದನ್ನು ನಿರಾಕರಿಸಿದ್ದಾರೆ. ಆ ಸಂದರ್ಭದಲ್ಲಿ ಅವರು ಹೇಳಿರುವ ಮಾತು ಮನನೀಯ: ಇಂಗ್ಲಿಷನ್ನು ದಾದಿಯ ಹಾಗೆ ನಡೆಸಿಕೊಳ್ಳಬೇಕೇ ಹೊರತು ತಾಯಿಯ ಹಾಗಲ್ಲ, ದಾದಿ ಎಂದೂ ತಾಯಿಯಾಗಲಾರಳು ಎಂಬ ಅವರ ಮಾತು ನೂರಕ್ಕೆ ನೂರು ಸತ್ಯ. ಅಲ್ಲದೆ ಸುಪ್ರೀಂ ಕೋರ್ಟ್ ಕೂಡ ಮಾತೃಭಾಷಾ ಪ್ರಾಥಮಿಕ ಶಿಕ್ಷಣ ನೀತಿಯನ್ನು ಎತ್ತಿಹಿಡಿದಿರುವುದು ಕಾನೂನಿನ ತೊಡಕನ್ನೂ ನಿವಾರಿಸಿದೆ. ಹೀಗಾಗಿ ಹೊರಟ್ಟಿಯವರು ಸರಿಯಾದ ಮತ್ತು ದಿಟ್ಟವಾದ ಕ್ರಮವನ್ನು ಕೈಗೊಂಡಿದ್ದಾರೆ. ಇದಕ್ಕಾಗಿ ಅವರನ್ನು ನಾನು ಅಭಿನಂದಿಸುತ್ತೇನೆ. ತಾವೇ ಈ ಹಿಂದೆ ಪ್ರಾಥಮಿಕ ಖಾತೆಗಳನ್ನು ನಿರ್ವಹಿಸುತ್ತಿದ್ದ ಸಚಿವರಾದ ಬಿ.ಕೆ. ಚಂದ್ರಶೇಖರ್ ಮತ್ತು ರಾಮಲಿಂಗಾರೆಡ್ಡಿ ಅವರುಗಳು ಹೊರಟ್ಟಿಯವರು ವರ್ಷದ ಮಧ್ಯದಲ್ಲಿ ಈ ಕ್ರಮ ಕೈಗೊಂಡಿರುವುದು ಸರಿಯಲ್ಲ ಎಂದು ಟೀಕಿಸಿದ್ದಾರೆ. ತಾವು ಮಾಡಲಾರದ್ದನ್ನು ಹೊರಟ್ಟಿಯವರು ಮಾಡಿರುವುದು ಅವರಲ್ಲಿ ಅಪರಾಧಪ್ರಜ್ಞೆಯನ್ನು ಮೂಡಿಸಿರಬೇಕು. ಚಂದ್ರಶೇಖರ್ ಅವರು ಇಂಗ್ಲಂಡಲ್ಲಿ ಓದಿದ್ದರಿಂದ ಅವರ ಮನಸ್ಸು ಆ ಕಡೆಗೆ ತುಡಿಯುತ್ತದೆ, ಇನ್ನು ರಾಮಲಿಂಗಾರೆಡ್ಡಿಯವರಿಗೆ ಶಾಲೆ ನಡೆಸುವುದಕ್ಕೂ ರಿಯಲ್ ಎಸ್ಟೇಟ್ ವ್ಯವಹಾರಕ್ಕೂ ವ್ಯತ್ಯಾಸ ತಿಳಿಯದು. ಹೀಗಾಗಿ ಸರ್ಕಾರ ಅವರ ಮಾತಿಗೆ ಕಿವಿಗೊಡಬೇಕಾಗಿಲ್ಲ. ವಿದ್ಯಾರ್ಥಿಗಳಿಗೆ ಪರ್ಯಾಯ ವ್ಯವಸ್ಥೆ ಮಾಡುವುದಾಗಿ ಸರ್ಕಾರ ಹೇಳಿರುವುದರಿಂದ ಈ ಮಾಜಿಗಳ ಮಾತನ್ನು ಗಮನಿಸಬೇಕಾಗಿಲ್ಲ. ಖಾತೆಯ ಜವಾಬ್ದಾರಿಯನ್ನು ಹೊತ್ತ ತಕ್ಷಣದಿಂದಲೇ ಈ ಬಗ್ಗೆ ಕ್ರಮ ಕೈಗೊಂಡ ಹೊರಟ್ಟಿಯವರು, ಇಲಾಖೆಯ ತನಿಖೆ ನಡೆಸಿ, ಸರ್ಕಾರವನ್ನು ವಂಚಿಸಿದ ಶಾಲೆಗಳನ್ನು ಪತ್ತೆ ಮಾಡಿ, ಅವುಗಳ ಮಾನ್ಯತೆ ರದ್ದುಮಾಡುವ ಕ್ರಮ ಕೈಗೊಂಡಿರುವುದು ಅವರು ತಮ್ಮ ಮಾತಿಗೆ ಬದ್ಧರಾಗಿರುವುದನ್ನು ತೋರಿಸುತ್ತದೆ. ಅವರಾಗಲೀ ಮುಖ್ಯಮಂತ್ರಿಗಳಾಗಲೀ ಯಾವುದೇ ಒತ್ತಡ ತಂತ್ರಕ್ಕೂ ಮಣಿಯದೆ ಮುಂದುವರಿಯುವ ಧೈರ್ಯ ತೋರಬೇಕು.

ಶಿಕ್ಷಣ ಮಾಧ್ಯಮ ಒಂದು ವಿಷಯ, ಇಂಗ್ಲಿಷನ್ನು ಯಾವ ಹಂತದಿಂದ ಕಲಿಸಬೇಕು ಎಂಬುದು ಇನ್ನೊಂದು ವಿಷಯ. ಈ ಎರಡು ಸಮಸ್ಯೆಗಳನ್ನೂ ಪರಿಹರಿಸಬೇಕಾದರೆ ಸರ್ಕಾರ ಖಚಿತವಾದ ಪ್ರಾಥಮಿಕ ಶಾಲಾ ನೀತಿಯನ್ನು ರೂಪಿಸಬೇಕು. ಕೆಲವರು ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುವ ಅವಕಾಶ ಇದ್ದರೆ,

ಸರಿಯೋ ತಪ್ಪೋ, ತಾವೂ ಹಾಗೆ ಮಾಡಬೇಕೆಂಬ ಆಸೆ ಮಿಕ್ಕವರಲ್ಲಿ ಮೊಳೆಯುತ್ತದೆ. ಹಾಗಾಗಿ ಶಿಕ್ಷಣದಲ್ಲಿನ ಈಗಿರುವ ವರ್ಣವ್ಯವಸ್ಥೆ ಹೋಗಬೇಕು; ವಿವಿಧ ಶಿಕ್ಷಣಕ್ರಮದ ಶಾಲೆಗಳು ರದ್ದಾಗಬೇಕು. ಎಲ್ಲರಿಗೂ ಒಂದೇ ಬಗೆಯ ಶಿಕ್ಷಣ ಸಿಕ್ಕಬೇಕು; ಆಗ ಈ ವಿಷಯದಲ್ಲಿ ಹೊಟ್ಟೆಯ ಕಿಚ್ಚಿಗಾಗಾಗಲೀ ಪೈಪೋಟಿಗಾಗಲೀ ಆಸ್ಪದವಿರದು. ಶಾಲೆಗಳನ್ನು ಯಾರೇ ನಡೆಸಲಿ, ಒಂದೆ ಬಗೆಯ ಮಾಧ್ಯಮ ನೀತಿ, ಏಕರೂಪದ ಪಠ್ಯರೀತಿ ಇರಬೇಕು. ಕರ್ನಾಟಕದ ಯಾವುದೇ ಒಂದು ಶಾಲೆಯಲ್ಲಿಯೂ ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ಶಾಲೆಯಿರಬಾರದು; ಎಲ್ಲರೂ ಒಂದೇ ಮಟ್ಟದ ಮತ್ತು ವ್ಯಾಪಕತೆಯ ವಿಷಯಗಳನ್ನು ಕಲಿಯಬೇಕಾದ ಪಠ್ಯಕ್ರಮವಿರಬೇಕು. ಆಗ ವಿದ್ಯಾರ್ಥಿಗಳಲ್ಲಿ ತಾರತಮ್ಯಭಾವನೆ ಮೂಡುವುದಿಲ್ಲ.

ಬೇರೆ ರಾಜ್ಯದಿಂದ ಬಂದವರಿಗೆ ತೊಂದರೆಯಾಗುತ್ತದೆ ಎಂಬ ಕುಂಟು ನೆವ ಒಡ್ಡಿ ವಿನಾಯಿತಿ ನೀಡಿದರೆ ಎಲ್ಲರೂ ತಾವು ಬೇರೆಯವರು ಎಂದೇ ಸಾಧಿಸಲು ಸುಳ್ಳು ದಾಖಲೆ ಸೃಷ್ಟಿಸುವ ಆಮಿಷಕ್ಕೆ ಒಳಗಾಗಬಹುದು. ಬೆರಳೆಣಿಕೆಯ ಜನರಿಗೆ ತೊಂದರೆಯಾಗುತ್ತದೆಂದು ಸಕಲರಿಗೂ ಕೆಟ್ಟುದನ್ನು ಮಾಡಹೊರಡುವುದು ಮೂರ್ಖತನ. ಈ ವಿಷಯದಲ್ಲಿ ನಾನಂತೂ ಕೇಂದ್ರ ಸರ್ಕಾರವನ್ನು ಅಪರಾಧಿಸ್ಥಾನದಲ್ಲಿ ನಿಲ್ಲಿಸುತ್ತೇನೆ; ಪ್ರಾಥಮಿಕ ಶಿಕ್ಷಣದ ಜವಾಬ್ದಾರಿ ರಾಜ್ಯಸರ್ಕಾರದ್ದೆಂದು ಸಂವಿಧಾನ ಹೇಳಿದ್ದರೂ ತನ್ನ ನೌಕರರ ಅನುಕೂಲದ ನೆಪವೊಡ್ಡಿ ಐಸಿಎಸ್ಇ ಸಿಬಿಎಸ್ಇ ಎಂಬ ಪೂತನಿಗಳನ್ನು ಸೃಷ್ಟಿಸಿ ಅದು ಅಲ್ಲಿ ಓದುವ ಮಕ್ಕಳು ತಾವು ನೆಲೆಸಿರುವ ರಾಜ್ಯಕ್ಕೆ ಪರಕೀಯರನ್ನಾಗಿ ಮಾಡುತ್ತಿದೆ. ಇದೂ ಒಂದು ಬಗೆಯ ಒಡೆದು ಆಳುವ ನೀತಿ; ಹಿಂದಿ ಹೇರುವ ಹುನ್ನಾರ. ಕೇಂದ್ರ ಸರ್ಕಾರವು ಈ ಬಗ್ಗೆ ಮೂಗು ತೂರಿಸುವುದು ಬಿಟ್ಟು, ಪ್ರಾಥಮಿಕ ಶಾಲೆಗಳ ಬಗ್ಗೆ ಇಡೀ ಇಂಡಿಯಾಕ್ಕೆ ಅನ್ವಯವಾಗುವ ಕಾಯಿದೆಯೊಂದನ್ನು ರೂಪಿಸಬೇಕು. ಅದಕ್ಕೆ ಪೂರಕವಾಗಿ ತನ್ನ ನೌಕರರನ್ನು ಯಾವ ರಾಜ್ಯದಲ್ಲಿ ನೇಮಕ ಮಾಡಿದೆಯೋ ಅದರ ವ್ಯಾಪ್ತಿಯಲ್ಲಿಯೇ ವರ್ಗಾವಣೆ ಮಾಡುವ ನೀತಿಯನ್ನೂ ರೂಪಿಸಬೇಕು.

ಈಗ ಹೊರಟ್ಟಿಯವರು ತಮ್ಮ ಕ್ರಮವನ್ನು ಮುಂದುವರಿಸಲಿ, ಏಕರೂಪ ಪ್ರಾಥಮಿಕ ಶಿಕ್ಷಣನೀತಿಯನ್ನು ತಕ್ಷಣವೇ ರೂಪಿಸಿ ಮುಂದಿನ ವರ್ಷದಿಂದ ಅದು ರಾಜ್ಯದ ಎಲ್ಲೆಡ ಜಾರಿಯಾಗುವಂತೆ ಆಜ್ಞೆ ಹೊರಡಿಸಲಿ. ಇಲ್ಲದಿದ್ದರೆ ಈ ಅಪಸ್ವರಗಳು, ಗೊಂದಲಗಳು ಮುಂದುವರಿಯುತ್ತಲೇ ಹೋಗುತ್ತವೆ; ಇಂಗ್ಲಿಷ್ ಮಾಧ್ಯಮ ಎಂಬ ಕಾಮಧೇನುವನ್ನು ಹಿಡಿದು ಅದರ ಕೆಚ್ಚಲನ್ನು ಕತ್ತರಿಸಿ ತಾವು ದುಡ್ಡು ಮಾಡಿಕೊಳ್ಳುವ ವಿದ್ಯಾವರ್ತಕರ ದಂಧೆ ಹೆಚ್ಚಾಗುತ್ತ ಸಾಗುತ್ತದೆ.

☆ – ☆ – ☆

# ವನದಹನ

ಈಗೀಗ ಪರಿಸರ ರಕ್ಷಣೆಯ ಮಾತು ಎಲ್ಲೆಲ್ಲೂ ಕೇಳಿಬರುತ್ತಿದೆ. ಕಾಡನ್ನು ಉಳಿಸಿ, ಪರಿಸರ ರಕ್ಷಿಸಿ ಎಂಬುದು ಈಗಿನ ಘೋಷಣೆ. ಕಾಡುಗಳನ್ನು ಕಡಿದು ನಾಡನ್ನು ಕಟ್ಟುವ ಚಾಳಿಯ ಬದಲು, ಇರುವ ಕಾಡನ್ನು ಹಾಗೇ ಉಳಿಸಿಕೊಂಡು ಅಭಿವೃದ್ಧಿ ಹೊಂದುವುದರ ಕಡೆಗೆ ನಮ್ಮ ದೃಷ್ಟಿ ಹೊರಳಬೇಕೆಂದು ಎಲ್ಲರೂ ಹೇಳುತ್ತಾರೆ. ಆದರೆ ಭೂಮಿಯ ಮೇಲೆ ಮುಕ್ಕಾಲು ಭಾಗ ನೀರು ತುಂಬಿದೆ; ಉಳಿದ ಜಾಗದಲ್ಲಿಯೇ ಕಾಡು ನಾಡು ಎರಡೂ ಇರಬೇಕು ತಾನೇ? ನಾಡಿನ ವಿಸ್ತಾರ ಹೆಚ್ಚಾಗಬೇಕೆಂದರೆ ಕಾಡು ಕಡಿಮೆಯಾಗಬೇಕಲ್ಲವೇ? ಇದು ಪ್ರಶ್ನೆ.

ಮನುಷ್ಯಸಂಕುಲವು ಪ್ರಕೃತಿಯಲ್ಲಿ ನೇರವಾಗಿ ಸಿಗುತ್ತಿದ್ದ ಆಹಾರವನ್ನು ತಿಂದು ಬದುಕುತ್ತಿದ್ದ ಕಾಲವೊಂದಿತ್ತು; ಎರಡು ಬಗೆಯ ಆಹಾರ, ಸಸ್ಯಗಳ ಕಾಯಿ, ಹಣ್ಣು, ಬೇರು ಮುಂತಾದವು ಒಂದು ಬಗೆಯಾದರೆ, ಪ್ರಾಣಿಗಳ ಮಾಂಸ ಇನ್ನೊಂದು. ಹೀಗೆ ಸಸ್ಯಶ್ಯಾಮಲೆಯೂ ವಸುಂಧರೆಯೂ ಆದ ಭೂಮಿಯ ಮೊಲೆಗಳಲ್ಲಿ ಆಗಿನ ತನ್ನ ಮಕ್ಕಳ ಸಂಖ್ಯೆಗೆ ಬೇಕಾದುದಕ್ಕಿಂತ ಮಿಗಿಲು ಹಾಲು ಸುರಿಯುತ್ತಿತ್ತು. ಆದರೆ ಈ ಪರಿಸ್ಥಿತಿ ಎಷ್ಟು ದಿನ ಇರಲು ಸಾಧ್ಯ? ಭೂತಾಯಿಯ ದೊಡ್ಡ ದೊಡ್ಡ ಮೊಲೆಗಳಲ್ಲಿನ ಹಾಲೂ ಮಕ್ಕಳ ಸಂಖ್ಯೆ ಹೆಚ್ಚಾದಂತೆ ಸಾಲದಾಗತೊಡಗಿತು. ಈ ಮಕ್ಕಳೋ ಬಕಾಸುರರು, ಅಲ್ಲದೆ ಸಂಖ್ಯೆ ಬೇರೆ ಹೆಚ್ಚಾಗುತ್ತ ನಡೆಯಿತು. ಜೊತೆಗೆ ಬೆಳೆದ ಮಕ್ಕಳ ಬುದ್ಧಿಯೂ ದಿನೇ ದಿನೇ ಚುರುಕಾಗತೊಡಗಿತ್ತು. ತನಗೆ ಇಷ್ಟವಾದ, ಹೊಟ್ಟೆ ತುಂಬಿಸುವ ಸಸ್ಯಗಳು ಯಾವುವು ಎಂಬುದು ಮನುಷ್ಯನಿಗೆ ತಿಳಿಯ ತೊಡಗಿತ್ತು. ನೆಲದಲ್ಲಿ ಗಿಡಮರಗಳು ಬೆಳೆಯುವ ಪರಿ, ಅವುಗಳಲ್ಲಿ ಕಾಯಿ, ಹಣ್ಣುಗಳು ಬಿಡುವ ರೀತಿ ಕಾಲ ಇವುಗಳನ್ನು ಗಮನಿಸುತ್ತ ಬಂದ ಮನುಷ್ಯ ತಾನೇ ಆಹಾರ ಬೆಳೆಯತೊಡಗಿದ. ತಾಯಿ ತಮ್ಮ ಅನ್ನ ಬೇಯಿಸಿಕೊಳ್ಳುವ ಜವಾಬ್ದಾರಿ ಯನ್ನು ಬೆಳೆದ ಮಕ್ಕಳ ವಿವೇಚನೆಗೆ ಬಿಡುತ್ತ ಹೋದಳು. ಇದರಿಂದ ತಾನಾಗಿ ಬೆಳೆಯುವ ಗಿಡಮರಗಳ ಜೊತೆಗೆ ಮನುಷ್ಯ ಬೆಳೆಸಿದ ಮರಗಿಡಗಳೂ ಸೇರಿದವು. ಸ್ವಯಂಭೂ ಸಸ್ಯಗಳ ನಡುವೆ ನಟ್ಟು ಬೆಳೆಸಿದವೂ ಸೇರಿದವು; ಇಷಿಯ ಜೊತೆ ಕೃಷಿಯೂ ಸೇರಿತು. ಕಾಡಿನ ಸ್ವಲ್ಪ ಭಾಗ ಹೊಲವಾಯಿತು, ಪ್ರಕೃತಿಯ ಮಧ್ಯೆಯೇ ಸಂಸ್ಕೃತಿ ಮೊಳೆಯಿತು.

ಯಾವಾಗ ತಾನಾಗಿ ಸಸ್ಯ ನಟ್ಟು ಅದರ ಫಲವನ್ನು ಮನುಷ್ಯ ಬಯಸಿದನೋ, ಅಂದಿನಿಂದ ಅದಕ್ಕಾಗಿ ಕಾದು ಕುಳಿತಿರಬೇಕಾದ ಆವಶ್ಯಕತೆಯೂ ಒದಗಿತು; ಅಲೆಮಾರಿಯಾಗಿದ್ದವನು ನೆಲೆಯೂರಿದ; ಗುಹೆಗವಿಗಳಲ್ಲಿ ಮಲಗುತ್ತಿದ್ದವನು ಮನೆ ಕಟ್ಟಿದ. ಕಾಲ ಸರಿದಂತೆ, ಮನುಷ್ಯ ಸಂಖ್ಯೆ ಮತ್ತಷ್ಟು ಹೆಚ್ಚಿದಂತೆ, ಹೆಚ್ಚು ಮಂದಿ ಒಂದೆಡೆ ಇರಬೇಕಾದ ಅನಿವಾರ್ಯ ಒದಗಿತು, ಉಭಯಕುಶಲೋಪರಿಗಾಗಿ, ರಕ್ಷಣೆಗಾಗಿ. ಮನುಜಸಂಕುಲ ಬಿಡಿಯಾಗಿದ್ದುದು ಇಡಿಯಾಯಿತು. ಇಷ್ಟು ಹೊತ್ತಿಗೆ ಮನುಷ್ಯಬುದ್ಧಿ ಇನ್ನಷ್ಟು ಚುರುಕಾಗಿತ್ತು, ಜೀವನರೀತಿ ಗೋಜಲಾಗಿತ್ತು. ಹಾಗಾಗಿ ಸಿಕ್ಕು ಬಿಡಿಸಲು ಕಾನೂನಿನ ಬಾಚಣಿಗೆ ಬೇಕಾಯಿತು. ಮಾಲ್ತಸ್ ಹೇಳಿದನಂತಲ್ಲ, ಜನಸಂಖ್ಯೆ ಜ್ಯಾಮಿತಿ ಪ್ರಮಾಣದಲ್ಲಿ ಹೆಚ್ಚುತ್ತದೆ ಎಂದು; ಅವನು ಸಿದ್ಧಾಂತ ಮಂಡಿಸುವುದಕ್ಕಿಂತ ಸಾವಿರಾರು ವರ್ಷಗಳ ಹಿಂದೆಯೇ ಅದು ನಿಜವಾಗಿತ್ತು. ವಿಪರೀತ ಜನ, ದಟ್ಟಣೆ; ಕಾಡು ಕಡಿದಲ್ಲದೆ ನೆಲೆಸಲು ಜಾಗವೆಲ್ಲಿ?

ನಮ್ಮ ಅತ್ಯಂತ ಹಳೆಯ ಎರಡು ಕಾವ್ಯಗಳಲ್ಲಿ ಒಂದಾದ 'ಮಹಾಭಾರತ'ದಲ್ಲಿ ಒಂದು ಪ್ರಸಂಗವಿದೆಯಲ್ಲ, ಖಾಂಡವದಹನದ ಕತೆ. ಅದನ್ನು ಪರಿಭಾವಿಸಿ: ಖಾಂಡವ ಇಂದ್ರನಿಗೆ ಸೇರಿದ್ದ ಒಂದು ವನ; ಇಂದ್ರಪ್ರಸ್ಥದ ಪಕ್ಕದಲ್ಲಿದುರು. ಒಂದು ಸಲ ವರುಣಲೋಕದಲ್ಲಿ ಹನ್ನೆರಡು ವರ್ಷಗಳಷ್ಟು ದೀರ್ಘಕಾಲದ ಯಜ್ಞ ನಡೆಯಿತಂತೆ. ಹವಿಸ್ಸನ್ನು ತಿಂದೂ ತಿಂದೂ ಅಗ್ನಿಗೆ ಅಜೀರ್ಣವಾಯಿತಂತೆ. ದೇವ ವೈದ್ಯರುಗಳಾದ ಅಶ್ವಿನೀ ದೇವತೆಗಳ ಬಳಿ ಹೋಗಿ ತನ್ನ ಕಾಯಿಲೆಯ ವಿಷಯ ಅಗ್ನಿ ತೋಡಿಕೊಂಡ. ತಾವೇ ಔಷಧಿ ಕೊಡದೆ ಈಗಿನ ವೈದ್ಯರು ಪ್ರಿಸ್ಕ್ರೈಬ್ ಮಾಡುವ ರೀತಿಯಲ್ಲಿಯೇ ಅವರು, ಖಾಂಡವವನದಲ್ಲಿ ಅಜೀರ್ಣ ಹೋಗಲಾಡಿಸುವ ಮೂಲಿಕೆಗಳಿವೆಯೆಂದೂ ಹೋಗಿ ಸೇವಿಸಬೇಕೆಂದೂ ಸೂಚಿಸಿದರು. ಆದರೆ ಖಾಂಡವ ಇಂದ್ರನಿಗೆ ಸೇರಿದ್ದ ವನ, ಅವನನ್ನೇ ಕೇಳಿದರೆ ಅವಕಾಶ ನೀಡಲಾರನೆಂದು ಭಾವಿಸಿಯೋ ಏನೋ, ಅಗ್ನಿ ಕೃಷ್ಣಾರ್ಜುನರ ಬಳಿ ಅಭಯ ಪಡೆದು ಖಾಂಡವಕ್ಕೆ ಅಡಿಯಿಟ್ಟ; ವನ ಉರಿಯ ತೊಡಗಿತು. ಸುದ್ದಿ ಇಂದ್ರನಿಗೆ ತಿಳಿಯಿತು. ಅವನ ಯುದ್ಧಕ್ಕೆ ಬಂದ; ಅರ್ಜುನನೇ ಗೆದ್ದ. ಅವನು ತನ್ನ ಮಗನಲ್ಲವೇ, ಇಂದ್ರ ಅವನಿಗೇ ಗೆಲವಿನ ಶ್ರೇಯಸ್ಸನ್ನು ಬಿಟ್ಟುಕೊಟ್ಟ. ಆ ಹೊತ್ತಿಗೆ ಖಾಂಡವ ವನ ಉರಿದು ಬೂದಿಯಾಗಿ ಬರಿ ನೆಲ ಉಳಿದಿತ್ತು. ಮುಂದೆ ವಿಶ್ವಕರ್ಮ ಎಂಬ ದೇವಶಿಲ್ಪಿಗೆ ಹೇಳಿ ಶ್ರೀಕೃಷ್ಣ ಅಲ್ಲಿ ಹೊಸ ಬಡಾವಣೆಯನ್ನು ನಿರ್ಮಿಸಲು ಏರ್ಪಾಟುಮಾಡಿದ. ಅದೇ ಇಂದ್ರಪ್ರಸ್ಥದಲ್ಲಿ ಪಾಂಡವರು ನೆಲೆಯೂರಿದರು.

ಇದು ನಮಗೆ ಸಿಕ್ಕುವ ಮೊಟ್ಟ ಮೊದಲನೆಯ ಕಾಡು ನಾಡಾದ ಕತೆ. ವನ ಊರಾಯಿತು; ಕಾಡು ನಾಡಾಯಿತು. ವನ ಸೇರಿದ್ದುದು ದೇವತೆಯಾದ ಇಂದ್ರನಿಗೆ, ಅದನ್ನು ಊರಾಗಿ ಮಾಡಿಕೊಂಡವನು ನರನಾದ ಅರ್ಜುನ. ಕೊನೆಗೆ ಇಂದ್ರ ಕೂಡ ಅದಕ್ಕೆ ಒಪ್ಪಿಗೆ ಕೊಟ್ಟ. ಅಂದರೆ ಇದು ಮನುಷ್ಯ ಪ್ರಕೃತಿಯನ್ನು ಮಾರ್ಪಡಿಸಿ

ಸಂಸ್ಕೃತಿಯನ್ನು ನೆಲೆಗೊಳಿಸಿದ ಕತೆಯೇ ಅಲ್ಲವೇ? ಈ ಕಾರ್ಯದಲ್ಲಿ ನರನಿಗೆ ಇಂದ್ರ ನೆರವಾದ, ಕನಿಷ್ಠ ಪಕ್ಷ ತನ್ನ ಒಪ್ಪಿಗೆಯಿತ್ತ. ಇದುವರೆಗೂ ದೊಡ್ಡ ಊರಿದ್ದುದು ಒಂದೇ, ಹಸ್ತಿನಾವತಿ; ಈಗ ಎರಡಾಯಿತು. ಹಸ್ತಿನಾವತಿಯೂ ಹೀಗೇ ಆಗಿರಬಹುದೆಂದು ಊಹಿಸಬಹುದು, ಅದನ್ನು ಹಸ್ತಿ ಎಂಬ ರಾಜ ನಿರ್ಮಿಸಿದ ಎಂದು ಹೇಳಿದರೂ, ಮೊದಲಿಗೆ ಆ ನಗರವಿದ್ದ ಪ್ರದೇಶ ಆನೆಗಳ ಆಡುಂಬೊಲವಾಗಿದ್ದ ಕಾಡಾಗಿದ್ದಿರಬಹುದು. ಅಂದರೆ ಕಾಡನ್ನು ಕಡಿದೇ ಅದನ್ನೂ ನಿರ್ಮಿಸಿದ್ದಿರಬೇಕು. ಅಂತೂ ಒಂದು ಊರು ಎರಡಾಯಿತು. ಊರುಗಳ ಸಂಖ್ಯೆ ಬೆಳೆದಂತೆ ಕಾಡಿನ ಪ್ರಮಾಣ ಇಳಿಕೆಯಾಗುತ್ತ ನಡೆಯುವುದು ಸಹಜ.

ಹಾಗೆಂದು ಕಾಡೇ ಇಲ್ಲದೆ ಬರೀ ನಾಡೇ ಇರಲು ಸಾಧ್ಯವೇ, ಅಥವಾ ಹಾಗಿರುವುದು ಅಪೇಕ್ಷಣಿಯವೇ? ಉಹ್ಞೂ, ಒಂದು ಪ್ರಮಾಣ ಮೀರಿದರೆ ಪರಿಣಾಮ ವಿಪರೀತವಾಗಬಹುದು. ಆದ್ದರಿಂದ ಜನಸಂಖ್ಯೆಯನ್ನೇ ನಿಯಂತ್ರಿಸುವುದು ಒಂದು ಬಗೆ, ಅದಕ್ಕಿಂತ ವೇಗವಾಗಿ ಬೆಳೆಯುತ್ತಿರುವ ಮನುಷ್ಯನ ಆಸೆಗಳನ್ನು ಹತ್ತಿಕ್ಕುವುದು ಇನ್ನೊಂದು ಬಗೆ. ಮಾಲ್ತಸ್ ಜನಸಂಖ್ಯೆಯ ಬೆಳವಣಿಗೆ ಬಗ್ಗೆ ನೀಡಿದ ಸೂತ್ರವು ಅದಕ್ಕಿಂತ ಮಿಗಿಲಾಗಿ ಮನುಷ್ಯನ ಆಸೆಗಳಿಗೆ ಅನ್ವಯಿಸುವ ಹಾಗೆ ಕಾಣುತ್ತದೆ. ಎಲ್ಲ ಕಾಲದಲ್ಲೂ ಮನುಷ್ಯನ ಹೊಟ್ಟೆಯ ಗಾತ್ರ ಅಷ್ಟೇ; ಈಗ ತಿನ್ನುವ ಹೊಟ್ಟೆಯ ಸಂಖ್ಯೆ ಹೆಚ್ಚಾಗಿದೆ. ಆದರೆ ಒಂದು ಕಾಲದಲ್ಲಿದ್ದಂತೆ ಅನ್ನದ ಕೊರತೆ ಈಗಿಲ್ಲ. ಹೆಚ್ಚು ಭೂಮಿಯನ್ನು ಬಳಸದೆಯೇ, ಹೆಚ್ಚು ಬೆಳೆ ತೆಗೆಯುವುದು ಈಗ ಸಾಧ್ಯವಾಗಿದೆ. ಆದರೆ ಈ ಆಸೆಗಳನ್ನು ಪೂರೈಸುವುದು ಹೇಗೆ? ಪರಿಮಿತ ಮನಸ್ಸಿನಲ್ಲಿ ಬೆಳೆಗಿಂತ ಹೆಚ್ಚು ಪ್ರಮಾಣದಲ್ಲಿಯೂ ಅಪರಿಮಿತ ವೇಗದಲ್ಲಿಯೂ ಹೆಚ್ಚುತ್ತಿರುವುದು ಆಸೆಗಳ ಬೆಳೆ. ಇದರ ಫಲವಾಗಿಯೇ ಕಾಡು ಈಗ ನಾಶವಾಗುತ್ತಿರುವುದು. ಊರುಗಳನ್ನು ವಿಸ್ತರಿಸಬೇಕಿಲ್ಲ; ಈಗ ಊರುಗಳ ಬೆಳವಣಿಗೆ ಮೇಲು ಮೇಲಕ್ಕೆ. ಅಂದರೆ ಕಾಡು ಈಗ ನಾಶವಾಗುತ್ತಿರುವುದು ಅತ್ಯವಶ್ಯಕವಾದ ಆಹಾರಕ್ಕಿಂತ ಮಿಗಿಲಾಗಿ ಮನುಷ್ಯನ ಇತರ ಆಸೆಗಳನ್ನು ಪೂರೈಸಿಕೊಳ್ಳಲು. ಇದರ ಬೆಳವಣಿಗೆಯ ಪ್ರಮಾಣವನ್ನು ಕುಗ್ಗಿಸದಿದ್ದರೆ ಕಾಡು ಉಳಿಯದು. ದಿನೇ ದಿನೇ ಹೊಸ ಖಾಂಡವಗಳು ಆಸೆಯೆಂಬ ಅಗ್ನಿಗೆ ಆಹುತಿಯಾಗುತ್ತಲೇ ಹೋಗುತ್ತವೆ. ಹುಷರಾಗಿರಬೇಕು.

☆ - ☆ - ☆

# ಬಂದ್ ಮಾಡಬೇಕು

ಅಕ್ಟೋಬರ್ ನಾಲ್ಕನೆಯ ತಾರೀಕು ಬೆಳಗಾವಿ ವಿಷಯಕ್ಕೆ ಸಂಬಂಧಿಸಿದಂತೆ ಕನ್ನಡಪರ ಸಂಘಟನೆಗಳು ಬೆಳಿಗ್ಗೆ ಆರರಿಂದ ಸಂಜೆ ಆರರವರೆಗೆ ಬಂದ್ ಆಚರಿಸಿದವು; ಅದಕ್ಕೆ ಸರ್ಕಾರವೂ ಒಂದು ರೀತಿ ಬೆಂಬಲ ನೀಡಿತ್ತು. ಮುಖ್ಯ ಮಂತ್ರಿಗಳೇನೋ ಅರೆಮನಸ್ಸಿನಿಂದ ಇದ್ದಂತೆ ತೋರಿಸಿಕೊಂಡರೂ ಆಡಳಿತದ ಎರಡೂ ಪಕ್ಷಗಳು ಬೆಂಬಲಿಸಿದ್ದರಿಂದ ಅದು ಒಂದು ಬಗೆಯಲ್ಲಿ ಸರ್ಕಾರಿ ಬಂದೇ ಆಗಿತ್ತು. ಹೀಗಾಗಿ ಅದು ಗಟ್ಟಿಯಾಗಿರುವುದೆಂದು ಅರಿತ ಶಠಮನಸ್ಸಿನ ಕಂಪನಿಗಳೂ ರಜೆ ಘೋಷಿಸಿದ್ದವು (ಆ ದಿನದ ಬದಲು ಮತ್ತೊಂದು ರಜಾದಿನದಂದು ಕೆಲಸ ಮಾಡಿಸಿಕೊಳ್ಳುವುದು ಸರಿಯೇ). ಒಟ್ಟಲ್ಲಿ ಬಂದ್‌ಗೆ ವ್ಯಾಪಕ ಬೆಂಬಲ ಸಿಕ್ಕಿದಂತಾಗಿ ಅದು 'ಯಶಸ್ವಿ'ಯಾಯಿತು. ಅಲ್ಲೊಂದು ಇಲ್ಲೊಂದು ಸಣ್ಣ ಪುಟ್ಟ ಘಟನೆಗಳನ್ನು ಹೊರತುಪಡಿಸಿ ಬಂದ್ ಶಾಂತಿಯುತವಾಗಿತ್ತು. ಆದರೆ ಅದೇ ಕೆಲವು ಸಂಘಟನೆಗಳು ಕರೆಕೊಟ್ಟ ಮೇರೆಗೆ ಮಂಗಳೂರು ಮತ್ತು ಸುತ್ತಮುತ್ತಲಿನ ಊರುಗಳಲ್ಲಿ ಕೆಲವು ದಿನಗಳ ಹಿಂದೆ ನಡೆದ ಬಂದ್ ಮಹಾ ಉಗ್ರವಾಗಿತ್ತು; ಬಂದ್ ಎಂದರೆ ಗಲಭೆಗಳೇ ಎಂಬಂತಿದ್ದವು. ಸಾವುನೋವುಗಳು ಸಾಕಷ್ಟು ತೀವ್ರತರವಾಗಿತ್ತು. ಆ ಕಾರಣದಿಂದ ಪೋಲೀಸರು ಕರ್ಫ್ಯೂ ವಿಧಿಸಿದ್ದರಿಂದ ಜನಜೀವನ ಸ್ತಬ್ಧಗೊಂಡಿತು. ಇನ್ನೂ ಮಂಗಳೂರು ಸಹಜಸ್ಥಿತಿಗೆ ಮರಳಬೇಕಾಗಿದೆ.

ಬಂದ್ ಅಂದರೆ ಏನು? ಯಾವುದೋ ಕಾರಣಕ್ಕೆ ಸಾರ್ವಜನಿಕರು ತಮ್ಮೆಲ್ಲ ವಹಿವಾಟುಗಳನ್ನೂ ಕೈಬಿಟ್ಟು ಪ್ರತಿಭಟನೆ ಮಾಡುವುದು. ಕಾರಣ ಎಷ್ಟೇ ಬಲ ವಾದುದಾಗಿರಲಿ, ಅಪವಾದವಿಲ್ಲದಂತೆ, ಎಲ್ಲರೂ ಅದಕ್ಕೆ ಸಹಮತ ವ್ಯಕ್ತಪಡಿಸುವುದು ಅಸಾಧ್ಯದ ಮಾತು. ಆದರೆ ಬಂದ್‌ಗೆ ಕರೆಕೊಟ್ಟವರು ತಮಗೆ ವ್ಯಾಪಕ ಬೆಂಬಲ ವಿದೆಯೆಂದು ತೋರಿಸಲು ವಹಿವಾಟುಗಳೆಲ್ಲ ಸ್ಥಗಿತಗೊಳ್ಳುವಂತೆ ಮಾಡಲು ಪ್ರಯತ್ನಿಸುತ್ತಾರೆ; ಅಂದರೆ ತಮ್ಮೊಡನೆ ಸಹಕರಿಸದವರನ್ನು ಹಾಗೆ ಮಾಡಲು ಬಲವಂತ ಪಡಿಸುತ್ತಾರೆ. ಬಂದ್ ಸಂಘಟಿತ ಗುಂಪಿನ ಪ್ರಯತ್ನವಾದ್ದರಿಂದ ಮಿಕ್ಕವರೆಲ್ಲ ಅಸಂಘಟಿತರಾಗಿರುವುದರಿಂದ ಏನು ಮಡುವರೋ ಎಂಬ ಆತಂಕ ಜನರಲ್ಲಿ ಕುದಿಯುತ್ತಿರುತ್ತದೆ. ಎಲ್ಲರೂ ಮಾತಿಗೆ ಒಲಿಯುವವರಲ್ಲವಾದ್ದರಿಂದ ಎಲ್ಲ ಬಂದ್ ಸಂದರ್ಭಗಳಲ್ಲಿಯೂ ಸಾಮಾನ್ಯವಾಗಿ ಹಿಂಸಾಚಾರ ನಡೆಯುತ್ತದೆ.

ಇದರಿಂದ ವ್ಯವಹಾರಗಳು ಸ್ತಬ್ದಗೊಳ್ಳುವುದರ ಬದಲು ಹಿಂಸೆ ತಾಂಡವವಾಡುತ್ತದೆ. ಅದರಿಂದ ಬಂದ್ ಆಚರಿಸಿದಂತಾಯಿತೇ?

ಬಂದ್ ಸಮಯದಲ್ಲಿ ಬೆಂಗಳೂರಿನಂತಹ ದೊಡ್ಡ ನಗರಗಳ ಪರಿಸ್ಥಿತಿಯನ್ನು ಕೆಲವು ಕಡೆ ಚಿತ್ರಗಳಲ್ಲಿ ಸೆರೆಹಿಡಿದು ಮಾಧ್ಯಮಗಳು ಅದರ ಯಶಸ್ಸು, ವೈಫಲ್ಯ ಅಥವಾ ಅದಕ್ಕೆ ಸಿಕ್ಕ 'ಮಿಶ್ರಪ್ರತಿಕ್ರಿಯೆ'ಯನ್ನು ವರದಿ ಮಾಡುತ್ತವೆ. ಬಹುತೇಕ ಹಳ್ಳಿಗಳಲ್ಲಿ ಜನಜೀವನ ಯಥಾಪ್ರಕಾರ ಇರಬಹುದು. ಅಂದರೆ ಬಂದ್‌ನ ವ್ಯಾಪ್ತಿ ನಗರಗಳು ಮಾತ್ರವೇ? ಹಾಗಿದ್ದರೆ ಕರ್ನಾಟಕ ಬಂದ್ ಎಂದು ಹೇಗೆ ಕರೆಯುವುದು? ಪತ್ರಿಕೆಗಳನ್ನು ಒದದ, ಟಿವಿಯಂತಹ ಮಾಧ್ಯಮಗಳು ತಲುಪದ ಜನರಿರುವ ಕಡೆಗಳಿಗೆ ನಮ್ಮ ಯಾವ ಸಮಸ್ಯೆಗಳಾಗಲೀ ಕ್ರಿಯೆಗಳಾಗಲೀ ಅರ್ಥವಾಗಲಾರವು. ಅಂದರೆ ಬಂದ್ ಎಂದರೆ ನಗರವಾಸಿಗಳ, ಅದರಲ್ಲೂ ಸರ್ಕಾರದ ಸಿಂಹಾಸನವಿರುವ ರಾಜಧಾನಿಯ, ಜೀವನವು ಅಸ್ತವ್ಯಸ್ತಗೊಳ್ಳುವಂತೆ ಮಾಡುವುದು ಎಂದೇ ಆಗುತ್ತದೆ. ಆನಂತರ ಕ್ರಮವಾಗಿ ಪಟ್ಟಣಗಳ ಹಿರಿತನಕ್ಕನುಗುಣವಾಗಿ ಅಲ್ಲಿನ ಪರಿಸ್ಥಿತಿಗೆ ಪ್ರಾಮುಖ್ಯ.

ಸಮಸ್ಯೆಗಳ ಬಗ್ಗೆ ಜನಾಭಿಪ್ರಾಯ ರೂಪಿಸುವುದಕ್ಕೆ ಬಂದ್ ಆಚರಣೆಯನ್ನು ಬಳಸಿಕೊಳ್ಳುವುದು ಸರಿಯೇ? ಆ ಸಂದರ್ಭಗಳಲ್ಲಿ ಸಾಮಾನ್ಯರಿಗಾಗುವ ಸಂಕಟ ಹೇಳತೀರದು. ಸುಮಾರು ನಲವತ್ತು ವರ್ಷಗಳ ಹಿಂದೆ ನಾನು ಮೈಸೂರಲ್ಲಿ ಓದುತ್ತಿರುವಾಗ ಯಾವುದೋ ಕಾರಣಕ್ಕೆ ಬಂದ್ ಆಚರಿಸಿದ ಸಂದರ್ಭ ನೆನಪಿಗೆ ಬರುತ್ತಿದೆ. ನಾನು ಇದ್ದುದು ಒಂದು ರೂಮಿನಲ್ಲಿ, ಊಟದ ವ್ಯವಸ್ಥೆ ಒಂದು ಹಾಸ್ಟೆಲ್‌ನಲ್ಲಿ. ಎರಡು ಹೊತ್ತು ಊಟ ಬಿಟ್ಟು ಮಿಕ್ಕೆಲ್ಲಕ್ಕೂ. ನಮಗಿದ್ದ ಆಶ್ರಯ ಹೋಟೆಲುಗಳು, ಅಂಗಡಿಗಳು. ನನಗಿದ್ದ ಸೌಲಭ್ಯದ ಮಿತಿಯಿಂದಾಗಿ ಬೇಕಾದ್ದು ಕೊಳ್ಳುವ ಅನುಕೂಲವಿಲ್ಲದಿದ್ದರೂ, ಹಸಿವಾದರೆ ತಿನ್ನಬೇಕಲ್ಲ, ಒಂದು ಅರ್ಧ ಕಪ್ ಕಾಫಿ ಕುಡಿಯಬೇಕಲ್ಲ. ಅವತ್ತು ಮಧ್ಯಾಹ್ನ ಕುಡಿಯಲು ಕಾಫಿ ಬೇಕೆಂದು ಊರೆಲ್ಲ ಅಲೆದಾಡಿದೆ, ಪ್ರಯೋಜನವಾಗಲಿಲ್ಲ. ಕೊನೆಗೆ ರೈಲ್ವೆ ಸ್ಟೇಷನ್‌ನ ಕ್ಯಾಂಟೀನಿನಲ್ಲಿ ಒಂದಷ್ಟು ಕಾಫಿ ಎಂಬ ದ್ರವವನ್ನು ಸೇವಿಸಬೇಕಾಗಿ ಬಂತು, ಅದನ್ನು ಕುಡಿದ ಮೇಲೆ ಅದರ ಬಗೆಗಿನ ವ್ಯಾಮೋಹ ಹೊರಟುಹೋಯಿತು. ಕಾಫಿಗೇ ಈ ಪಾಡಾದರೆ, ಎಲ್ಲಕ್ಕೂ ಹೋಟಲನ್ನು ಅವಲಂಬಿಸಿದವರ ಗತಿ ಏನು, ಆಸ್ಪತ್ರೆಯಲ್ಲಿ ವೈದ್ಯರಿಲ್ಲದಿದ್ದರೆ ಕಾಯಿಲೆ ಕಸಾಲೆಯಿಂದ ಬಳಲುವವರು ಏನು ಮಾಡಬೇಕು, ತುರ್ತಾಗಿ ಎಲ್ಲೋ ಹೋಗಬೇಕಾದವರ ಪಾಡೇನು:, ಅವತ್ತು ದುಡಿದು ಅವತ್ತು ತಿನ್ನಬೇಕಾದವರ ಗತಿಯೇನು?

ಬಂದ್ ವಿರುದ್ಧ ಮುಂಬೈ ಹೈಕೋರ್ಟಿನಲ್ಲಿ ಹಿಂದೊಮ್ಮೆ ಸಾರ್ವಜನಿಕ ಹಿತಾಸಕ್ತಿಯ ದಾವೆ ಹಾಕಿದಾಗ ಕೋರ್ಟು ಬಂದ್‌ಗೆ ಕರೆಕೊಟ್ಟವರಿಗೆ ದಂಡ ವಿಧಿಸಿದ ನೆನಪು ನನಗಿದೆ. ಬಂದ್ ಎಂಬುವುದು ಪ್ರತಿಭಟನೆಯ ಒಂದು ಬಗೆ,

ಅದನ್ನು ನಿಷೇಧಿಸುವುದು ಸಂವಿಧಾನ ನೀಡಿರುವ ಹಕ್ಕಿಗೆ ವಿರುದ್ಧವಾದದ್ದು ಎಂದು ಕೆಲವರು ವಾದಿಸಬಹುದು. ಆದರೆ ತಮ್ಮ ಪಾಡಿಗೆ ತಾವು ದುಡಿದು ಬದುಕುವುದೂ ಹಕ್ಕಲ್ಲವೇ? ತಮ್ಮ ಹಕ್ಕು ಚಲಾಯಿಸಲು ಇತರರದನ್ನು ಮೊಟಕುಗೊಳಿಸುವುದು ಯಾವ ನ್ಯಾಯ? ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತಿಗೊಳಿಸುವ, ಇತರರಿಗೆ ತೊಂದರೆಯಾಗದ, ಯಾವುದೇ ಮಾರ್ಗವನ್ನು ಅನುಸರಿಸಬಹುದು. ಆದರೆ ಸರ್ಕಾರವೂ ಇಂಥ ಜನವಿರೋಧಿ ರೀತಿಗಳಿಗೇ ಮಣಿಯುವಂತೆ ಕಾಣುತ್ತದೆ. ನ್ಯಾಯಯುತವಾಗಿ ಪ್ರತಿಭಟಿಸಿದರೆ ಅದನ್ನು ಗಮನಿಸುವುದಿಲ್ಲ, ಕಣ್ಣಿಗೆ ಹೊಡೆಯುವ ಹಾಗೆ ಪ್ರತಿಭಟನೆ ನಡೆಸಿದರೆ ಮಾತ್ರ ಅಂತಹವರ ಕಡೆ ಗಮನ ಹರಿಸುತ್ತದೆಯೇನೋ ಎಂದೂ ಅನ್ನಿಸುತ್ತದೆ. ದೊಡ್ಡದಾದಷ್ಟೂ ಪ್ರತಿಭಟನೆಗೆ ಮಹತ್ವ ಹೆಚ್ಚು. ಸರ್ಕಾರವೂ ಬಲಿಷ್ಠ ಲಾಬಿಗೇ ಮಣಿಯುವುದು. ಆದ್ದರಿಂದಲೇ ಅಂತಹ ಮಾರ್ಗಗಳನ್ನು ಪ್ರತಿಭಟನಕಾರರೂ ಆರಿಸಿಕೊಳ್ಳುತ್ತಾರೆ. ಅನೇಕ ವೇಳೆ ಕಾರಣ ಎಷ್ಟೋ ವೇಳೆ ಸಮಂಜಸವಾಗಿರುವಂತೆ ತೋರುವುದಿಲ್ಲ; ತಾವು ನಾಯಕರಾಗಿ ಜನರ ಮನಸ್ಸಿನಲ್ಲಿ ಅಚ್ಚೊತ್ತಬೇಕೆಂಬ ಕಾರಣಕ್ಕಾಗಿಯೇ ಕೆಲವರು ಮುಂದಾಳತ್ವ ವಹಿಸುತ್ತಾರೆ. ಪ್ರಜಾಪ್ರಭುತ್ವದಲ್ಲಿ ಪ್ರಚಾರಕ್ಕೆ ತಾನೇ ಮಾನ್ಯತೆ? ಪ್ರಚಾರದಿಂದ ತಾನೇ ಜನರಲ್ಲಿ ತನ್ನ ನೆನಪು ಬರುವಂತೆ ಮಾಡಲು ಸಾಧ್ಯವಾಗುವುದು? ಒಳ್ಳೆಯದನ್ನು ಮಾಡುವವರಿಗಿಂತ ಜನ ಭಯ ಹುಟ್ಟಿಸುವವರನ್ನೇ ಅಲ್ಲವೇ ಹೆಚ್ಚು ನೆನಪಿಸಿಕೊಳ್ಳುವುದು? ಹೀಗಾಗಿ ನಾಯಕತ್ವದ ಮುಖ್ಯ ಲಕ್ಷಣಗಳಲ್ಲೊಂದು ಎಂದರೆ ಜನರನ್ನು ಭಯಪಡಿಸುವುದು ಎಂದೂ ಅನ್ನಿಸಿಬಿಡಬಹುದು. ಅದರ ಫಲವೇ ಇಂಥ ಕಾರ್ಯಕ್ರಮಗಳು ಎಂಬ ಭಾವನೆ ಬಂದುಬಿಡುತ್ತದೆ. ಪ್ರತಿಭಟನೆ ಒಂದು ದೊಡ್ಡ ಮೌಲ್ಯ; ಪ್ರಜಾಪ್ರಭುತ್ವದ ಜೀವಾಳ. ಭಿನ್ನಾಭಿಪ್ರಾಯಗಳಿದ್ದೂ ಸಾಮರಸ್ಯ ಸಾಧ್ಯವಿಲ್ಲವೇ? ಪ್ರತಿಭಟನೆ ನಡೆಸಿಯೂ ಇತರರಿಗೆ ತೊಂದರೆಯಾಗದಂತೆ ನಡೆದುಕೊಳ್ಳುವುದು ಸಾಧ್ಯವಿಲ್ಲವೇ? ಬಂದ್ ಅನ್ನು ಬಂದ್ ಮಾಡುವುದು ಸಾಧ್ಯವಿಲ್ಲವೇ?

☆ – ☆ – ☆

# ರಾಷ್ಟ್ರಕವಿ ಪಟ್ಟ

'ಸುವರ್ಣ ಕರ್ನಾಟಕ' ಸಂಭ್ರಮದ ಸನ್ನಿವೇಶದಲ್ಲಿ ಕನ್ನಡದ ಹಿರಿಯ ಲೇಖಕರೊಬ್ಬರಿಗೆ ರಾಷ್ಟ್ರಕವಿ ಎಂಬ ಪಟ್ಟ ಕಟ್ಟಲು ಸರ್ಕಾರ ಯೋಚಿಸುತ್ತಿದ್ದು, (ಹೀಗೆ ಮಾಡಲು ಸಾಹಿತ್ಯ ವಲಯದ ಕೆಲವರು ಸರ್ಕಾರವನ್ನು ಒತ್ತಾಯಿಸಿದ್ದು ನನಗೆ ತಿಳಿದಿದೆ). ಅದಕ್ಕಾಗಿ ಸೂಕ್ತ ವ್ಯಕ್ತಿಯನ್ನು ಆಯ್ಕೆಮಾಡಲು ಒಂದು ಸಮಿತಿಯನ್ನೂ ಸರ್ಕಾರ ನೇಮಿಸಿದೆ. ಪ್ರಶಸ್ತಿಯು ಹತ್ತು ಲಕ್ಷ ರೂಪಾಯಿಗಳ ಮೊತ್ತವನ್ನು ಹೊಂದಿರುವುದಲ್ಲದೆ, ಇದಕ್ಕೆ ಆಯ್ಕೆಯಾದ ಸಾಹಿತಿಯು ಜೀವನಪರ್ಯಂತ ತನ್ನ ಹೆಸರಿಗೆ ರಾಷ್ಟ್ರಕವಿ ಎಂದು ಸೇರಿಸಿಕೊಳ್ಳಬಹುದಂತೆ. ಈ ಹಿಂದೆ ಕನ್ನಡದಲ್ಲಿ ಇಬ್ಬರು ರಾಷ್ಟ್ರಕವಿಗಳಿದ್ದರು: ಮೊದಲನೆಯವರು ಮದ್ರಾಸ್ ಪ್ರೆಸಿಡೆನ್ಸಿಯು ನೀಡಿದ್ದ ಆ ಪಟ್ಟವನ್ನು ಹೊತ್ತ ಮಂಜೇಶ್ವರ ಗೋವಿಂದ ಪೈ ಅವರು; ಎರಡನೆಯವರು ಕರ್ನಾಟಕ ಏಕೀಕರಣವಾದ ಬಳಿಕ ಆದ ಕುವೆಂಪು ಅವರು. ದೀರ್ಘಕಾಲದ ಬಿಡುವಿನ ಬಳಿಕ ಈಗ ಮತ್ತೆ ಆ ಪಟ್ಟವನ್ನು ತುಂಬಲು ಸರ್ಕಾರ ನಿರ್ಧರಿಸಿದೆ.

ಈ ಬಗ್ಗೆ ಅನೇಕ ಸಂದೇಹಗಳು ನನ್ನನ್ನು, ನನ್ನಂತಹವರನ್ನು ಕಾಡುತ್ತಿವೆ. ನಮ್ಮಲ್ಲಿ ಅನೇಕ ಮಂದಿ ಜಗದ್ಗುರುಗಳಿದ್ದಾರೆ; ಆದರೆ ಇರುವುದು ಒಂದೇ ಜಗತ್ತು; ಹೀಗಾಗಿ ಅವರು ಯಾವ ಜಗತ್ತಿನ ಗುರುಗಳು ಎಂದು ಕವಿಯೊಬ್ಬರು ಗೇಲಿ ಮಾಡಿದ್ದರು. ಹಾಗೆಯೇ ಆಯ್ಕೆಯಾಗುವ ಕನ್ನಡದ ಕವಿ ಯಾವ ರಾಷ್ಟ್ರದ ಕವಿ ಎನ್ನಿಸಿಕೊಳ್ಳುತ್ತಾರೆ? ಕರ್ನಾಟಕ ರಾಷ್ಟ್ರಕವಿಯೇ? ಸಾಮಾನ್ಯವಾಗಿ ರಾಷ್ಟ್ರ ಎಂಬ ಪದವನ್ನು nation ಎಂಬ ಅರ್ಥದಲ್ಲಿ ಭಾರತವನ್ನು ಸೂಚಿಸಲು ಬಳಸುತ್ತಿದ್ದೇವೆ; ರಾಷ್ಟ್ರಗೀತೆ, ರಾಷ್ಟ್ರಪಿತ, ರಾಷ್ಟ್ರೀಯ ಇತ್ಯಾದಿ ರೂಪಗಳನ್ನು ನೋಡಬಹುದು; ಕರ್ನಾಟಕದಂತಹ ಘಟಕವನ್ನು ರಾಜ್ಯ ಎಂದು ಗುರುತಿಸಲಾಗುತ್ತದೆ. ಈ ಪ್ರಶಸ್ತಿಯನ್ನು ನೀಡುತ್ತಿರುವುದು ಕರ್ನಾಟಕ ಸರ್ಕಾರ; ಅದು ಇಡೀ ರಾಷ್ಟ್ರವ್ಯಾಪ್ತಿಯ ಪ್ರಶಸ್ತಿಯನ್ನು ನೀಡಬಹುದೇ? ಅಥವಾ ನಮ್ಮ ಸರ್ಕಾರವೇನಾದರೂ ಕರ್ನಾಟಕವೇ ನಿಜವಾದ ಅರ್ಥದಲ್ಲಿ ರಾಷ್ಟ್ರ (nation), ಭಾರತವೇನಿದ್ದರೂ ಅಂಥ ಹಲವಾರು ರಾಷ್ಟ್ರಗಳ ಒಂದು ಒಕ್ಕೂಟ (federation) ಮಾತ್ರ ಎಂಬ ಸತ್ಯಾಂಶವನ್ನು ದೃಢಪಡಿಸಿಕೊಂಡು ಈ ಕಾರ್ಯ ಮಾಡುತ್ತಿದೆಯೇ? ಇಲ್ಲದಿದ್ದರೆ ಆ ಕವಿಗೆ

ರಾಜ್ಯಕವಿ ಎನ್ನಬೇಕಾಗಿತ್ತು; ಅಥವಾ ನಾಡಗೀತೆ ಎಂಬಂತೆ 'ನಾಡಕವಿ' ಎನ್ನಬೇಕಾಗಿತ್ತು. ನಮ್ಮ ಕವಿಯು ಇಡೀ ಭಾರತವ್ಯಾಪ್ತಿಯ ದರ್ಜೆಯವರು, ಔನ್ನತ್ಯವಿರುವವರು ಎಂಬ ಅಭಿಮಾನವನ್ನು ಇದು ಸೂಚಿಸಿದರೆ, ವಿಶ್ವಕವಿ ಎಂದೇ ಕರೆಯಬಹುದಲ್ಲ? ಕನ್ನಡ ಜಗತ್ತು ಎಂಬುದು ಸುಂದರ ಕಲ್ಪನೆ; ಆದ್ದರಿಂದ 'ಜಗತ್ಕವಿ' ಎಂದೂ ಕರೆಯಬಹುದು. ರವೀಂದ್ರನಾಥ ಠಾಕೂರರನ್ನು 'ವಿಶ್ವಕವಿ' ಎಂದು ಕರೆದುದಕ್ಕೆ ಅವರಿಗೆ ನೋಬೆಲ್ ಪ್ರಶಸ್ತಿ, ಅಂದರೆ ಜಾಗತಿಕ ಮಟ್ಟದ ಪ್ರಶಸ್ತಿ ಬಂದುದು ಕಾರಣವಾದಂತೆ, ರಾಷ್ಟ್ರಮಟ್ಟದ ಪ್ರಶಸ್ತಿ ಗಳಿಸಿದ ಕವಿ ರಾಷ್ಟ್ರಕವಿಯಾಗುವುದಿಲ್ಲವೇ? ಹಾಗಾದರೆ ಭಾರತ ಮಟ್ಟದಲ್ಲಿ ನೀಡಲಾಗುವ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಕವಿಗಳೆಲ್ಲ ರಾಷ್ಟಕವಿಗಳೇ ಅಲ್ಲವೇ, ಅಂತಹ ಸಾಹಿತಿಗಳು, ರಾಷ್ಟ್ರಸಾಹಿತಿಗಳಲ್ಲವೇ? ಕೇಂದ್ರ ಸರ್ಕಾರ ಕೊಡಮಾಡುವ 'ಭಾರತರತ್ನ'ದಂತೆ ಹಿಂದೆ ಕರ್ನಾಟಕ ಸರ್ಕಾರ ತನ್ನ ಪರಿಧಿಯಲ್ಲಿ 'ಕರ್ನಾಟಕರತ್ನ' ಪ್ರಶಸ್ತಿ ನೀಡಿತ್ತು. ಹಾಗೆಯೇ ರಾಷ್ಟ್ರಕವಿ ಎಂಬುದರ ಬದಲು ಕರ್ನಾಟಕಕವಿ ಎಂಬುದು ಸೂಕ್ತವೇ?

ಇನ್ನೊಂದು ಸಮಸ್ಯೆ. ರಾಷ್ಟ್ರಕವಿಯನ್ನಾಗಿ ಆಯ್ಕೆಮಾಡುವುದು ಪದ್ಯ ಬರೆದವರಲ್ಲಿ ಮಾತ್ರವೇ? ಅತ್ಯಂತ ಶಕ್ತಿಶಾಲಿ ಗದ್ಯ ಬರೆದ ಸಾಹಿತಿಯೂ ಇದಕ್ಕೆ ಅರ್ಹನಲ್ಲವೇ? 'ಗದ್ಯಂ ಕವೀನಾಂ ನಿಕಷಂ ವದಂತಿ' ಎಂಬ ಮಾತಿದೆ; ಗದ್ಯವು ಕವಿಯ ಯೋಗ್ಯತೆಯನ್ನು ಪರೀಕ್ಷಿಸುವ ಒರೆಗಲ್ಲು ಎಂಬುದು ಇದರರ್ಥ. ಹಾಗೆಯೇ ನಾಟಕಕಾರರೂ. ನಾಟಕವನ್ನು ದೃಶ್ಯಕಾವ್ಯ ಎನ್ನುತ್ತಿದ್ದರಲ್ಲ. ಎಂದರೆ ಹಿಂದೆ ಕವಿ ಎಂಬುದು ಪದ್ಯ, ಗದ್ಯ, ನಾಟಕ ಮೂರನ್ನು ಬರೆದವರನ್ನೂ ಒಳಗೊಳ್ಳುತ್ತಿತ್ತು. ಅಂತಹವರನ್ನು ಪ್ರಶಸ್ತಿಯ ವ್ಯಾಪ್ತಿಯಿಂದ ಹೊರಗಿರಿಸುವುದು ಸರಿಯೇ? ಅಥವಾ ಗದ್ಯ ಲೇಖಕರನ್ನೂ ನಾಟಕಕಾರರನ್ನೂ ರಾಷ್ಟ್ರಕವಿ ಪ್ರಶಸ್ತಿಗೆ ಪರಿಗಣಿಸಲಾಗುತ್ತದೆಯೇ? ಅಥವಾ ಅವರೂ ಅರ್ಹತೆ ಪಡೆಯಲು ಒಂದಷ್ಟನ್ನಾದರೂ ಪದ್ಯ ಬರೆದಿರಬೇಕು ಎಂದು ನಿರೀಕ್ಷಿಸಲಾಗುತ್ತದೆಯೇ? ಅಥವಾ ಹೆಸರು ರಾಷ್ಟ್ರಕವಿಯಾದರೂ ಒಟ್ಟಾರೆ ಶ್ರೇಷ್ಠ ಸಾಹಿತ್ಯ ರಚಿಸಿದವರನ್ನು ಈ ಪಟ್ಟಕ್ಕೆ ಆಯ್ಕೆಮಾಡಲಾಗುತ್ತದೆಯೇ? ಆಯ್ಕೆ ಸಮಿತಿಯು ಇರಿಸಿಕೊಳ್ಳಬೇಕಾದ ಮಾನದಂಡಗಳನ್ನು ಸರ್ಕಾರ ಸೂಚಿಸಿರಬೇಕಲ್ಲವೇ? ಈ ಮಾನದಂಡಗಳನ್ನು ನಿರ್ಣಯಿಸಿದವರಾರು?

ರಾಷ್ಟ್ರಕವಿಯಾಗುವವರು ಸರ್ಕಾರದ ಕವಿಗಳಾಗುತ್ತಾರೆಯೇ? ಹಿಂದೆ ಆಂಧ್ರಪ್ರದೇಶದಲ್ಲಿ ಎನ್‌ಟಿಆರ್ ಮುಖ್ಯಮಂತ್ರಿಯಾಗಿದ್ದಾಗ ಕೆಲವು ಮಂದಿ ಸಾಹಿತಿಗಳು, ಕಲಾವಿದರುಗಳಿಗೆ 'ಆಸ್ಥಾನವಿದ್ವಾನ್' ಪಟ್ಟ ಕಟ್ಟಲಾಗುತ್ತಿತ್ತು; ಈಗಲೂ ಆ ಪರಿಪಾಟ ಅಲ್ಲಿ ಇದೆಯೋ ತಿಳಿಯದು. ಸಿನಿಮಾಗಳಲ್ಲಿ ರಾಜನ ಪಾರ್ಟು ಮಾಡಿ ಮಾಡಿ ಪರಿಚಿತವಾಗಿದ್ದ ಆ ಪರಿಕಲ್ಪನೆಯನ್ನು ಎನ್‌ಟಿಆರ್ ಜಾರಿಗೆ ತಂದುದು ಸರಿಯೇ! ಆ ವಿದ್ವಾಂಸರನ್ನು ತಮ್ಮ ಆಸ್ಥಾನದವರು ಎಂದು ತಿಳಿಯುವ ಮನೋಭಾವವೂ ಅವರದಾಗಿದ್ದಂತೆ ಕಾಣುತ್ತದೆ. ನಮ್ಮ ಪಂಪನಂತಹ ಕವಿಯೂ ರಾಜರ

ಆಸ್ಥಾನದಲ್ಲಿದ್ದು ಅವನಿಂದ ಅಗ್ರಹಾರ ಪಡೆದು ಅರಿಕೇಸರಿಯನ್ನು ಅರ್ಜುನನೊಡನೆ ಸಮೀಕರಿಸಿದ. ಪಂಪನಿಂದಾಗಿ ಅರಿಕೇಸರಿ ಅಜರಾಮರನಾದ. ಸರ್ಕಾರದ ರಾಷ್ಟ್ರಕವಿ ಪಟ್ಟ ಪಡೆಯುವವರು ಹೀಗೆಯೇ ಸರ್ಕಾರವನ್ನು ಸದಾ ಬೆಂಬಲಿಸುತ್ತಲೂ, ವೈಭವೀಕರಿಸುತ್ತಲೂ ಇರಬೇಕೆಂದು ಸರ್ಕಾರ ನಿರೀಕ್ಷಿಸುತ್ತದೆಯೇ? ಅಂದರೆ ಈ ಪಟ್ಟಕ್ಕೆ ಬಂದ ಕವಿ ಸರ್ಕಾರದ ಕವಿಯಾಗುತ್ತಾರೆಯೇ? ಅವರು ಸರ್ಕಾರವನ್ನು ಟೀಕಿಸುವ ಅಧಿಕಾರವನ್ನು (ಹೊಂದಿದ್ದರೆ) ಮುಂದೆಯೂ ಉಳಿಸಿಕೊಳ್ಳಬಹುದೇ? ಅಥವಾ ಟೀಕಿಸುವ ಜಾಯಮಾನವಿಲ್ಲದವರನ್ನೇ ಅದಕ್ಕೆ ಆಯಬೇಕೆಂಬ ಸೂಚನೆ ಯೇನಾದರೂ ಇದೆಯೇ? ಇತರ ಪ್ರಶಸ್ತಿಗಳಂತೆ ರಾಷ್ಟ್ರಕವಿ ಪಟ್ಟಕ್ಕೆ ಕೃತಿಯೊಂದು ಆಧಾರವಾಗದೆ ಒಬ್ಬ ಸಾಹಿತಿಯ ಸಮಗ್ರ ಸಾಧನೆ ಅಳತೆಗೋಲಾಗಬೇಕಾಗುತ್ತದೆ; ಅದನ್ನು ನಿರ್ಧರಿಸುವುದು ಹೇಗೆ, ಸಮಿತಿ ಸದಸ್ಯರ ಬಹುಮತವೇ? ಅವರು ಇತರರ ಅಭಿಪ್ರಾಯವನ್ನೂ ಕ್ರೋಡೀಕರಿಸುತ್ತಾರೆಯೇ? ಬದುಕಿರುವವರಿಗೆ ಮಾತ್ರ ಈ ಪ್ರಶಸ್ತಿ ನೀಡುತ್ತಾರೆಯೋ, ಮರಣೋತ್ತರವಾಗಿಯೂ ನೀಡಬಹುದೇ? ಸರ್ಕಾರವೇ ಕೊಡುವ ಪಂಪ ಪ್ರಶಸ್ತಿಗೆ ಇದುವರೆಗೆ ಕೆಲವರನ್ನು ಮರಣೋತ್ತರವಾಗಿ ಆಯ್ಕೆ ಮಾಡಲಾಗಿದೆ. ಇದನ್ನೂ ಹಾಗೆಯೇ ಮಾಡುವ ಅವಕಾಶವಿದ್ದರೆ ಮೊದಲ ಪ್ರಶಸ್ತಿಯನ್ನು ಪಂಪನಿಗೇ ಕೊಡಬೇಕೆಂದು ನಾನು ಸಮಿತಿಗೆ ನಮ್ರನಾಗಿ ಸೂಚಿಸಬಯಸುತ್ತೇನೆ. (ಪಂಪ ಪ್ರಶಸ್ತಿಯನ್ನೂ ಮೊದಲು ಅವನಿಗೇ ಕೊಡಬೇಕಾಗಿತ್ತು ಎಂಬುದು ನನ್ನ ಅಭಿಮತ). ಈ ಪ್ರಶಸ್ತಿಯನ್ನು ಇನ್ನು ಮುಂದೆ ಪ್ರತಿವರ್ಷವೂ ನೀಡುವ ನಿರ್ಧಾರವನ್ನೇನಾದರೂ ಸರ್ಕಾರ ಮಾಡಿದೆಯೇ? ಈ ಪ್ರಶಸ್ತಿಯ ಆಯ್ಕೆಗೆ ಒಂದು ಸಣ್ಣ ಗ್ಯಾಲಪ್ ನಡೆಸಿದ್ದರೆ ಹೇಗಾಗುತ್ತಿತ್ತು? ಟಿವಿ ವಾಹಿನಿಯೊಂದು 'ವರ್ಷದ ಕನ್ನಡಿಗ'ನನ್ನು ಆರಿಸಲು ನಡೆಸಿದಂತೆ ಇದಕ್ಕೂ ಜನಾಭಿಪ್ರಾಯ ಸಂಗ್ರಹ ಮಾಡಿದ್ದರೆ ಆಗುತ್ತಿತ್ತೇನೋ. ಅರ್ಹ ಅಭ್ಯರ್ಥಿಗಳೂ ತಮ್ಮ ಸಾಧನೆಯ ಬಗ್ಗೆ ಒಂದಷ್ಟು ವಿವರಿಸಿ ಹೇಳುವ ಅವಕಾಶ ವಿರುತ್ತಿತ್ತಲ್ಲ! ಈ ವರ್ಷ ಆಯ್ಕೆಯಾಗದವರು ಮುಂದಿನ ವರ್ಷವಾದರೂ ಸಿಕ್ಕೀತೇನೋ ಎಂದು ಆಸೆ ಹೊಂದಿರಬಹುದಾಗಿತ್ತು. ಏನೋ ನನಗಂತೂ ಈ ವಿಷಯ ಗೊಂದಲಮಯವಾಗಿ ಕಾಣುತ್ತಿದೆ.

☆ – ☆ – ☆

# ಅರಸರಿಯದ ಬಿಟ್ಟಿ

ಬಸವಣ್ಣನ ವಚನವೊಂದರಲ್ಲಿ 'ಅರಸರಿಯದ ಬಿಟ್ಟಿ' ಎಂಬ ನುಡಿಗಟ್ಟು ಬಳಕೆಯಾಗಿದೆ. ಬಿಟ್ಟಿ ಎಂದರೆ ಪುಕ್ಕಟೆ ಎಂಬ ಅರ್ಥ; ಅದು ಈಗಲೂ ಅದೇ ಅರ್ಥದಲ್ಲಿ ಬಳಕೆಯಲ್ಲಿರುವ ಶಬ್ದ. ಭಕ್ತಿಯಿಲ್ಲದ ಪೂಜೆಯು ರಾಜನಿಗೆ ತಿಳಿಯದಂತೆ ಮಾಡುವ ಬಿಟ್ಟಿಯಂತೆ ವ್ಯರ್ಥ ಎಂಬುದು ಆ ವಚನದಲ್ಲಿ ಈ ನುಡಿಗಟ್ಟಿಗೆ ಬಸವಣ್ಣ ಸೂಚಿಸುವ ಅರ್ಥ. ಬಿಟ್ಟಿ ಎಂಬುದು ಸಂಸ್ಕೃತದ 'ವಿಷ್ಟಿ' ಎಂಬ ಶಬ್ದದ ತದ್ಭವ ರೂಪ. ಪ್ರಾಚೀನ ಕಾಲದಲ್ಲಿ ಯಾವುದಾದರೊಂದು ರಾಜನು (ದೇಶವು) ಯುದ್ಧದಲ್ಲಿ ತೊಡಗಿರುವಾಗ ರಾಜನು ತನ್ನ ಪ್ರಜೆಗಳಿಂದ ಕೆಲವು ವಿಶಿಷ್ಟ ಕರ್ತವ್ಯಗಳನ್ನು ನಿರೀಕ್ಷಿಸುತ್ತಿದ್ದ. ಅದರಲ್ಲಿ ಒಂದೆಂದರೆ ತನಗೆ ಬೇಕಾದಾಗ ಅವರು ಪ್ರತಿಫಲವಿಲ್ಲದೆ ಕೆಲವು ಕೆಲಸಗಳನ್ನು ಮಾಡಬೇಕಾಗಿತ್ತು. ಇದು ಕೌಟಿಲ್ಯನ ಕಾಲದಷ್ಟು ಹಳೆಯ ಪರಿಕಲ್ಪನೆ. ಅವನ 'ಅರ್ಥಶಾಸ್ತ್ರ'ದಲ್ಲಿ "ಶಿಬಿರ ಮಾರ್ಗ ಸೇತು ಕೂಪ ತೀರ್ಥ ಶೋಧನಕರ್ಮ ಯಂತ್ರಾಯುಧೋಪಕರಣ ಗ್ರಾಸವಹನಂ ಆಯೋಧನಾಚ್ಚ ಪ್ರಹರಣಾವರಣ ಪ್ರತಿವಿದ್ಧಾಪನಯನಮಿತಿ ವಿಷ್ಟಿಕರ್ಮಾಣಿ" ಎಂದು ಹೇಳಲಾಗಿದೆ. ಅಂದರೆ ಶಿಬಿರ ಮಾರ್ಗ ಸೇತುವೆ ಬಾವಿ ಇವುಗಳನ್ನು ಸರಿಪಡಿಸುವುದು, ನೀರನ್ನು ಶುದ್ಧಿಗೊಳಿಸವುದು; ಆಯುಧಗಳು, ಯಂತ್ರಗಳು, ಆವರಣಗಳು, ಉಪಕರಣಗಳು, ಆಹಾರ ಇವುಗಳನ್ನು ಹೊತ್ತು ಸಾಗಿಸುವುದು; ಯುದ್ಧದಲ್ಲಿ ಗಾಯಗೊಂಡವರನ್ನು ಅಥವಾ ಸತ್ತವರನ್ನು ಹೊತ್ತು ತರುವುದು – ಈ ಬಗೆಯ ಶೋಧನಕರ್ಮ, ವಹನಕರ್ಮ, ಅಪನಯನಕರ್ಮ ಇವುಗಳೇ ವಿಷ್ಟಿಕರ್ಮಗಳು. ಇವುಗಳನ್ನು 'ಮೂವಿಟ್ಟಿ' ಎಂದೂ ಸೂಚಿಸುತ್ತಿದ್ದರು. ತನ್ನ ದೇಶವು ಯುದ್ಧದಲ್ಲಿ ತೊಡಗಿರುವಾಗ ರಾಜನಿಗಾಗಿ (ಅಂದರೆ ದೇಶಕ್ಕಾಗಿ) ಮಾಡುವ ಕೆಲಸಕ್ಕೆ ಪ್ರತಿಫಲ ನಿರೀಕ್ಷಿಸಬಾರದು ಎಂಬುದು ಇದರ ಆಶಯ. ಕೆಲಸಕ್ಕೆ ಕೂಲಿ ಪಡೆಯುವುದು ಹಕ್ಕು; ಆದರೆ ದೇಶವೇ ಯುದ್ಧದಂತಹ ಗಂಡಾಂತರದಲ್ಲಿರುವಾಗ ಆ ಹಕ್ಕು ಮೊಟಕುಗೊಳ್ಳುತ್ತದೆ; ಈಗ ಎಮರ್ಜೆನ್ಸಿ ಎಂಬುದಕ್ಕೆ ಸಂವಿಧಾನದಲ್ಲಿ ಅವಕಾಶವಿದೆಯಲ್ಲ, ಹಾಗೆ. ಆದರೆ ಯುದ್ಧ ನಡೆಯುವಾಗ ಯಾವನಾದರೊಬ್ಬ ಬಿಟ್ಟಿ ಕೆಲಸ ಮಾಡಿ, ಅದನ್ನು ರಾಜನು (ಅಥವಾ ಅವನ ಸಮೀಪದವರು) ಗಮನಿಸಿದ್ದರೆ, ಯುದ್ಧ ಮುಗಿದು ಶಾಂತಿ ನೆಲೆಗೊಂಡಾಗ ಬಿಟ್ಟಿ ಕೆಲಸ ಮಾಡಿದವನಿಗೆ ರಾಜ ಮೆಚ್ಚನ್ನು ನೀಡಬಹುದು. ಅಂದರೆ ಮಾಡಿದ

ಬಿಟ್ಟಿ ಕೆಲಸ ವ್ಯರ್ಥವಾಗದಿರಬೇಕಾದರೆ, ತನ್ನ ಪಾಡಿಗೆ ತಾನು ಅದನ್ನು ಮಾಡಿದರೆ ಸಾಲದು. ಹಾಗೆ ಮಾಡಿದರೆ ಅದಕ್ಕೆ ಯುದ್ಧ ನಡೆಯುವಾಗ ಮಾತ್ರವಲ್ಲ, ಯಾವ ಕಾಲದಲ್ಲೂ ಪ್ರತಿಫಲ ದೊರೆಯುವದಿಲ್ಲ; ಅದು ಪೂರ್ತಿ ಬಿಟ್ಟಿಯಾಗಿಯೇ ಉಳಿಯುತ್ತದೆ. ಆದರೆ ರಾಜನಿಗೆ ತಿಳಿಯುವಂತೆ ಮಾಡಿದ್ದರೆ, ಮುಂದೊಂದು ದಿನ ಅದಕ್ಕೆ ಫಲ ದೊರೆಯಬಹುದು; ಅಂದರೆ ಕೆಲಸಕ್ಕೆ ಪ್ರತಿಫಲ ಕಾಲಾನಂತರವಾದರೂ ದೊರೆಯುತ್ತದೆ. ಹಾಗಾಗಿ ಬಿಟ್ಟಿಗೂ ಕೂಲಿ ಸಿಕ್ಕ ಹಾಗಾಗುತ್ತದೆ.

ಈ ವಿಷಯ ನನಗೆ ಈಗ ನೆನಪಿಗೆ ಬರಲು ಕಾರಣ, ಇದು ರಾಜ್ಯೋತ್ಸವ ಸಮೀಪಿಸುತ್ತಿರುವ ಕಾಲವಲ್ಲವೇ? ರಾಜ್ಯೋತ್ಸವ ಪ್ರಶಸ್ತಿಗಳು ಪ್ರಕಟಗೊಳ್ಳುವ ಕಾಲ. ಅನೇಕರು ಅರ್ಜಿಗಳನ್ನೂ ಹಾಕಿಕೊಂಡಿರಬಹುದು, ಅದರ ಜೊತೆಗೆ ಮತ್ತೆ ಕೆಲವರು ಶಿಫಾರಸು ಪತ್ರಗಳನ್ನು ಹಿಡಿದು ಓಡಾಡುತ್ತಿರಬಹುದು, ಮತ್ತೂ ಕೆಲವರು ಖುದ್ದಾಗಿ ಸಂಬಂಧಪಟ್ಟವರನ್ನು ಕಾಣಲು ಪ್ರಯತ್ನಿಸುತ್ತಿರಲೂ ಬಹುದು. ಒಟ್ಟಾರೆ ಕನ್ನಡ ನಾಡುನುಡಿಗಳಿಗೆ ಮಾಡಿದ ಕೆಲಸ 'ಅರಸರಿಯದ ಬಿಟ್ಟಿ'ಯಂತೆ ವ್ಯರ್ಥವಾಗದಿರ ಬೇಕಾದರೆ ತಮ್ಮ ಕೆಲಸವನ್ನು ಸರ್ಕಾರದ ಗಮನಕ್ಕೆ ತರಬೇಕು; ಪ್ರಯತ್ನ ಪಡದಿದ್ದವರಿಗೆ 'ಸೇವೆ'ಗೆ ಪ್ರತಿಫಲ ದೊರೆಯದು. 'ask and it shall be given' ಎಂಬ ಮಾತಿದೆಯಲ್ಲ, ಹಾಗೆಯೇ 'ಚರನ್ವಯೀ ಮಧು ಸಿದ್ಧತಿ' (ಸುತ್ತಾಡಿದರೆ – ದುಂಬಿಗೆ – ಮಕರಂದ ದೊರೆಯುವುದು) ಎಂಬ ಮಾತೂ ಇದೆ. ಪ್ರಯತ್ನವಿಲ್ಲ ದಿದ್ದರೆ ಪ್ರಯೋಜನವಿಲ್ಲ. ತಾವು ನಾಡಿಗಾಗಿ ಏನಾರೊಂದು ಅರ್ಥಪೂರ್ಣ ಕಾರ್ಯ ಮಾಡುವಾಗ ಪ್ರತಿಫಲದ ಅಪೇಕ್ಷೆ ಇಲ್ಲದಿರಬಹುದು; ಆದರೆ ಸಮಯ ಸಿಕ್ಕಾಗ ಒಂದಷ್ಟು ಫಲ ಸಿಕ್ಕರೆ ಬೇಡವೆಂದವರುಂಟೆ? ಸರ್ಕಾರವೂ ತನಗೆ (ಅಂದರೆ ದೇಶಕ್ಕೆ ಎಂದೇ ಅರ್ಥ ತಾನೇ!) ಸಹಾಯಮಾಡಿದವರಿಗೆ ಒಂದಷ್ಟು ಕೃತಜ್ಞತೆಯನ್ನು ಸಲ್ಲಿಸುವ ಕಾಲ ಇದು. ಇಡೀ ದೇಶಕ್ಕೆ ಸೇವೆ ಸಲ್ಲಸಿದವರಿಗೆ ಕೃತಜ್ಞತೆ ಸಲ್ಲಿಸುವುದು ಗಣರಾಜ್ಯೋತ್ಸವದ ಸಂದರ್ಭದಲ್ಲಾದರೆ, ಕನ್ನಡ ನಾಡು ನುಡಿಗಳಿಗೆ ಸೇವೆ ಸಲ್ಲಿಸಿದವರಿಗೆ ಏನಾದರೂ ಮಾಡುವುದಕ್ಕೆ ರಾಜ್ಯೋತ್ಸವ ಸಕಾಲ. ಹೀಗಾಗಿ ನೀಡುವವರು ಮತ್ತು ಬೇಡುವವರು – ಇಬ್ಬರಿಗೂ ಇದು ಬಿಡುವಿಲ್ಲದ ಕಾಲ. ಇಂಥ ಫಲವಾವುದೂ ಸಿಕ್ಕದಿದ್ದಾಗ ಕೆಲವರು ತಮ್ಮ ತ್ಯಾಗಕ್ಕೆ ಯಾವ ಬೆಲೆಯೂ ಇಲ್ಲವಲ್ಲ ಎಂದು ಕೊರಗುವುದುಂಟು.

ಇಂತಹ ಮಾತನ್ನು ಕೇಳಿದಾಗ ನನಗನ್ನಿಸುವುದೆಂದರೆ ಫಲವನ್ನು ಸ್ವೀಕರಿಸುವುದು 'ತ್ಯಾಗ' ಹೇಗಾಗುತ್ತದೆ ಎಂದು. ಮುಂದೊಂದು ದಿನ ಫಲ ಸಿಕ್ಕೀತು ಎಂದು ನಿರೀಕ್ಷಿಸಿ ಕೆಲಸ ಮಾಡುವುದು ಕ್ಷುಲ್ಲಕತೆ; ಅಂಥ ಭಾವನೆಯಿಲ್ಲದೆಯೇ ಮಾಡಿ ಆನಂತರ ಬಂದರೆ ಬರಲಿ ಎನ್ನುವುದು ಗೋಸುಂಬೆತನ; ಅಂಥದಕ್ಕೆ ಪ್ರಯತ್ನಪಡುವುದಂತೂ ಕ್ಷುದ್ರತೆ. ನಿಜವಾದ ಸೇವೆಯೆಂದರೆ ಆ ಬಗ್ಗೆ ಯೋಚಿಸದಿರುವುದು. ಆದರೆ ಇದು ಹೊಟ್ಟೆ ಪಾಡಿಗಾಗಿ ಮಾಡುವ ನೌಕರಿಗೆ

ಅನ್ವಯಿಸುವುದಿಲ್ಲ. ನೌಕರಿಯಲ್ಲಿ ದುಡಿಮೆ–ಪ್ರತಿಫಲಗಳು ತಕ್ಕಡಿಯ ಎರಡು ಬಟ್ಟುಗಳು. ಪ್ರಶಸ್ತಿಯಂತಹ ಪ್ರತಿಫಲವನ್ನು ಹಲವರು ಸೇವೆಗೆ ಸಿಕ್ಕ ಮಾನ್ಯತೆ ಎಂದು ಹೇಳುವುದುಂಟು; ಸೇವೆಯನ್ನು ಯಾರು ಮಾನ್ಯ ಮಾಡಬೇಕು? ಸರ್ಕಾರವೇ? ಜನತೆಯೇ? ಯಾಕೆ? ಯಾರೂ ಮಾನ್ಯ ಮಾಡದಾಕ್ಷಣ ಮಾಡಿದ ಕೆಲಸಕ್ಕೆ ಬೆಲೆ ಹೊರಟುಹೋಗುವುದೇ? ಇಲ್ಲ ಎಂದೇ ನನ್ನ ಭಾವನೆ. ತನಗೆ ಇಷ್ಟವಾದ (ಕಷ್ಟವಾದರೂ) ಕೆಲಸ ನಿರ್ವಹಿಸುವಾಗ ಒಂದು ಬಗೆಯ ಸಾರ್ಥಕ ಮನೋಭಾವ ಉಂಟಾಗಿರುವುದಲ್ಲ (ಹಾಗಿಲ್ಲದಿದ್ದರೆ ಅದು ಮನಃಪೂರ್ವಕವಾದ ಕೆಲಸವಾಗಲಾರದು) ಅದೇ ಅದಕ್ಕೆ ಸಿಕ್ಕುವ, ಸಿಕ್ಕಬೇಕಾದ ಪ್ರತಿಫಲ. ಹೀಗಾಗಿ ಸೇವೆ, ತ್ಯಾಗ ಇವುಗಳೊಂದಿಗೆ ಮಾನ್ಯತೆ, ಗೌರವಗಳನ್ನು ಸಮೀಕರಿಸುವುದೇ ಸರಿಯಲ್ಲ ಎಂಬು ನನ್ನ ಅನಿಸಿಕೆ.

ದೇವರನ್ನು ಕಾಣಬೇಕೆಂದು, ಸಾಧನೆ ಮಾಡಬೇಕೆಂದು "ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿಯುತ್ತ" ಯಾರಿಗೂ ಗೊತ್ತಾಗದ ಹಾಗೆ ಕರಗಿ ಹೋಗಿ ಬಿಡುವರಲ್ಲ ಅವರೊಡನೆ, ದೇವರನ್ನು ತಾನು ಕಂಡಿದ್ದೇನೆ ಎಂದು ಬಡಾಯಿ ಕೊಚ್ಚಿಕೊಳ್ಳುವ, ತಾವೇ ದೇವರ ಅವತಾರ ಎಂದು ಹೇಳಿಕೊಳ್ಳುವ, ಇತರರಿಗೆ ದೇವರನ್ನು ಕಾಣುವ ತರಬೇತಿ ನೀಡುತ್ತೇವೆ ಎನ್ನುವವರನ್ನು ಹೋಲಿಸಿದಾಗ ಮೂಡುವ ಭಾವನೆಯ ರೀತಿಯೂ ಇಂಥದೇ. 'ಬೊಮ್ಮವನು ಕಂಡಿಹರೆ ಸುಮ್ಮ ನಿದ್ದಿರಬೇಕು' ಎಂದು ಸರ್ವಜ್ಞ ಹೇಳುವುದಿಲ್ಲವೇ? ಹಾಗೆಯೇ ಸೇವೆ, ತ್ಯಾಗಗಳ ಬಗೆಯೂ. ಅವುಗಳನ್ನು ಸಲ್ಲಿಸುವ ಕ್ಷಣದಲ್ಲಿಯೇ ಅದಕ್ಕೆ ಸಾರ್ಥಕ್ಯ ದೊರಕಿರುತ್ತದೆ. ತನ್ನದನ್ನು ಬಿಟ್ಟುಕೊಡುವುದರಲ್ಲಿಯೂ ಏನೋ ಹಗುರ ಭಾವನೆ ಸಿಕ್ಕಿರುತ್ತದೆ. ಅದಾದ ಮೇಲೆಯೂ ಮಾಡಿದ್ದಕ್ಕೆ ಏನಾದರೂ ಸಿಕ್ಕಬೇಕೆಂದು ಬಯಸುವುದು ಅರಸನಿಗೆ ತಿಳಿಯುವಂತೆ ಉದ್ದೇಶಪೂರ್ವಕವಾಗಿ ಮಾಡುವ ಬಿಟ್ಟಿಗೆ ಸಮಾನ!

☆ – ☆ – ☆

# ಸುವರ್ಣ (ಸಂ)ಭ್ರಮ

ಈಗ ನಾಡಿನೆಲ್ಲಡೆ ಸುವರ್ಣ ಕರ್ನಾಟಕಾಚರಣೆಯ ಹಬ್ಬ ನಡೆಯುತ್ತಿದೆ. ಕನ್ನಡ ನಾಡು ಭೂಪಟದಲ್ಲಿ ದೊಡ್ಡದಾಗಿ ಐವತ್ತು ವರ್ಷಗಳಾಗಿರುವುದೇ ಬಹಳ ದೊಡ್ಡ ಸಾಧನೆಯೆಂಬಂತೆ ಎಲ್ಲರೂ ಸಡಗರದಲ್ಲಿದ್ದಾರೆ. ವರ್ಷಗಳು ಮುಂದೆ ಸಾಗಿರುವುದೊಂದೇ ನಮ್ಮ ಹಬ್ಬದಾಚರಣೆಗೆ ಕಾರಣವಾಗಬಹುದೇ ಎಂಬ ಪ್ರಶ್ನೆ ನನ್ನನ್ನು ಕಾಡುತ್ತಿದೆ. ಕಾಲ ಯಾರಿಗೂ ಕಾಯುವುದಿಲ್ಲ; ಮುಂದೆ ಸರಿಯುವುದೇ ಅದರ ಸ್ವರೂಪ. ರಿಪ್ ವ್ಯಾನ್ ವಿಂಕಲ್ ಎಂಬುವವನ ಕತೆ ಕೇಳಿದ್ದೀರಲ್ಲ: ಅವನು ಇಪ್ಪತ್ತು ವರ್ಷ ನಿದ್ದೆ ಮಾಡಿದನಂತೆ; ಕಣ್ಣು ಬಿಟ್ಟಾಗ ತಾನು ಮಲಗುವುದಕ್ಕಿಂತ ಮುಂಚೆ ಇದ್ದುದಕ್ಕಿಂತ ಜಗತ್ತು ಬಹಳ ಬದಲಾಯಿಸಿಬಿಟ್ಟಿತ್ತಂತೆ. ಇದರಲ್ಲಿ ಗಮನಿಸಬೇಕಾದ ಎರಡು ಅಂಶಗಳಿವೆ: ಒಂದು, ನಾವು ಏನೂ ಮಾಡದಿದ್ದರೂ ಕಾಲ ಮುಂದೆ ಹೋಗಿರುತ್ತದೆ; ಮತ್ತು ಎರಡು, ನಾವು ಹಾಗಿಯೇ ಇದ್ದರೂ ಸುತ್ತಮುತ್ತಣ ಪರಿಸರ ಬದಲಾಗಿರುತ್ತದೆ. ಹೀಗೆ ಸಹಜವಾಗಿಯೇ ಒಂದಷ್ಟು ಬದಲಾವಣೆಗಳು ಕನ್ನಡ ನಾಡಿನಲ್ಲಿಯೂ ಕಳೆದ ಐವತ್ತು ವರ್ಷಗಳಲ್ಲಿ ಆಗಿರಬಹುದು. ಆದರೆ ನಮಗೆ ಬೇಕಾದುದೆಂದರೆ ನಾವು ಬಯಸಿದ ದಿಕ್ಕಿನಲ್ಲಿ ಬದಲಾವಣೆ ಆಗುವಂತೆ ಮಾಡುವುದು. ಹಾಗೆ ಮಾಡಿದರೆ ಅದು ಸಾಧನೆ ಎನ್ನಿಸಿಕೊಳ್ಳುತ್ತದೆ. ಅಂಥ ಸಾಧನೆ ಮಾಡಿದ ಕೃತಕೃತ್ಯತೆ ನಮ್ಮಲ್ಲಿದೆಯೇ?

ಈಗ ನನ್ನ ಅನುಮಾನ: ನಮ್ಮ ಹಿರಿಯರು ಕನ್ನಡ ನಾಡು ಒಂದಾಗಬೇಕೆಂದು ಯಾವ ಉದ್ದೇಶದಿಂದ ಕನಸನ್ನು ಕಂಡರೋ, ಐವತ್ತು ವರ್ಷಗಳ ಹಿಂದೆ ನಾಡು ಒಂದಾದಾಗ ಯಾವುದನ್ನು ಸಾಧಿಸಬೇಕೆಂಬುದು ಅವರೆಲ್ಲರ ಸಂಕಲ್ಪವಾಗಿತ್ತೋ, ಅದನ್ನು ನಾವು ಸಾಕಾರಗೊಳಿಸಿಕೊಂಡಿದ್ದೇವೆಯೇ? ಅವರು ಕಂಡ ಕನಸು ಎಂದರೆ ನಮ್ಮ ನಾಡು ಕನ್ನಡವಾಗಬೇಕೆಂಬುದು; ಕನ್ನಡ ಬರೀ ಭಾಷೆಯಲ್ಲ, ನಮ್ಮ ಬದುಕು. ಹಿಂದೆ ಕನ್ನಡ ಎಂಬುದು ನಾಡು–ನುಡಿ ಜನಪದ ಮೂರನ್ನೂ ಸೂಚಿಸುತ್ತಿದ್ದ ಶಬ್ದ. ಅಂದರೆ ವಾತಾವರಣದಲ್ಲೇ ಕನ್ನಡ ಇದ್ದಾಗ ಈ ಪದಕ್ಕೆ ಸಾರ್ಥಕ್ಯ. ಆದರೆ ಈಗಿನ ಕನ್ನಡ ನಾಡವರ ಬದುಕು ಹಾಗಿದೆಯೇ? ಇಂಗ್ಲಿಷ್ ಮಾತನಾಡುವವರನ್ನು ಕಂಡು ಕೀಳರಿಮೆ ಅನುಭವಿಸುವ ಜನರು, ತನಗೆ ಇಂಗ್ಲಿಷ್ ಬಾರದೇ ಕಸಿವಿಸಿಯಾಗುವುದೆಂದು ತಲೆತಗ್ಗಿಸಿ ಹೇಳಿಕೊಳ್ಳುವ ನಮ್ಮ

ಮುಖ್ಯಮಂತ್ರಿ ಇರುವಾಗ ಕನ್ನಡ ನಮ್ಮ ಮನಸ್ಸಿನಲ್ಲಿ, ವಾತಾವರಣದಲ್ಲಿ ಇದೆ ಎನ್ನಲಾದೀತೇ? ಕನ್ನಡ ನಮ್ಮ ಬದುಕಿನ ಜೀವದ್ರವ್ಯವಾಗಿದೆ ಎನ್ನಲಾದೀತೇ?

ನಾವು ಇನ್ನಾರೋ ಇರುವಷ್ಟು ಎತ್ತರವಿಲ್ಲವಲ್ಲ, ಅವರಂತೆ ಬೆಳ್ಳಗಿಲ್ಲವಲ್ಲ, ಅವರ ನುಡಿಯನ್ನು ಆಡಲಾರೆವಲ್ಲ ಎಂಬುದು ಆತ್ಮವಿಶ್ವಾಸದ ಕುರುಹೇ? ನಮಗೆ ನಮ್ಮದೇ ಆದ ಆಕಾರ, ಬಣ್ಣ, ನುಡಿಗಳಿವೆ, ಅವು ನಮ್ಮವು, ಆ ಕಾರಣದಿಂದಲೇ ಅವು ನಮಗೆ ಪ್ರಿಯ, ಅವುಗಳ ಮೂಲಕವೇ ನಮ್ಮ ಬದುಕನ್ನು ಹಸನುಗೊಳಿಸಿ ಕೊಳ್ಳುತ್ತೇವೆ ಎಂಬ ಭಾವನೆಯೇ ಆತ್ಮವಿಶ್ವಾಸ ತಾನೇ? ಇದು ನಮಗಿದೆಯೇ? ಯಾರು ಆತ್ಮವಿಶ್ವಾಸಿಯೋ ಅವನು ಸುತ್ತಲಿರುವುದನ್ನು ತನ್ನ ವ್ಯಕ್ತಿತ್ವದಲ್ಲಿ ಅರಗಿಸಿ ಕೊಳ್ಳುತ್ತಾನೆ, ಅವುಗಳಿಗೆ ಬಲಿಯಾಗುವುದಿಲ್ಲ. ನಾವಾದರೋ ಗುಂಪಿನಲ್ಲಿ ಗೋವಿಂದ ವಾಗಿ ನಮ್ಮತನವನ್ನು ಕರಗಿಸಿಕೊಂಡುಬಿಡಲು ಕಾತರರಾಗಿರುವಂತೆ ತೋರುತ್ತದೆ. ಯಾವುದೇ ನಾಡಿನ ಗಡಿಪ್ರದೇಶಗಳು ದ್ವಿಭಾಷಿಕವಾಗಿರುತ್ತವೆ. ಕನ್ನಡ ನಾಡು ಅನೇಕ ಭಾಷೆಗಳನ್ನಾಡುವ ನೆರೆ ನಾಡುಗಳೊಂದಿಗೆ ಗಡಿಯನ್ನು ಹಂಚಿಕೊಂಡಿದೆ. ಅಲ್ಲೆಲ್ಲ ಆಯಾ ನೆರೆರಾಜ್ಯದ ಸಂಸ್ಕೃತಿ ಮೆರೆಯುವಷ್ಟು, ಗಡಿಯಾಚೆ ಕನ್ನಡ ಸಂಸ್ಕೃತಿ ಮೆರೆಯುತ್ತಿದೆಯೇ? ನಿದರ್ಶನಕ್ಕೆ, ಆಂಧ್ರದ ಗಡಿಗೆ ಹೊಂದಿಕೊಂಡಿರುವ ಕರ್ನಾಟಕದ ಗಡಿಪ್ರದೇಶಲ್ಲಿ ತೆಲುಗು ಭಾಷೆ, ಆ ಸಂಸ್ಕೃತಿ ಢಾಳಾಗಿ ಕಾಣುವಂತೆ, ಆಚೆ ಕನ್ನಡ ಸಂಸ್ಕೃತಿ ಯಾಕೆ ಢಾಳಾಗಿ ಕಾಣಿಸದು? ಅದೂ ಗಡಿನಾಡು ತಾನೇ; ದ್ವಿಭಾಷಿಕತೆ ಅಲ್ಲಿಯೂ ಇರಬೇಕಲ್ಲ? ಬೆಂಗಳೂರಿನಲ್ಲಂತೂ ಹೇಳುವ ಹಾಗೆಯೇ ಇಲ್ಲ; ಕನ್ನಡ ಬರುವವರೂ ಅದನ್ನು ಬಚ್ಚಿಟ್ಟುಕೊಳ್ಳುತ್ತಾರೆ; ತಾನು ಹಾಕಿಕೊಂಡ ಹರುಕಲು ಅಂಗಿಯನ್ನು ಎರವಲು ಕೋಟು ಧರಿಸಿ ಮರೆಸಿಕೊಳ್ಳವ ರೀತಿ.

ಅಂದರೆ ನಮಗೆ ನಮ್ಮದನ್ನು ಹೆಮ್ಮೆಯಿಂದ ತೋರಿಸಿಕೊಳ್ಳುವ ಛಲವಿಲ್ಲ, ಜಿಗುಟುತನವಿಲ್ಲ; ನಮ್ಮದೆಂಬುದನ್ನು ಒಂದೊಂದಾಗಿ ಬಿಡುತ್ತ ಬರುತ್ತಿದ್ದೇವೆ; ಎದುರು ಬಂದವರದನ್ನು ಹೊದ್ದುಕೊಳ್ಳುತ್ತಿದ್ದೇವೆ. ಕನ್ನಡಿಗರ ಮೈಮೇಲೆ ಅನ್ಯತನದ ನಾನಾ ಪದರುಗಳು. ಅವುಗಳ ನಡುವೆಯೇ ಬೆಚ್ಚಗಿನ ಅನುಭವವನ್ನು ಪಡೆಯುವ ಭ್ರಮೆ ಬೆಳೆದಿರುವುದರಿಂದಾಗಿ ಏಕೀಕರಣದ ಈ ಐವತ್ತು ವರ್ಷಗಳ ಕನಸು ಭಗ್ನ ಗೊಂಡಿದೆಯೇ ವಿನಾ ಸಾಕಾರಗೊಂಡಿದೆ ಎನ್ನಬರುವುದಿಲ್ಲ. ಇಂಥ ಸನ್ನಿವೇಶದಲ್ಲಿ ಈ ಹಬ್ಬ ನನಗೆ ಒಂದು ವಾರ್ಷಿಕ ವಿಧಿಯಂತೆ ಕಾಣುತ್ತಿದೆ. ಯುಗಾದಿಯೋ ದೀಪಾವಳಿಯೋ ಬಂದರೆ "ಜನರು ಸಾಂಪ್ರದಾಯಿಕ ಭಯಭಕ್ತಿಯಿಂದ, ಸಂಭ್ರಮ ದಿಂದ ಹಬ್ಬವನ್ನು ಆಚರಿಸಿದರು" ಎಂದು ಹೇಳಿ ಟೆಲಿವಿಷನ್ನಿನನಲ್ಲಿ ಮಾವಿನ ಸೊಪ್ಪು ಹಣ್ಣುಹಂಪಲನ್ನು ಜನ ಕೊಂಡುಕೊಳ್ಳುವ ದೃಶ್ಯಗಳನ್ನು ತೋರಿಸುತ್ತಾರೆ. ಸಾಂಪ್ರದಾಯಿಕ ಭಕ್ತಿ ಎಂದರೆ ವರ್ಷಕ್ಕೊಂದು ಬಾರಿ ಯಾವುದೋ ಹಬ್ಬದಂದು ಬರಲೇಬೇಕಾದುದು ಎಂಬಂತೆ. ಹೀಗೆ ಭಕ್ತಿ ಬರಲು ಸಾಧ್ಯವೇ? ಅದು ಸಹಜವಾಗಿ ಉಕ್ಕಬೇಕಾದ ಭಾವವಲ್ಲವೇ? ಹಾಗೆಯೇ ಕನ್ನಡ ರಾಜ್ಯೋತ್ಸವ ದಿನದ ಮಟ್ಟಿಗೆ

ತೋರುವ ಕನ್ನಡ ಪ್ರೀತಿಯೂ. ನುಡಿಪ್ರೀತಿ ಉಸಿರಿನಂತೆ ಸಹಜವಾಗಿರಬೇಕಾದುದು. ಕನ್ನಡ ಪ್ರೀತಿಯೆಂದರೆ ಕನ್ನಡವನ್ನು ಬದುಕುವುದು. ಹೀಗಾಗಿ ರಾಜ್ಯೋತ್ಸವ ಆಚರಣೆಯೇ ನನಗೆ ಅರ್ಥಪೂರ್ಣವಾಗಿ ಕಾಣಿಸುಸುವುದಿಲ್ಲ. ಅದೊಂದು ವಾರ್ಷಿಕ ಆಚರಣೆ, ಅಷ್ಟೆ. ಸುವರ್ಣ ಸಂಭ್ರಮ ಮತ್ತಷ್ಟು ಅದ್ದೂರಿಯಿಂದ ಮಾಡುತ್ತಿರುವ ಆಚರಣೆ. ಅಂದರೆ ಹೆಚ್ಚು ಖರ್ಚು, ಹೆಚ್ಚು ಬಣ್ಣ, ಹೆಚ್ಚು ಗದ್ದಲ!

ಕನ್ನಡ ರಾಜ್ಯೋತ್ಸವದಂದು ನಾಡಿನ ವಿವಿಧೆಡೆ ಹಲವಾರು ಕಾರಣಗಳಿಂದ ಪ್ರತಿಭಟನೆಗಳೂ ನಡೆಯುತ್ತಿವೆ, ಉತ್ಸವವನ್ನು ಕರಾಳ ದಿನಾಚರಣೆಯಾಗಿಯೂ ಆಚರಿಸಲಾಗುತ್ತಿದೆ. ಅಂದರೆ ಈ ಹಬ್ಬ ಸಾರ್ವತ್ರಿಕ ಸಂಭ್ರಮವಲ್ಲ; ನಾನಾ ಬಗೆಯ ಕೊರತೆಗಳು ಉಳಿದಿವೆ ಎಂದು ತಾನೇ ಅರ್ಥ? ಜನರ ಕನಸುಗಳು ನನಸಾಗದೆ ಬರಿ ಆಚರಣೆ ನಡೆಯುತ್ತಿದೆ ಎಂದು ತಾನೇ? ನಮಗೆ ಬೇರೆ ರಾಜ್ಯವೇ ಬೇಕು ಎಂಬ ಬೇಡಿಕೆಯೂ ಒಂದೆರಡು ಕಡೆ ಇದೆ; ಅಸಮಾನತೆಯ ಕೂಗಿದೆ. ಅಸಮಾನತೆ ಇದ್ದಾಗ – ಅದು ಬಾಹ್ಯ ಅಭಿವೃದ್ಧಿಯಲ್ಲಿರಬಹುದು, ಶಿಕ್ಷಣ ಪದ್ಧತಿಯಲ್ಲಿರಬಹುದು, ಭಾಷೆಯ ಕಲಿಕೆಯಲ್ಲಿರಬಹುದು – ಸಂಭ್ರಮ ಎಂಬುದು ಕೇವಲ ಭಾಗಶಃವಾಗುತ್ತದೆ. ಅಸಮಾನತೆ ಹೋಗಿ, ನಮ್ಮ ಬದುಕಿನಲ್ಲಿ ಆತ್ಮವಿಶ್ವಾಸ ಮೂಡಿದಾಗ ಮಾತ್ರ, ಹೊರ ಆಚರಣೆಯಿಲ್ಲದಿದ್ದರೂ, ಮನಸಿನಲ್ಲಿ ಸಂಭ್ರಮ ತುಂಬಿಕೊಳ್ಳುತ್ತದೆ. ಈಗ ಅಂಥ ವಾತಾವರಣ ಇದೆ ಎಂದು ನನಗನ್ನಿಸುವುದಿಲ್ಲ.

ಕನ್ನಡ ಬದುಕಬೇಕಾದರೆ ಕನ್ನಡಿಗ ಬದುಕಬೇಕು; ಕನ್ನಡ ಭಾಷೆಗೆ ಶಕ್ತಿ ಬರಬೇಕಾದರೆ ಕನ್ನಡಿಗನಲ್ಲಿ ಶಕ್ತಿ ತುಂಬಿರಬೇಕು. ಕನ್ನಡ ಬದುಕಿನ ಅವಿಭಾಜ್ಯ ಅಂಗವಾಗಬೇಕು; ಅಂದರೆ ಕನ್ನಡವು ಬದುಕನ್ನು ನೀಡುವ ಶಕ್ತಿಯಾಗಬೇಕು. ಕನ್ನಡವಿಲ್ಲದಿದ್ದರೆ ಬದುಕು ಸಾಧ್ಯವಿಲ್ಲ ಎಂಬ ವಾತಾವರಣವಿರಬೇಕು. ಆದರೆ ಇದು ಸದ್ಯಕ್ಕಂತೂ ಇಲ್ಲ. ಹೀಗಾಗಿ ನನಗಂತೂ ಸುವರ್ಣ ಸಂಭ್ರಮಕ್ಕೆ ಕಾರಣ ಕಾಣುತ್ತಿಲ್ಲ. ನಾನು, ನನ್ನಂತೆ ಆಲೋಚಿಸುವ ಸಾವಿರಾರು ಜನರೂ, ಹೊರಗಿನ ಗದ್ದಲಕ್ಕೆ ಕಿವುಡಾಗಿ ಒಳಗೆ ತಳಮಳದಿಂದ ಕುದಿಯುತಿದ್ದೇವೆ; ನಿಜವಾಗಿ ಸಂಭ್ರಮ ಪಡುವ ಕಾಲ ಬಂದೀತೇ ಎಂದು ಹಂಬಲಿಸುತ್ತ ಅಂತರ್ಮುಖಿಗಳಾಗಿ ಕೂರುತ್ತೇವೆ.

★ – ★ – ★

# ದೇಹವನ್ನು ಅಲ್ಲಾಡಿಸುವ ಬಾಲಗಳು

ದೇಹದ ಒಂದು ಭಾಗವಾಗಿದ್ದರೂ ಬಾಲವು ತಾನು ಮಾತ್ರ ಅಲ್ಲಾಡುವುದು ಒಂದು ರೀತಿ, ಆದರೆ ದೇಹವೇ ಬಾಲವನ್ನು ತನಗೆ ಬೇಕೆಂದಂತೆ ಅಲ್ಲಾಡಿಸಲು ಪ್ರಯತ್ನಿಸುವುದು ಇನ್ನೊಂದು ರೀತಿ, ವಿಚಿತ್ರವಾದ ರೀತಿ. ಈಗ ಅನೇಕ ಸಂದರ್ಭಗಳಲ್ಲಿ ಆಗುತ್ತಿರುವುದು ಇದೇ. ಸರ್ಕಾರ ದೇಶದ ಮೇಲೆ ಹಿಡಿತವಿರಿಸಿಕೊಂಡು ಕಾನೂನುಗಳನ್ನು ಜಾರಿಗೆ ತರಬೇಕಾದುದದ್ದು ನಿರೀಕ್ಷಿತ ರೀತಿ. ಶಾಸನಗಳನ್ನು ಮಾಡಲು ಶಾಸನಸಭೆಗಳಿರುತ್ತವೆ. ಆದರೆ ಎಷ್ಟೋ ಸಂದರ್ಭಗಳಲ್ಲಿ ಕೆಲವು ಪಟ್ಟಭದ್ರರು ಹಾಗೂ ಬಲಿಷ್ಠರು ಸಾಮೂಹಿಕತೆಯ ಸಂಕೇತವಾದ ಸರ್ಕಾರದ ಮೇಲೆಯೇ ನಿಯಂತ್ರಣ ಸಾಧಿಸುವುದನ್ನು ನಾವು ಕಾಣುತ್ತೇವೆ. ಅಂಥವುಗಳನ್ನೇ ನಾನಿಲ್ಲಿ ಬಾಲ ಎನ್ನುತ್ತಿರುವುದು, ಇದೇ ಇಂಗ್ಲಿಷ್‌ನ ಲಾಬಿ.

ಈಗ ಬೆಂಗಳೂರಿನ ರಸ್ತೆಗಳಿಗೆ ಒಂದು ಗತಿ ಕಾಣಿಸುತ್ತಿರುವುದು ಜನಸಾಮಾನ್ಯರಿಗೆ ಉಪಯೋಗವಾಗಲಿ ಎಂಬ ಉದ್ದೇಶದಿಂದಲ್ಲ, ಕೆಲವು ಉದ್ಯಮಿಗಳ, ವಿಶೇಷವಾಗಿ ಐಟಿಬಿಟಿ ಉದ್ಯಮಿಗಳ ಕಾರುಗಳು ಓಡಾಡಲು ಮತ್ತು ಅವರನ್ನು ಭೇಟಿಮಾಡಲು ಬರುವ ವಿದೇಶೀಯರನ್ನು ಬರಮಾಡಿಕೊಳ್ಳಲು. ಹೊಸೂರು ರಸ್ತೆಯಲ್ಲಿ ಈಗಾಗಲೇ ಕೆಲವೆಡೆ ಮೇಲುಸೇತುವೆಗಳಿವೆ; ಆದರೆ ಅದರಿಂದಲೂ ವಾಹನದಟ್ಟಣೆಗೆ ಪರಿಹಾರ ಸಿಕ್ಕದ್ದರಿಂದ ಮಡಿವಾಳದಿಂದ ಎಲೆಕ್ಟ್ರಾನಿಕ್ ಸಿಟಿಯವರೆಗಿನ ಹನ್ನೊಂದು ಕಿಲೋಮೀಟರ್‌ಗಳ ಮೇಲೆ ಮತ್ತೊಂದು ಮೇಲುಸೇತುವೆ ನಿರ್ಮಾಣದ ಕಾರ್ಯ ಭರದಿಂದ ಸಾಗುತ್ತಿದೆ. ಅದಕ್ಕೆ ತಗುಲುವ ವೆಚ್ಚ ಸುಮಾರು ಐನೂರು ಕೋಟಿ ರೂಪಾಯಿಗಳು. ಅಷ್ಟು ಹಣದಿಂದ ಪ್ರಾಯಶಃ ಎರಡು ಮುಖ್ಯ ಊರುಗಳ ನಡುವಣ ರಸ್ತೆಯನ್ನೇ ನಾಲ್ಕು ಪಥಗಳ ದಾರಿಯನ್ನಾಗಿ ಮಾಡಬಹುದಿತ್ತು. ಹಾಗೆಯೇ ಯಾವುದೋ ಒಂದು ಸನ್ನಿವೇಶದಲ್ಲಿ ಸರ್ಕಾರ ಮೈಸೂರು-ಬೆಂಗಳೂರು ನಡುವೆ ನೇರ ಸಂಪರ್ಕ ಕಲ್ಪಿಸಲು ಕಾರಿಡಾರ್ ಯೋಜನೆಗೆ ಅನುಮತಿ ನೀಡಿತು. ಅದು ಘೋರ ಕರ್ಮಕಾಂಡವಾಗಿದೆ. ಆ ಪ್ರಕ್ರಿಯೆ ಆರಂಭವಾದ ಎಷ್ಟೋ ವರ್ಷಗಳನಂತರ ಆರಂಭಗೊಂಡ ಈ ಎರಡು ನಗರಗಳ ನಡುವಣ ಸರ್ಕಾರಿ ರಸ್ತೆಯ ಅಗಲೀಕರಣ ಈಗ ಮುಗಿದು ಅದು ನಾಲ್ಕು ಪಥಗಳಾಗಿ ಪರಿವರ್ತಿತಗೊಂಡು ಜನಬಳಕೆಗೆ ಬಂದಿದೆ. ಇದನ್ನೇ ಮತ್ತಷ್ಟು

ಅಗಲಗೊಳಿಸುವ ಯೋಜನೆ ಹಾಕಿಕೊಂಡಿದ್ದರೆ ಕಾರಿಡಾರ್‌ನ ಅನಾಹುತ ತಪ್ಪುತ್ತಿತ್ತು. ಆದರೆ ಈ ಯೋಜನೆ ಬರಬೇಕಾಗಿದ್ದುದು ಬೆಂಗಳೂರು ಮೈಸೂರು ನಡುವೆ ಓಡಾಡುವಾಗ ಮಧ್ಯೆ ಬೇರಾವುದೇ ವಾಹನ ಬರಬಾರದು, ತಮ್ಮ ಕಣ್ಣುಗಳಿಗೆ ಜನಸಾಮಾನ್ಯ ಕನ್ನಡಿಗರು ಬೀಳಬಾರದು, ಆದ್ದರಿಂದ ರಸ್ತೆಯ ಇಕ್ಕೆಲದಲ್ಲಿ ಗೋಡೆಗಳನ್ನು ನಿರ್ಮಿಸಿ ಜನಸಂಪರ್ಕದಿಂದ ರಸ್ತೆಯನ್ನು ದೂರವಿರಿಸಬೇಕೆಂಬ ಕೆಲವೇ ಉದ್ಯಮಿಗಳ ಪೇರಾಸೆಯ ಕಾರಣದಿಂದ.

ಹನ್ನೆರಡು ವರ್ಷಗಳಷ್ಟು ಹಿಂದೆಯೇ ಕರ್ನಾಟಕ ಸರ್ಕಾರ ಹೊರಡಿಸಿದ್ದ ಇಂಗ್ಲಿಷ್ ಮಾಧ್ಯಮ ವಿರೋಧಿ ಆಜ್ಞೆಯನ್ನು ಸುಪ್ರೀಂ ಕೋರ್ಟ್ ಪುರಸ್ಕರಿಸಿತ್ತು; ಅದರ ಮೇಲೆ ಯಾವುದೋ ಕುಂಟು ನೆಪದಿಂದ ಕೆಲವರು ಮತ್ತೆ ಹೈಕೋರ್ಟಿಗೆ ಮೊರೆಹೋದರು. ಅದರ ವಿಚಾರಣೆ ಈ ಹನ್ನೆರಡು ವರ್ಷಗಳಿಂದಲೂ ನಡೆಯು ತ್ತಲೇ ಇದೆ. ಅದನ್ನು ಇತ್ಯರ್ಥಮಾಡುವ ಬಯಕೆ ಸರ್ಕಾರಕ್ಕೂ ಇಲ್ಲ, ಕೋರ್ಟಿಗೂ ಇದ್ದಂತಿಲ್ಲ. ಅದಕ್ಕೆ ಕಾರಣ ಬಾಲ ದೇಹವನ್ನು ಅಲ್ಲಾಡಿಸುತ್ತಿರುವುದು. ಸರ್ಕಾರದ ಅನುಮತಿಗೆ ವಿರುದ್ಧವಾಗಿ ಕನ್ನಡದ ಬದಲು ಇಂಗ್ಲಿಷ್ ಮಾಧ್ಯಮದಲ್ಲಿ ತರಗತಿ ಗಳನ್ನು ನಡೆಸುತ್ತಿದ್ದ ಶಾಲೆಗಳ ಪರವಾನಗಿ ರದ್ದುಮಾಡುವೆವೆಂದು ಗುಡುಗಾಡಿದ್ದ ಹೊರಟ್ಟಿ ಈಗ ಅದನ್ನು ಮುಂದೂಡಲು ಕಾರಣವೂ ಈ ಬಾಲವೇ; ಅದೇ ಬಾಲವೇ ಈಗ ಮುಖ್ಯಮಂತ್ರಿಗಳು ಒಂದನೇ ತರಗತಿಯಿಂದಲೇ ಇಂಗ್ಲಿಷನ್ನು ಕನ್ನಡ ಶಾಲೆಯಲ್ಲಿ ಕಲಿಸುವ ಆದೇಶ ಹೊರಡಿಸುವಂತೆ ಅಲ್ಲಾಡಿಸಿದೆ. ನಾಲ್ಕಾರು ಬಗೆಯ ಶಾಲೆಗಳು; ಇದ್ದವರಿಗೊಂದು ಬಗೆ ಇಲ್ಲದಿರುವವರಿಗೆ ಇನ್ನೊಂದು, ಮೇಲುವರ್ಗ ದವರಿಗೆ ಒಂದು ರೀತಿ, ಕೆಳವರ್ಗದವರಿಗೆ ಮತ್ತೊಂದು – ಈ ಬಗೆಯಲ್ಲಿ ವರ್ಣ ತಾರತಮ್ಯವಿರುವ ಶಿಕ್ಷಣ ಪದ್ಧತಿಯನ್ನು ಹೋಗಲಾಡಿಸಿ, ಕನಿಷ್ಠ ಪಕ್ಷ, ಪ್ರಾಥಮಿಕ ಹಂತದಲ್ಲಾದರೂ ಏಕರೂಪ ವ್ಯವಸ್ಥೆಯನ್ನು ಜಾರಿಗೊಳಿಸಿದರೆ ನಮ್ಮ ಈಕ್ವಾಲಿಟಿಯ ಆದರ್ಶ ತುಸುವಾದರೂ ಜಾರಿಗೆ ಬಂದೀತು ಎಂದು ತಿಳಿದವರು ಹೇಳುತ್ತಿದ್ದರೂ ಅದನ್ನು ಕೇಳದೆ, ಈಗ ಇಂಗ್ಲಿಷ್ ಜಾರಿಗೆ ಆದೇಶ ನೀಡಿರುವುದರ ಹಿಂದೆಯೂ ಇರವುದು ಬಾಲವೇ. ಆದರೆ ಸರ್ಕಾರವೆಂಬ ದೇಹಕ್ಕೆ ಇರುವುದು ಒಂದೇ ಬಾಲವಲ್ಲ, ಅನೇಕ ಬಾಲಗಳು. ಮತ್ತೊಂದು ವಿಚಿತ್ರವೆಂದರೆ, ಈ ಬಾಲಗಳಲ್ಲಿ ಒಂದು ಬಗೆಯ ಅಲಿಖಿತ ಒಪ್ಪಂದವಿದ್ದಂತೆಯೂ ಇದೆ. ಜನಸಂದಣಿಯಲ್ಲಿ ತಲೆಗಳಿರುತ್ತವೆ, ಆದರೆ ಯಾವುದರಲ್ಲಿಯೂ ಮೆದುಳಿರುವುದಿಲ್ಲ ಎಂದೋ ಏನೋ ಷೇಕ್ಸ್‌ಪಿಯರ್ ಹೇಳುತ್ತಾನೆ, ಸರ್ಕಾರ ಜನಸಮೂಹದಿಂದ ತಾನೇ ಚುನಾಯಿತ ವಾಗಿರುವುದು; ಅದಕ್ಕೇ ಅದರೊಳಗೆ ಮೆದುಳಿಲ್ಲವೇನೋ. ಇಲ್ಲದಿದ್ದರೆ, ಒಬ್ಬೊಬ್ಬರು ಒಂದೊಂದು ರೀತಿ ಕಲಿತರೆ – ಕೆಲವರು ಹುಟ್ಟಿನಿಂದಲೇ ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುತ್ತಾರೆ – ಅವರೊಡನೆ ಮೊದಲ ತರಗತಿಯಲ್ಲಿ ಒಂದಷ್ಟು ಇಂಗ್ಲಿಷನ್ನು ಭಾಷೆಯಾಗಿ ಕಲಿತವನು ಸಮನಾಗಿ ಇಂಗ್ಲಿಷ್ ಪ್ರಭುತ್ವ ಸಾಧಿಸಲಾದೀತೇ ಎಂದೂ

ಅದು ಯೋಚಿಸಲಾರದೇ ಹೋಗುತ್ತಿತ್ತೇ? ಹಾಗಾಗಿ ಅದು ನಡೆದುಕೊಳ್ಳುವುದು ತನ್ನ ಯೋಚನೆಗನುಗುಣವಾಗಿ ಅಲ್ಲ. ಅದಕ್ಕೆ ಆಲೋಚನಾಶಕ್ತಿಯೇ ಇಲ್ಲ. ಅದು ನಡೆದುಕೊಳ್ಳುವುದು ಬಾಲದ ಅಲ್ಲಾಡುವಿಕೆಗೆ ಅನುಗುಣವಾಗಿ. ಇದು, ಮತ್ತೊಂದು ಮಹಾಬಾಲದ ಆಲೋಚನೆಯಾದ ಪ್ರಾಥಮಿಕ ಶಾಲೆಗಳಲ್ಲಿ ಕಡ್ಡಾಯ ಇಂಗ್ಲಿಷ್ ಮಾಧ್ಯಮದ ಜಾರಿಯ ಆಜ್ಞೆಗೆ ಪೂರ್ವಭಾವಿ ಸಿದ್ಧತೆಯೇನೋ.

ಇನ್ನೂ ಕೆಲವು ಬಾಲಗಳು ಬೆಂಗಳೂರಿನ ಸಂಸ್ಕೃತಿಯ ಬಗೆಗೆ ತಲೆ ಕೆಡಿಸಿ ಕೊಳ್ಳುವಂಥವು. ಬೆಂಗಳೂರು ಹಬ್ಬದಂತಹ ಉತ್ಸವಕ್ಕೆ ಕಾರಣವಾದವು; ಸರ್ಕಾರ ದಿಂದ ಕೋಟ್ಯಂತರ ಹಣ ಪಡೆದು, ಪಬ್ ಸಂಸ್ಕೃತಿಯನ್ನು ಪ್ರಚಾರಗೊಳಿಸುವ ಹುನ್ನಾರ ಇವುಗಳದು, ಕೆಲವು ಪತ್ರಿಕೆಗಳಿವೆ, ಇಂಗ್ಲಿಷ್‌ನವು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ, ಬೆಂಗಳೂರು ಎಂಬ ಹೆಸರಿನ ಮೂಲರೂಪವನ್ನು ಹಾಗೆಯೇ ಉಳಿಸಿಕೊಂಡು, ಇಂಗ್ಲಿಷಿನಲ್ಲಿ ಬ್ಯಾಂಗಲೋರ್ ಎಂದು ಕರೆಯದೆ ಬರೆಯದೆ ಹೆಸರಿಗನುಗುಣವಾದ ಸ್ಪೆಲ್ಲಿಂಗ್ ಹೊಂದಿರಬೇಕು ಎಂಬ ಯೋಜನೆಯ ಬಗ್ಗೆ ತಮ್ಮ ಓದುಗರಲ್ಲಿ ಸಮೀಕ್ಷೆ ನಡೆಸುತ್ತವೆ. ಇವರ ಓದುಗರು ಯಾರು? ಆಗಲೇ ಹೇಳಿದಂತೆ, ಬಹುಪಾಲು ಮಂದಿ ಪಬ್ ಸಂಸ್ಕೃತಿಯವರು, ಹೊರಗಿನಿಂದ ಬಂದವರು. ಅವರಲ್ಲಿ ಬಹುಪಾಲು ಇಂಗ್ಲಿಷ್‌ನ ಈಗಿನ ಸ್ಪೆಲ್ಲಿಂಗ್ ಉಳಿಸಿಕೊಳ್ಳಲು ಇಚ್ಛಿಸುವವರು. ಬೆಂಗಳೂರಿನ ಹೆಸರು ಮತ್ತು ಇಲ್ಲಿನ ಸೌಂದರ್ಯದ ಬಗ್ಗೆ ಇವರಿಗೆ ತುಂಬ ಕಾಳಜಿ. ಬೆಂಗಳೂರು ಹೇಗೆ ಮುನ್ನಡೆಯಬೇಕು ಎಂದು ಈ ಪತ್ರಿಕೆಗಳು ಅಭಿಪ್ರಾಯ ಸಂಗ್ರಹಿಸುತ್ತವೆ. ಅವರಿಗೆ ಬೆಂಗಳೂರು ಸಂಸ್ಕೃತಿ ಎಂದರೆ ತನ್ನ ಗಬ್ಬದಲ್ಲಿ ನೂರಾರು ಹಳ್ಳಿಗಳನ್ನು ಅಡಗಿಸಿಕೊಂಡ ಸ್ಥಳೀಯ ಸಂಸ್ಕೃತಿ ಎಂಬ ಪರಿಜ್ಞಾನವಿಲ್ಲ. ಇಂಥವರು ಹಾಕಿದ ಯೋಜನೆಗಳಿಗೆ ಸರ್ಕಾರದ ಮಾನ್ಯತೆ, ಹಣ ಸಂದಾಯ. ಯಾಕೆಂದರೆ ಅವರೇ ತಮ್ಮ ಕೀರ್ತಿಯನ್ನು ಜಗತ್ತಿಗೆ ಮೆರೆಸುವವರು ಎಂಬ ಭ್ರಮೆ. ಇಂಥ ಉದಾಹರಣೆಗಳು ಎಷ್ಟೋ ಇವೆ. ಸರ್ಕಾರ ನಡೆಯುವುದು ಬಾಲಗಳ ಪ್ರೇರಣೆ ಯಿಂದಲೇ ಹೊರತು ಆತ್ಮದ ಪ್ರೇರಣೆಯಿಂದಲ್ಲ ಎಂಬುದಕ್ಕೆ ಇದಕ್ಕಿಂತ ಹೆಚ್ಚಿನ ನಿದರ್ಶನಗಳು ಯಾಕೆ? ನಮ್ಮ ಸರ್ಕಾರವನ್ನು ನಿಯಂತ್ರಿಸುವ ಈ ಬಾಲಗಳನ್ನು ನಿಯಂತ್ರಿಸಬಲ್ಲವರು ಯಾರು? ಪ್ರಾಯಶಃ ಅವರು ಈ ದೇಶದಲ್ಲಿಯೇ ಇಲ್ಲ, ಬೇರೆಲ್ಲೋ ಇದ್ದಾರೆ.

☆ - ☆ - ☆

# ಸ್ಪರ್ಶಸುಖ

ನಾನೊಮ್ಮೆ ಬಿಎಂಟಿಸಿ ಬಸ್ಸಲ್ಲಿ ಕೂತು ಹೋಗುತ್ತಿರುವಾಗ ನೂಕುನುಗ್ಗಲಿನಲ್ಲಿ ನಿಂತು ಪ್ರಯಾಣ ಮಾಡುವ ಪರಿಸ್ಥಿತಿ ಬಂತು. ಬಸ್ಸು ಎಂದರೆ ಜನರ ನಡವಳಿಕೆಗಳನ್ನು ಗಮನಿಸಿ ನೋಡಲು ಒಂದು ಜಾಗ ಕೂಡ. ಜೊತೆಯಾಗಿ ಕೂತ ಒಂದು ಗಂಡುಹೆಣ್ಣು ಜೋಡಿ, ಯುವಕರು ಅನ್ನಿ, ಸುತ್ತಮುತ್ತ ಯಾರೂ ಇಲ್ಲವೋ ಎಂಬಂತೆ ತಮ್ಮ ಜಗತ್ತಿನಲ್ಲೇ ಮುಳುಗಿ ತಮ್ಮ ತಮ್ಮೊಳಗೆ ಪಿಸುಗುಟ್ಟಿಕೊಳ್ಳುತ್ತಿದ್ದರು. ಜೊತೆಗೆ, ಕೊನೆಯವರೆಗೂ ಒಬ್ಬರ ಕೈಯಲ್ಲಿ ಇನ್ನೊಬ್ಬರ ಕೈ ಇದ್ದೇ ಇತ್ತು. ಪರಸ್ಪರರ ಕೈ ಹಿಡಿದಿರುವುದರಲ್ಲಿಯೇ ಅವರು ಅಪಾರ ಸವಿ ಅನುಭವಿಸುತ್ತಿದ್ದುದು ಸ್ಪಷ್ಟವಾಗಿತ್ತು. ಆ ವಯಸ್ಸಿಗೆ ಇದು ಸಹಜ ಅನ್ನಿಸಿ ನನ್ನ ಮನಸ್ಸು ಇಂದ್ರಿಯಗಳ ಸಂವೇದನಾಶಕ್ತಿಯ ಕಡೆ ಹರಿಯಿತು.

ಪಂಚೇಂದ್ರಿಯಗಳು – ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮ – ನಾವು ಜಗತ್ತಿನೊಡನೆ ಸಂಪರ್ಕ ಪಡೆಯುವ ಸಾಧನಗಳು. ಒಂದೊಂದು ಇಂದ್ರಿಯದ ಅನುಭವವೂ ವಿಶಿಷ್ಟವಾದುದು; ಒಂದರ ಅನುಭವಸ್ವರೂಪ ಮತ್ತೊಂದಕ್ಕೆ ಸಾಧ್ಯವಾಗದು. ಒಂದು ಇಂದ್ರಿಯದ ಸಂವೇದನೆ ಇಲ್ಲದೇ ಹೋದರೂ ಅಷ್ಟರಮಟ್ಟಿಗೆ ಮನುಷ್ಯನ ಅನುಭವ ಕೊರೆಯೆನಿಸುತ್ತದೆ. ಒಂದೆರಡರ ಕೊರತೆಯಿದ್ದರೂ ಬದುಕು ಸಾಗಬಲ್ಲುದು, ನಿಜ; ಆದರೆ ಅಷ್ಟರಮಟ್ಟಿಗೆ ಅನುಭವಸಮಗ್ರತೆಗೆ ಊನವುಂಟಾಗುತ್ತದೆ. ಸಾಮಾನ್ಯವಾದರೂ ಇದು ಎಂತಹ ಅದ್ಭುತ ಅನ್ನಿಸುವುದಿಲ್ಲವೇ? ಇವುಗಳನ್ನು ಹಿಂದಿನವರು ಆಧ್ಯಾತ್ಮಿಕ ಸಾಧನೆಗೆ ಅಡ್ಡಿ ಎಂದು ಕರೆದರು; ಇಂದ್ರಿಯಗಳ ಸುಖದಲ್ಲಿ ಮೈಮರೆತು ದೈವವನ್ನು ಮರೆತುಬಿಡುತ್ತೇವೆ ಎಂಬುದು ಅವರ ಭಯ; "ಅತ್ತಲಿತ್ತ ನೋಡದಂತೆ ಅಂಧಕನ ಮಾಡಯ್ಯಾ ತಂದೆ" ಮುಂತಾಗಿ ಬೇಡಿಕೊಂಡರು. ಆದರೆ ಇಂದ್ರಿಯಗಳೇ ಇಲ್ಲದಿದ್ದರೆ ನಮ್ಮ ಬದುಕು ಬದುಕು ಎನ್ನಿಸಬಲ್ಲದೇ? ಉಹ್ಞೂ, ಅವುಗಳ ಮೂಲಕ ಜೀವನದ ಸುಖಗಳನ್ನು ಆರೋಗ್ಯಕರವಾಗಿ ಸವಿಯುವುದು ಬದುಕಿನ ದೊಡ್ಡ ಭಾಗ್ಯ.

ಒಂದೊಂದು ಇಂದ್ರಿಯದ ವೈಶಿಷ್ಟ್ಯ ಒಂದೊಂದು ರೀತಿಯದು. ಆದರೆ ಕಣ್ಣು ಮತ್ತು ಕಿವಿಗಳದು ಒಂದು ತೂಕ; ಇವುಗಳ ಮೂಲಕವೇ ಎಲ್ಲ ಲಲಿತಕಲೆಗಳ

ಅನುಭವವನ್ನು ನಾವು ನಮ್ಮದಾಗಿಸಿಕೊಳ್ಳಲು ಸಾಧ್ಯ; ಕಣ್ಣಿನ ಮೂಲಕ ಚಿತ್ರ, ವಾಸ್ತು, ಶಿಲ್ಪ ಇವುಗಳನ್ನು; ಕಿವಿಯ ಮೂಲಕ ಸಂಗೀತ-ಕಾವ್ಯಗಳಂತಹ (ಕಾವ್ಯ ಮೂಲತಃ - ಬರವಣಿಗೆ ಬಾರದುದಕ್ಕಿಂತ ಮುಂಚೆ - ಕಿವಿಯ ಮೂಲಕವೇ ಅನುಭವವೇದ್ಯ ವಾಗುತ್ತಿದ್ದುದು) ಕಲೆಗಳು ಮುದ ನೀಡುವುದು. ಹೀಗಾಗಿ ಕಲೆ ಎಂದರೆ ಇವೆರಡೂ ಇಂದ್ರಿಯಗಳಲ್ಲಿ ಒಂದು ಮುಖ್ಯವಾಗುತ್ತದೆ. ನಾಯಿಯಂತಹ ಪ್ರಾಣಿಗಳಲ್ಲಿ ವಾಸನೆ ಎಷ್ಟು ತೀವ್ರವಾಗಿರುತ್ತದೆಂದರೆ ನೂರಾರು ಬಗೆಯ ವಾಸನೆಗಳನ್ನು ಗುರುತಿಸುವಷ್ಟು ಅವುಗಳ ಮೂಗು ಚುರುಕಾಗಿರುತ್ತದೆ.

ಚರ್ಮದ ಅನುಭವ ಮತ್ತೊಂದು ಬಗೆಯದು. ಕಣ್ಣಿಗೆ ಅಂದವಾಗಿ ಕಂಡುದನ್ನು, ನುಣುಪು ಎನಿಸಿದುದನ್ನು ಕೈ ಸ್ಪರ್ಶಿಸಿ ಅನುಭವಕ್ಕೆ ತಂದುಕೊಳ್ಳಲು ಮುಂದಾಗುತ್ತದೆ. ಸ್ಪರ್ಶಿಸುವ ರೀತಿಯಲ್ಲಿಯೇ ನಮ್ಮ ಮನಸ್ಸಿನ ಅನಿಸಿಕೆಯನ್ನೂ ನಾವು ಅದೆಷ್ಟು ವಿಧದಲ್ಲಿ ವ್ಯಕ್ತಪಡಿಸುತ್ತೇವೆ! ಮಗು ತಾಯಿಯ ಅಪ್ಪುಗೆಯಲ್ಲಿ ಅದೆಂತಹ ಸುಖ ಅನುಭವಿಸುತ್ತದೆ, ಬಾಟಲಿಯಿಂದಲೋ ಒಳಲೆಯ ಮೂಲಕವೋ ಹಾಲು ಕುಡಿಯುವುವುದರ ಬದಲು ತಾಯ ಮೊಲೆಗೆ ಬಾಯಿಟ್ಟು ಚೀಪುವಾಗ ಅದು ಪಡೆಯುವ ನೆಮ್ಮದಿಯೆಂಥದು! ತರುಣ ತರುಣಿಯರು ಪರಸ್ಪರರ ಸೋಂಕಿನಲ್ಲಿ ಮೈಮರೆಯುವುದು ನಮ್ಮ ಅನುಭವವೇ ಅಲ್ಲವೇ? ಯುವತಿ ಯುವಕರು ಪರಸ್ಪರರು ಅಕಸ್ಮಾತ್ ಮುಟ್ಟಿದಾಗಲೂ ಮೈಯಲ್ಲಿ "ವಿದ್ಯುತ್ ಸಂಚಾರವಾದಂತಾಯಿತು" ಎಂದು ವರ್ಣಿಸುವುದನ್ನು ನಾವೆಲ್ಲ ಕಾದಂಬರಿಗಳಲ್ಲಿ ಓದಿದ್ದೇವೆ. ತೀರ ಚಿಕ್ಕ ವಯಸ್ಸಿನಲ್ಲಿ ಅದು ಅರ್ಥವಾಗದಿದ್ದರೂ ಬರಬರುತ್ತ ಅದು ನಮ್ಮದೇ ಅನುಭವ ವಾಗಿರಲಿಲ್ಲವೇ? ವಯಸ್ಸಾದಂತೆ ಇಂತಹ ವಿದ್ಯುತ್ ಸಂಚಾರದ ಅನುಭವ ಮತ್ತು ಅದರ ತೀವ್ರತೆ ಕಡಿಮೆಯಾದರೂ ನಮ್ಮ ಸ್ಪರ್ಶಸುಖದ ಸವಿ ಮಾತ್ರ ಹೋಗು ವುದಿಲ್ಲ. ಮಕ್ಕಳನ್ನು ಕಂಡಾಗ ಅದರ ಕೆನ್ನೆ ನೇವರಿಸಬೇಕೆನ್ನಿಸುವುದಿಲ್ಲವೇ? ನಮ್ಮ ಮಕ್ಕಳನ್ನು ಮೊಮ್ಮಕ್ಕಳನ್ನು ತೊಡೆಯ ಮೇಲೆ ಕೂರಿಸಿಕೊಂಡು ಅವುಗಳ ಮೈದಡವುತ್ತ, ತಲೆ ನೇವರಿಸುತ್ತ ನಾವು ಪಡೆಯುವ ಆನಂದ ಎಂತಹುದು! ಅವುಗಳನ್ನು ಅಪ್ಪಿ ಮುದ್ದಾಡುವಾಗ ಅವುಗಳಿಗೆ ಹಿಂಸೆಯಾಗಿ ಅತ್ತರೂ ನಾವು ಆ ಸುಖ ಕಳೆದುಕೊಳ್ಳಲು ಸಿದ್ಧವಾಗುವುದಿಲ್ಲವಲ್ಲ. ಹೀಗಾಗಿ ಚರ್ಮದ ಮೂಲಕ ಅಂದರೆ ಸೋಂಕಿನ ಮೂಲಕ ಪಡೆಯುವ ಸುಖ ಮಿಕ್ಕ ಇಂದ್ರಿಯ ಸುಖಗಳಿಗಿಂತ ಮಿಗಿಲು ಎನಿಸಿಬಿಡುತ್ತದೆ.

ಸ್ಪರ್ಶಕ್ಕೆ ಮತ್ತೊಂದು ಬಗೆಯ ವೈಶಿಷ್ಟ್ಯವೂ ಇದೆಯೆಂದು ರಾಘವಾಂಕನ 'ಹರಿಶ್ಚಂದ್ರ ಕಾವ್ಯ' ಚಿತ್ರಿಸುತ್ತದೆ. ಪಣತೊಟ್ಟ ವಿಶ್ವಾಮಿತ್ರ ಋಷಿ ಹರಿಶ್ಚಂದ್ರನಿಂದ ಸುಳ್ಳು ಹೇಳಿಸಲು ಮಾಡುವ ಮೊದಲ ಪ್ರಯತ್ನ ಎಂದರೆ ಒಂದು ಮುಳ್ಳು ಹಂದಿಯನ್ನು ಸೃಷ್ಟಿಸಿ ಅದಕ್ಕಿ ಹೇಗಾದರೂ ಮಾಡಿ ಬೇಟೆಗೆ ಬಂದಿರುವ ಹರಿಶ್ಚಂದ್ರನನ್ನು ತನ್ನ ಆಶ್ರಮ ಪ್ರದೇಶಕ್ಕೆ ಬರುವಂತೆ ಮಾಡಲು ಆದೇಶಿಸುವುದು.

ಅದು ಕೈಗೆ ಸಿಕ್ಕಿದಂತೆ ಮಾಡಿ ದೂರದೂರ ಹೋಗುತ್ತ ಕೊನೆಗೂ ರಾಜನನ್ನು ವಿಶ್ವಾಮಿತ್ರನ ಆಶ್ರಮದ ವ್ಯಾಪ್ತಿಗೆ ಕರೆತರುತ್ತದೆ; ರಾಜನ ಬಾಣದ ಹೊಡೆತಕ್ಕೆ ಸಿಕ್ಕಿ ಋಷಿಯ ಬಳಿ ಬರುತ್ತದೆ. ಆಗ ವಿಶ್ವಾಮಿತ್ರ ಕೋಪದಿಂದ ಹೂಂಕರಿಸುತ್ತಾನೆ; ಅದರಿಂದ ಇಬ್ಬರು ಯುವತಿಯರು ಮೂಡುತ್ತಾರೆ; ಕೋಪ ಮತ್ತು ಅನಿಮಿತ್ತ ವೈರಗಳ ಕಾರಣದಿಂದ ಹುಟ್ಟಿದ್ದರಿಂದಾಗಿ ಅವರು ಹೊಲತಿಯರಾಗುತ್ತಾರೆ. ನಿಮಗೆ ತೋಚಿದ ರೀತಿಯಲ್ಲಿ ಹರಿಶ್ಚಂದ್ರನನ್ನು ಮರುಳುಮಾಡಿ ಎಂದು ಋಷಿ ಅವರಿಗೆ ಆಜ್ಞೆ ನೀಡುತ್ತಾನೆ. ಅವರು ಬಂದು ರಾಜ ಮತ್ತವನ ಪರಿವಾರದ ಮುಂದೆ ಹಾಡಿ ನರ್ತಿಸಿ ಸಂತಸವೀಯುತ್ತಾರೆ. ರಾಜ ಮುದಗೊಂಡು ತಾನು ಹಾಕಿಕೊಂಡಿದ್ದ ಒಡವೆಗಳನ್ನೇ ಅವರಿಗೆ ಇನಾಮು ಕೊಡುತ್ತಾನೆ. ಅದನ್ನು ನಿರಾಕರಿಸಿ ಯುವತಿಯರು ಮೊದಲು 'ಮುತ್ತಿನ ಸತ್ತಿಗೆ'ಯನ್ನು ಬೇಡಿ, ಆನಂತರ ತಮ್ಮನ್ನು ಮದುವೆ ಯಾಗುವಂತೆ ಕೇಳಿಕೊಳ್ಳುತ್ತಾರೆ. ತನ್ನ ಇಕ್ಷ್ವಾಕು ವಂಶದ ಬಗ್ಗೆ ಅಪಾರ ಹೆಮ್ಮೆ ತಾಳಿದ್ದ ಹರಿಶ್ಚಂದ್ರನಿಗೆ ಇದರಿಂದ ಕೋಪ ಬರುತ್ತದೆ; ತನ್ನಂತಹವನನ್ನು ಮದುವೆ ಯಾಗಲು ಹೊಲತಿಯರು ಕೇಳುವುದು 'ಸಂದ ಕಾಲಗುಣವೋ, ನಿಂದ ನೆಲದ ಗುಣವೋ' ಎಂದು ಅಚ್ಚರಿ ವ್ಯಕ್ತಪಡಿಸುತ್ತಾನೆ. ಅಷ್ಟಕ್ಕೆ ಸುಮ್ಮನಿರದ ಯುವತಿಯರು, ತಮ್ಮ ಹಾಡನ್ನು ಕೇಳಿದ ಕಿವಿಗೆ, ತಮ್ಮ ಚೆಲುವನ್ನು ಹಾಗೂ ನಾಟ್ಯವನ್ನು ನೋಡಿ ಸವಿದ ಕಣ್ಣಿಗೆ, ತಮ್ಮನ್ನು ಹೊಗಳಿದ ನಾಲಗೆಗೆ, ತಾವು ಲೇಪಿಸಿಕೊಂಡಿದ್ದ ಸುಗಂಧವನ್ನು ಮೂಸಿಸಿದ ಮೂಗಿಗೆ ಇಲ್ಲದ ಹೊಲೆ ತಮ್ಮನ್ನು ಮುಟ್ಟುವ ಚರ್ಮಕ್ಕೆ ಮಾತ್ರ ಅಂಟುವುದೇ – "ಸಂದ ಪಂಚೇಂದ್ರಿಯಂಗಳೊಳು ನಾಲ್ಕಧಮ ಒಂದಧಿಕವೇ?" ಎಂದು ಪ್ರಶ್ನಿಸುತ್ತಾರೆ. ರಾಜ ಹೌದು ಎನ್ನುತ್ತಾನೆ: ಬೆಂಕಿ ಉರಿಯು ತ್ತಿದ್ದಾಗ ಅದನ್ನು ನೋಡಿದರೆ, ಅದರ ಕಿಮುಟು ವಾಸನೆ ಮೂಗಿಗೆ ತಾಗಿದರೆ, ಅದರ ಉರಿಯುವಾಗಿನ ಚಿಟಿಪಿಟಿ ಸದ್ದು ಕೇಳಿದರೆ ಏನೂ ಆಗದುದು ಅದನ್ನು ಮುಟ್ಟಿದಾಗ ಮಾತ್ರ ಗಾಸಿ ಮಾಡುತ್ತದೆ; ಹಾಗೆಯೇ ಜಾತಿಯ ರೀತಿಯೂ ಎಂದು ವಾದಿಸುತ್ತಾನೆ. ಈ ವಾದವನ್ನು ನಾವು ಒಪ್ಪದಿರಬಹುದು, ಆದರೆ ಚರ್ಮಕ್ಕೆ ಬೇರೆ ಇಂದ್ರಿಯ ಗಳಿಗಿಂತ, ಮಿಗಿಲಾದ ಎನ್ನದಿದ್ದರೆ ಬೇಡ, ಭಿನ್ನವಾದ ಸಂವೇದನಾಸ್ವರೂಪ ವಿದೆಯೆಂಬುದು ನಿಜ ತಾನೇ. ಸ್ಪರ್ಶ ಎನ್ನುವುದು ಜನರನ್ನು ಹೆಚ್ಚು ಹತ್ತಿರ ತರುವುದು ಎಂಬ ಅಂಶವಂತೂ ನಿಜ.

☆ – ☆ – ☆

# ವ್ಯಕ್ತಿ ಪ್ರತಿರೂಪ

'ವಸ್ತು ಪ್ರತಿರೂಪ' ಎಂಬುದು ಕಾವ್ಯ ವಿಮರ್ಶೆಯಲ್ಲಿನ ಒಂದು ಪರಿಕಲ್ಪನೆ; ಟಿ. ಎಸ್. ಎಲಿಯಟ್ ಎಂಬ ಇಂಗ್ಲಿಷ್ ಕವಿಯ ಸೃಷ್ಟಿಯಾದ 'objective correllative' ಎಂಬುದರ ಕನ್ನಡ ಅನುವಾದ. ಕವಿಯಾದವನು ತನ್ನ ಅಮೂರ್ತ ಅನುಭವಗಳನ್ನು ದೈನಂದಿನ ಭಾಷೆಯಲ್ಲಿ ಕಟ್ಟಿಕೊಡಲಾರ, ಹಾಗಾಗಿ ಅವನು ಅವುಗಳನ್ನು ಒಡಲಲ್ಲಿಟ್ಟುಕೊಂಡ ಪ್ರತಿಮೆಗಳನ್ನು ಸೃಷ್ಟಿಸುತ್ತಾನೆ; ಅವುಗಳು ಹೊರಗೆ ಕಾಣುವದಷ್ಟನ್ನಲ್ಲದೆ ಬೇರೇನನ್ನೋ ಹೇಳುತ್ತವೆ ಎಂಬುದೇ ಈ ಪರಿಕಲ್ಪನೆಯ ಸ್ಥೂಲ ವಿವರಣೆ. ಇದನ್ನೇ ಬೇಕಾದರೆ ಒಳ ಅರ್ಥ ಎಂದು ಕರೆಯಬಹುದು. ಕಾಲಾನು ಕಾಲಕ್ಕೆ ಇವೂ ಬಳಕೆಗೊಂಡು ಶಕ್ತಿಹೀನವಾಗಿ ಪ್ರತಿಭಾವಂತ ಕವಿ ಹೊಸ ಹೊಸ ಪ್ರತಿಮೆಗಳನ್ನು ಸೃಷ್ಟಿಸುತ್ತಾನೆ. ಬರಿ ವಸ್ತುಗಳು ಮಾತ್ರವಲ್ಲ, ವ್ಯಕ್ತಿಗಳೂ ಹೀಗೆಯೇ ವ್ಯಕ್ತಿಗಳನ್ನು ಅಥವಾ ಪಾತ್ರಗಳನ್ನು (ಬದುಕಿನಲ್ಲಿನ ವಾಸ್ತವ ಜನರು ವ್ಯಕ್ತಿಗಳು, ಕಾವ್ಯದಲ್ಲಿನ ಅವರ ಪ್ರತಿನಿಧಿಗಳು ಪಾತ್ರಗಳು) ಮಾತ್ರ ಸೂಚಿಸದೆ ಅಮೂರ್ತ ವಿಷಯಗಳನ್ನು ತಮ್ಮಲ್ಲಿ ಹಿಡಿದಿಟ್ಟಿಕೊಂಡಿರುತ್ತವೆ.

ನಮ್ಮ ಪುರಾಣಗಳ ಅಥವಾ ಪ್ರಸಿದ್ಧ ಪಾತ್ರಗಳನ್ನು ನೆನಪಿಸಿಕೊಳ್ಳಿ: ರಾಮ, ಕೃಷ್ಣ, ಭೀಷ್ಮ, ದುರ್ಯೋಧನ – ಇಂತಹವುಗಳು; ಅಥವಾ ರಾಕ್ಷಸ, ದೇವತೆ, ಅಪ್ಸರೆ ಮುಂತಾದ ವರ್ಗಗಳು. ಇವು ಕೇವಲ ಆಯಾ ಪಾತ್ರಗಳನ್ನು ಮಾತ್ರ ಸೂಚಿಸು ವುದಿಲ್ಲ. ಕವಿಯ ಮನಸ್ಸನ್ನು ಎಲಿಯಟ್‌ನೇ ಒಂದು ಮೂಷೆಗೆ ಹೋಲಿಸುತ್ತಾನೆ; ಮೂಷೆಯಲ್ಲಿ ಹೇಗೆ ನಾನಾ ವಸ್ತುಗಳು ಸೇರಿ ಹೊಸ ವಸ್ತು ಮೂಡುತ್ತದೆಯೋ ಹಾಗೆ ಕವಿಯ ಮನಸ್ಸಿನಲ್ಲಿರುವ ಎಲ್ಲ ನೆನಪುಗಳು ಸಂದರ್ಭಕ್ಕೆ ಅನುಗುಣವಾಗಿ ಮಿಳಿತಗೊಂಡು ಕಾವ್ಯವಾಗುತ್ತದೆ ಎಂಬುದು ಅವನ ವಿವರಣೆ. ಹೇಗೆ ರಾಸಾಯನಿಕ ಕ್ರಿಯೆ ನಡೆಯುವುದು ಆಸಿಡ್‌ನಂತಹ ವಸ್ತುವಿನಿಂದಲೋ ಹಾಗೆಯೇ ಈ ಮಿಳಿತ ಕ್ರಿಯೆ ನಡೆಯುವುದು ಕವಿಯ ಪ್ರತಿಭೆಯಿಂದ ರಾಸಾಯನಿಕ ಕ್ರಿಯೆಗೊಳಗಾಗುವ ವಸ್ತುಗಳು ತಮ್ಮ ಪೂರ್ವ ಗುಣಲಕ್ಷಣಗಳನ್ನು ಕಳೆದುಕೊಂಡು ಹೊಸ ವಸ್ತುವಿನ ನಿರ್ಮಾಣಕ್ಕಾಗಿ ಇಲ್ಲವಾಗುತ್ತವೋ ಹಾಗೆಯೇ ಕವಿಯ ಎಲ್ಲ ಸ್ವಂತ ಅನುಭವಗಳೂ ತಮ್ಮ ಸ್ವಂತಿಕೆಯನ್ನು ಕಳೆದುಕೊಂಡು ಕಾವ್ಯವಸ್ತುವಾಗುತ್ತವೆ. ಹೀಗಾಗಿಯೇ ಅವು

ಎಲ್ಲರಿಗೂ ಅನ್ವಯವಾಗುವಂತಹ ರೀತಿಯಲ್ಲಿರುವುದು. ಜೀವನದಲ್ಲಿನ ಹಾಗೆಯೇ ಕಾವ್ಯದಲ್ಲಿ ಅನುಭವಗಳು ನಿರೂಪಿತವಾಗಿದ್ದರೂ, ಜೀವನದಲ್ಲಿ ಅವು ವ್ಯಕ್ತಿಗೆ ಮಾತ್ರ ಅಥವಾ ಅವನ ವೈಯಕ್ತಿಕತೆಗೆ ಅನುಗುಣವಾಗಿ ನಡೆದರೆ, ಕಾವ್ಯದಲ್ಲಿ ಅವು ಓದುಗ ರೆಲ್ಲರಿಗೂ ಅನ್ವಯಿಸುತ್ತವೆ. ಇದಕ್ಕನುಗುಣವಾಗಿ ಜೀವನದಲ್ಲಿ ಕವಿ ಕಂಡಿರಬಹು ದಾದ ಹಲವಾರು ವ್ಯಕ್ತಿಗಳ ಹಾಗೂ ಉಂಡಿರಬಹುದಾದ ಹಲವು ನೋವುನಲಿವುಗಳ ಪಾಕವಾಗಿ ಕಾವ್ಯದಲ್ಲಿನ ಪಾತ್ರ-ಸನ್ನಿವೇಶಗಳು ರೂಪುವಡೆಯುತ್ತವೆ. ಆದ್ದರಿಂದಲೇ ವ್ಯಕ್ತಿಗಳು ಪಾತ್ರವಾಗುವುದು. ಅಂದರೆ ದುರ್ಯೋಧನ ಒಬ್ಬ ವ್ಯಕ್ತಿಯಲ್ಲ; ಮೇಲೆ ವಿವರಿಸಿದ ಕವಿ ಪ್ರತಿಭೆಯಲ್ಲಿ ರೂಪುಗೊಂಡ ಒಂದು ಜೀವನರೀತಿಯ ಪಾಕ. ಅಂದರೆ ಅವನು ಒಂದು ವಸ್ತುಪ್ರತಿರೂಪವೇ; ತನ್ನ ಪ್ರತಿಭೆ ರೂಪಿಸಿಕೊಂಡ ವ್ಯಕ್ತಿತ್ವದ ಬಗೆಯೊಂದನ್ನು ಕವಿಯು ಈ ಮೂಲಕ ವ್ಯಕ್ತಪಡಿಸುತ್ತಾನೆ. ಹಾಗಾಗಿಯೇ ಒಂದೇ ಕತೆಯ ಹಂದರವು ಬೇರೆ ಬೇರೆ ಕವಿಗಳಲ್ಲಿ ಬೇರೇಯವೇ ಕಾವ್ಯಗಳಾಗುತ್ತವೆ. ಕನ್ನಡದ್ದೇ ಉದಾಹರಣೆ ಕೊಡುವುದಾದರೆ, ವ್ಯಾಸಭಾರತವನ್ನೇ ಅನುಸರಿಸಿ ಬರೆದ ಪಂಪ ಮತ್ತು ಕುಮಾರವ್ಯಾಸರ ಕಾವ್ಯಗಳು ಭಿನ್ನ ಕಾವ್ಯಗಳಾಗಿರುವುದು ಹೀಗೆಯೇ. ಪಂಪನ ದುರ್ಯೋಧನ ಮತ್ತು ಕುಮಾರವ್ಯಾಸ ಭಾರತದ ದುರ್ಯೋಧನ ಇಬ್ಬರೂ ಒಂದೇ ಬಗೆಯ ಸನ್ನಿವೇಶಗಳಲ್ಲಿ ಭಾಗಿಯಾದರೂ ಅವರಿಬ್ಬರೂ ಪ್ರತಿನಿಧಿಸುವುದು ಭಿನ್ನ ಅನುಭವಗಳನ್ನೇ. ಪಂಪ ತನ್ನ ಕಾವ್ಯದ ಕೊನೆಯಲ್ಲಿ "ಛಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ.... ನಿರ್ಮಲ ಚಿತ್ತದೊಳ್ ಧರ್ಮಪುತ್ರಂ" ಎಂದು ಹೇಳಿ ಇವರಿಂದ ಭಾರತಕಾವ್ಯವು ಲೋಕ ಪೂಜ್ಯವಾಗಿದೆ ಎನ್ನುತ್ತಾನೆ. ಈ ಕವಿ ತನ್ನ ಕಾವ್ಯದ ಪ್ರತಿಯೊಂದು ಮುಖ್ಯಪಾತ್ರ ವನ್ನೂ ತನ್ನ ಕಾಲದ ಪ್ರಮುಖ ಜೀವನಮೌಲ್ಯದ ಪ್ರತೀಕವಾಗಿ ಕಂಡರಸಿದ್ದಾನೆ. ಅಂದರೆ ಇಲ್ಲಿನ ದುರ್ಯೋಧನ 'ಛಲ'ದ ಪ್ರತೀಕ, ಅದೂ ಲೋಕಪೂಜ್ಯವಾಗಬಲ್ಲ ಛಲದ ಪ್ರತೀಕ. ಅದೇ ದುರ್ಯೋಧನ ಕುಮಾರವ್ಯಾಸನಲ್ಲಿ "ಕೃಷ್ಣನ ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲ" ಎಂದು ನಂಬಿದ ಭಾಗವತಪ್ರಜ್ಞೆಯ ಪ್ರತೀಕ.

ಇದಕ್ಕೆ ಹೋಲಿಕೆಯಿರುವಂಥದಾದರೂ ಭಿನ್ನವಾದುದು ಪೌರಾಣಿಕೀಕರಣ ಗೊಂಡ ಐತಿಹಾಸಿಕ ವ್ಯಕ್ತಿಗಳು. ಉದಾಹರಣೆಗೆ ಏಸುಕ್ರಿಸ್ತ, ಬುದ್ಧ, ಬಸವ, ಗಾಂಧಿ ಮುಂತಾದವರನ್ನು ತೆಗೆದುಕೊಳ್ಳಿ. ಅವರೆಲ್ಲ ನಮ್ಮನಿಮ್ಮಂತೆಯೇ ರಕ್ತಮಾಂಸಗಳಿಂದ ಕೂಡಿದ್ದ ವ್ಯಕ್ತಿಗಳೇ; ಹಾಗೆಯೇ ನಮ್ಮ ಹಾಗೆ ರಾಗದ್ವೇಷದಿಂದ ಕೂಡಿದವರೇ. ಆದರೆ ಅವರು ಸಾಮಾನ್ಯ ಜನರು ಸಾಧಿಸದದೇನನ್ನೋ ಸಾಧಿಸಿದರು; ಅದಕ್ಕೇ ಅವರ ಬಗ್ಗೆ ಭಕ್ತಿ-ಗೌರವಗಳನ್ನಿರಿಸಿಕೊಂಡ ಮುಂದಿನವರು ಅವರನ್ನು ಅತಿಮಾನುಷರೆಂಬಂತೆ ಚಿತ್ರಿಸಿದರು. ಪ್ರಾಯಶಃ ಇಂತಹ ಒಬ್ಬ ವ್ಯಕ್ತಿಯು ಮಾಡಿದ ಪ್ರಭಾವಕ್ಕನುಗುಣವಾಗಿ ಅವನ ಬಗೆಗಿನ ಪೌರಾಣಿಕೀಕರಣ ಗಾಢವಾಗುತ್ತ ಹೋಗುತ್ತದೆ; ಹಾಗೆಯೇ ಕಾಲ ಸರಿದಂತೆಲ್ಲ ಅವರ ಬಗೆಗಿನ ಅತಿಮಾನುಷತೆ ಹೆಚ್ಚಾಗುವಂತೆ ತೋರುತ್ತದೆ.

ಯಾಕೆಂದರೆ ಹಿಂದಿನ ಅತಿಮಾನುಷತೆಗೆ ತಮ್ಮದೇ ಕಲ್ಪನೆಗಳನ್ನು ಮುಂದಿನವರು ಸೇರಿಸುತ್ತ ಹೋಗುತ್ತಾರೆ. ನನಗೆ ಪ್ರಿಯನಾದ ಬಸವಣ್ಣನ ಬಗ್ಗೆ ಇಂತಹ ಕುತೂಹಲ. ಅವನಿಗೆ ಕಾಲದಲ್ಲಿ ತುಂಬ ಹತ್ತಿರದಲ್ಲಿದ್ದ ಹರಿಹರನೆಂಬ ಕವಿ ಬಸವಣ್ಣನನ್ನು ಕುರಿತು ಬರೆದ ಕಾವ್ಯದಲ್ಲಿ ಬಸವನ ಬಗ್ಗೆ ಮಾಡಿದ್ದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಮುಂದಿನವರು ಅತಿಮಾನುಷಗೊಳಿಸಿರುವುದನ್ನು ಕಾಣಬಹುದು. ಹರಿಹರನಲ್ಲಿ ಬೆರಳೆಣಿಕೆಯಷ್ಟಿದ್ದ ಬಸವಣ್ಣನ ಬಗೆಗಿನ ಪವಾಡಗಳ ಸಂಖ್ಯೆ ಹಾಗೂ ಅವುಗಳ ಗಾಢತೆ ಬರಬರುತ್ತ ಹೆಚ್ಚಾಗಿರುವುದನ್ನು ಕಾಣಬಹುದು. ಇದು ಎಲ್ಲ ಧಾರ್ಮಿಕ ನಾಯಕರ ಬಗೆಗೂ ಹೇಳಬಹುದಾದ ಮಾತುಗಳು. ಅಲ್ಲದೆ ಆ ಪವಾಡಗಳು ಮನುಷ್ಯನ ಅನುದಿನದ ಸಮಸ್ಯೆಗಳಾದ ಹಸಿವು, ರೋಗ, ಸಾವುಗಳ ಬಗೆಗಿನವೇ ಆಗಿರುವುದೂ ಸಾಮಾನ್ಯ. ನಮಗಿಂತ ಒಂದೆರಡು ತಲೆಮಾರುಗಳಷ್ಟು ಮಾತ್ರ ಹಿಂದಿದ್ದ ವಿಶ್ವೇಶ್ವರಯ್ಯ, ಗಾಂಧಿ ಇಂತಹವರ ಬಗೆಗೆ ಈಗಾಗಲೇ ಪವಾಡಸದೃಶ ಕತೆಗಳು ಹುಟ್ಟಿಕೊಂಡಿಲ್ಲವೇ? ಅವರೆಲ್ಲ ನಮ್ಮನಿಮ್ಮಂತೆಯೇ ಎಲ್ಲ ಮನುಷ್ಯಸಹಜ ಗುಣದೋಷಗಳಿಂದ ಕೂಡಿದ್ದವರೇ. ಆದರೆ ಭಾವುಕರಿಗೆ ಬರಬರುತ್ತ ಅವರು ದೊಷರಹಿತರಾಗಿ ಮಾತ್ರವಲ್ಲ ದೋಷನಿವಾರಕರಾಗಿ ಕಾಣಿಸುತ್ತಾರೆ. ನಮ್ಮಲ್ಲಿರುವ ದೋಷಗಳಂತಹವು ಅವರಲ್ಲಿಯೂ ಇದ್ದುವೆಂದು ನೀವೇನಾದರೂ ಆಧಾರವಿರಿಸಿ ಕೊಂಡು ವಾದಮಾಡಿದರೂ ಜನವಿರೋಧವನ್ನೆದುರಿಸಬೇಕಾದೀತು. ಜನರಿಗೆ ಅವರು ತಮ್ಮ ನಂಬಿಕೆಯ ಪ್ರತೀಕಗಳೇ ಹೊರತು ವ್ಯಕ್ತಿಗಳಲ್ಲ; ಅಂದರೆ ಅವರೆಲ್ಲ ಮಾನುಷತೆ ಯನ್ನು ಕಳೆದುಕೊಂಡು, ಮಿತಿಗಳನ್ನು ಮೀರಿ ಜನಮನದಲ್ಲಿ ಕಲ್ಪನೆಗಳಾಗಿರುತ್ತಾರೆ. ಕಾವ್ಯದಲ್ಲಿ ಕವಿಯ ಅಮೂರ್ತ ಅನುಭವಗಳು ಮೂರ್ತರೂಪ ಧರಿಸಿ ಪಾತ್ರಗಳಾ ದರೆ, ಧಾರ್ಮಿಕ ನಂಬಿಕೆಯಲ್ಲಿ ಮೂರ್ತ ವ್ಯಕ್ತಿಗಳು ಮೂರ್ತತೆಯನ್ನು ಕಳೆದು ಕೊಂಡು ಅಮೂರ್ತ ಕಲ್ಪನೆಗಳಾಗುತ್ತಾರೆ. ಹೀಗಾಗಿ ಇವರನ್ನು ವ್ಯಕ್ತಿ ಪ್ರತಿರೂಪ ಗಳೆಂದು ಕರೆಯಬಹುದೇನೋ. ಕವಿಯ ಪ್ರತಿಭಾ ಮೂಷೆಯಲ್ಲಿ ವಿವಿಧಾನುಭವಗಳು ರಾಸಾಯನಿಕ ಕ್ರಿಯೆಗಳಂತೆ ಮಿಳಿತಗೊಂಡು ವಸ್ತುಪ್ರತಿರೂಪಗಳು ನಿರ್ಮಾಣ ಗೊಂಡರೆ, ನಿಜ ವ್ಯಕ್ತಿಗಳು ಜನಸಮುದಾಯದ ಗೌರವನಂಬಿಕೆಗಳ ಕ್ರೋಡೀಕರಣದ ಕಾರಣದಿಂದ ಅಮೂರ್ತ ಕಲ್ಪನೆಗಳಾಗಿ ಉಳಿಯುತ್ತಾರೆ.

☆ – ☆ – ☆



# ಅನಿಸಿಕೆ-ಅನುಭವ

'ಅಂಕಣ'ಗಳನ್ನು ಹೊಂದದ ಪತ್ರಿಕೆಯಿಲ್ಲ; ದಿನಪತ್ರಿಕೆಯಾಗಲೀ ವಾರಪತ್ರಿಕೆಯಾಗಲೀ ಅನೇಕ ಅಂಕಣಗಳು ರಾರಾಜಿಸುತ್ತವೆ. ಏಕೆಂದರೆ ಅವು ಹಾರಿಹೋಗುವ ಹಕ್ಕಿಗಳಂತೆ ಆವರಿಸುವ ಹೊಳಹುಗಳು. ಅಂಕಣ ಬರಹಗಳೆಂದರೆ ಹರಿಯುವ ಝರಿಯಂತಲ್ಲ, ಸಿಡಿಯುವ ತುಂತುರುಗಳಂತೆ; ಅಲ್ಲಿಯ ಆಲೋಚನೆಗಳು ಒಂದು ಕ್ಷಣದಲ್ಲಿ ಮಿಂಚಿ ಮೈದಾಳುವಂಥವು. ಪ್ರತಿಯೊಂದು ಅಂಕಣ ಬರಹಕ್ಕೆ ಸ್ವತಂತ್ರ ಅಸ್ತಿತ್ವ ಇರುವುದಾದರೂ ಅವುಗಳ ಹಿಂದೆ ಒಂದೇ ಮನಸ್ಸು ತುಡಿಯುತ್ತಿರುತ್ತದೆ. ಸಾಕಷ್ಟು ದೀರ್ಘ ಕಾಲ ರಚಿತವಾದ ಯಾವೊಬ್ಬ ಲೇಖಕನ ಅಂಕಣಗಳ ಹಿಂದೆ ಒಂದು ಮನೋಭಾವ ಕಾರ್ಯಶೀಲವಾಗಿರುತ್ತದೆ; ಒಳಹೊಕ್ಕು ನೋಡಿದರೆ ಅವುಗಳು ಬಿಡಿ ಹೂಗಳನ್ನು ಪೋಣಿಸಿದ ಹಾರದಂತೆ, ಒಂದು ಮನಃಸ್ಥಿತಿ ಅವನ್ನೆಲ್ಲ ಬಂಧಿಸಿರುತ್ತದೆ. ಆಯಾ ಕ್ಷಣದಲ್ಲಿ ರೂಪುಗೊಳ್ಳುವ ಅಂಕಣ ಬರಹವು ತತ್‌ಕ್ಷಣಕ್ಕೆ ಲೇಖಕನ ಮನಸ್ಸು ತುಡಿಯುವ ಬಗೆಯನ್ನು ಹಿಡಿದಿಡುತ್ತದೆ. ಹೀಗಾಗಿ ಅವಕ್ಕೆ ತಮ್ಮದೇ ಆದ ಮಹತ್ವವಿದೆ. ಚೆಲ್ಲಿ ಹೋದ ಕಾಳನ್ನು ಒಂದೆಡೆ ಆಯ್ದು ಸೇರಿಸುವ ಪ್ರಯತ್ನ ಪ್ರಸ್ತುತ ಪುಸ್ತಕ. ಅಂಕಣ ಲೇಖನ ಬರಹಗಾರನಿಗೆ ಶಿಸ್ತನ್ನೂ ಕಲಿಸುತ್ತದೆ; ಚೆದುರಿಹೋಗುವ ಆಲೋಚನೆಗಳನ್ನು ಹಿಡಿದಿಡುವುದೇ ಅಲ್ಲದೆ, ನಿಯತ ಕಾಲದಲ್ಲಿ ಅದಕ್ಕೊಂದು ರೂಪ ಕೊಡುವ ಮತ್ತು ನಿರ್ದಿಷ್ಟ ವ್ಯಾಪ್ತಿಯಲ್ಲಿ ಅದನ್ನು ಅಡಕಗೊಳಿಸುವ ಅಭ್ಯಾಸವನ್ನು ಕಲಿಸುತ್ತದೆ. ಹೀಗಾಗಿ ಲೇಖಕನ ದೃಷ್ಟಿಯಿಂದ ಮುಖ್ಯವಾದ ಇಂಥ ಬರಹಗಳು ತಮ್ಮ ಚಿಂತನಶೀಲತೆಯಿಂದ ಓದುಗನನ್ನೂ ಆಕರ್ಷಿಸಬಲ್ಲುದೆಂಬ ನಂಬಿಕೆಯಿದೆ.




ಸಪ್ನ ಬುಕ್ ಹೌಸ್

3ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು – 560 009

ದೂರವಾಣಿ : 40114455

Shop online : www.sapnaonline.com

ISBN : 978-81-280-2207-4




ಬೆಲೆ : ₹110/-